ಶ್ರೀ ಗುರು ಬಸವಲಿಂಗಾಯ ನಮಃ

ಶ್ರೀ

# ಬೂದೀಶ್ವರ ಲೀಲೆ

ಪ್ರಕಾಶಕರು :

ಶ್ರೀ ಮ. ನಿ. ಪ್ರ. ಪ್ರಭುಸ್ವಾಮಿಗಳು

ಬೂದೀಶ್ವರ ಸಂಸ್ಥಾನಮಠ,

ಹೊಸಹಳ್ಳಿ.

ಶ್ರೀ ಗುರು ಬಸವಲಿಂಗಾಯ ನಮಃ

ಶ್ರೀ

# ಬೂದೀಶ್ವರ ಲೀಲೆ

ಕವಿಗಳು :
ಕಲ್ಯಾಣಪ್ಪ ಬ್ಯಾಳಿ, ಹುನಗುಂದ

೧೯೭೨

ಪ್ರಕಾಶಕರು:
ಶ್ರೀ ಮ. ನಿ. ಪ್ರ. ಪ್ರಭುಸ್ವಾಮಿಗಳು
ಬೂದೀಶ್ವರ ಸಂಸ್ಥಾನಮಠ, ಹೊಸಹಳ್ಳಿ.
ಪೋ. ಹುಲಕೋಟಿ
ತಾ. ಗದಗ
ಜಿ. ಧಾರವಾಡ.



ಪ್ರಥಮ ಮುದ್ರಣ : ೧೦೦೦ ಪ್ರತಿಗಳು

**ಬೆಲೆ : ೧೦ ರೂಪಾಯಿಗಳು**

ಮುದ್ರಕರು:
ಪಂಡಿತ ನಾಗಭೂಷಣ ಶಾಸ್ತ್ರಿಗಳು
ಮಹಾಂತ ಮುದ್ರಣಾಲಯ,
ಮೃತ್ಯುಂಜಯ ನಗರ,
ಧಾರವಾಡ-೬



ಶಿವಯೋಗ ಸಿದ್ಧಿಯಿಂದ ೭೭೫ ವರುಷ ಬಾಳಿದ
ಬೂದೀಮಹಾಸ್ವಾಮಿಗಳವರು.

# ಪರಿವಿಡಿ

---


ನನ್ನ ನಾಲ್ಕು ಮಾತುಗಳು

ಪ್ರಸ್ತಾವನೆ

ಕಥಾಸಾರ ೧ ರಿಂದ ೯೫

| ಸಂಧಿ | ವಿಷಯ | ಪುಟ |
|---|---|---|
| ಪೀಠಿಕಾ ಸಂಧಿ : | ಮಂಗಲಾಚರಣ-ಕಥಾ ನಿರ್ದೇಶನ. | ೧ |
| ೧ನೆಯ ಸಂಧಿ : | ವ್ಯಕ್ತಿ ಚಿತ್ರ, ನಿತ್ಯಕ್ರಮ. | ೧೭ |
| ೨ನೆಯ ಸಂಧಿ : | ಅನುಭಾವ ಮಂಟಪ. | ೩೫ |
| ೩ನೆಯ ಸಂಧಿ : | ಉಳಿವೆ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಶ್ರೀಶೈಲ. | ೪೭ |
| ೪ನೆಯ ಸಂಧಿ : | ಗೊಬ್ಬೂರು, ಗೊಣ್ಣಾಗರ, ಹಿರಿಯಮೂಲಂಗಿ, ಗದ್ವಾಲ. | ೬೫ |
| ೫ನೆಯ ಸಂಧಿ : | ಕೋವಾನೂರು, ನೆರೆಯೂರು. ಪೋತನೂರು, ಕಂದಮಲಾಯಿ. | ೮೧ |
| ೬ನೆಯ ಸಂಧಿ : | ಪಾಲ್ಕುರಿಕೆ, ಪಿರಿಪಲ್ಲಿ. | ೧೦೧ |
| ೭ನೆಯ ಸಂಧಿ : | ಸಿಂಗರಪಲ್ಲಿ, ಸಿರಾಳಕೊಪ್ಪ, ಬೆಳವಾಣಿಮರಡಿ, ಸಾಗರದಡವಿ. | ೧೧೬ |
| ೮ನೆಯ ಸಂಧಿ : | ಯೋಗಮಹಿಮೆ, ಅನಂತಪೂರ. | ೧೩೧ |
| ೯ನೆಯ ಸಂಧಿ : | ಹಳ್ಯಾಳ, ಎಡ್ರಾವಿ, ಗುರ್ಲಹೊಸೂರ, ಉಪ್ಪಿನಬೆಟಗೇರಿ, ಗರಗ. | ೧೪೩ |
| ೧೦ನೆಯ ಸಂಧಿ : | ರೇಣುಕಾದ್ರಿ (ಎಲ್ಲಮ್ಮನ ಗುಡ್ಡ) | ೧೫೬ |
| ೧೧ನೆಯ ಸಂಧಿ : | ಬೆಂಗಳೂರು, ಸಿದ್ಧಗಂಗಾ, ಧಾರವಾಡ. | ೧೭೫ |

೧೨ನೆಯ ಸಂಧಿ : ಸಂಸಾರ-ಸನ್ಯಾಸ, ಶಿವಯೋಗಮಂದಿರ. ೧೮೮

೧೩ನೆಯ ಸಂಧಿ : ಶಿಶುನಾಳ, ಪುಲಿಗೆರೆ, ನವಿಲುಗುಂದ, ನರಗುಂದ. ೨೦೫

೧೪ನೆಯ ಸಂಧಿ : ರೋಣ, ನರೆಗಲ್ಲು, ಬಿಂಕದಕಟ್ಟಿ, ಅಸುಂಡಿ, ಹೊಂಬಳ, ಬ್ಯಾಹಟ್ಟಿ ೨೨೬

೧೫ನೆಯ ಸಂಧಿ : ಕರಮುಡಿ, ಕಿರೇಸೂರು, ಕಾಲುವೆಹಳ್ಳಿ, ಹುಬ್ಬಳ್ಳಿ. ೨೪೪

೧೬ನೆಯ ಸಂಧಿ : ಹರ್ತಿ. ಕಣವಿ. ಮುಳಗುಂದ, ಕೆಳದಿ, ಎಳವತ್ತಿ. ೨೬೪

೧೭ನೆಯ ಸಂಧಿ : ಲಿಂಗಭಕ್ತಿಯ ಮಹಿಮೆ. ೨೭೯

೧೮ನೆಯ ಸಂಧಿ : ಕುರ್ತಕೋಟಿ, ಸಿದ್ಧರಮಟ್ಟಿ (ಹೊಸಹಳ್ಳಿ). ೨೯೧

---



ಶ್ರೀ ಶಿವಯೋಗಮಂದಿರ ಮತ್ತು ಅಖಿಲಭಾರತ ವೀರಶೈವ ಮಹಾಸಭೆಯ ಸಂಸ್ಥಾಪಕರಾದ
ಪರಮಪೂಜ್ಯ ಲಿಂ. ಕುಮಾರಶಿವಯೋಗಿಗಳು ಹಾನಗಲ್ಲ.

# ಸಮರ್ಪಣೆ

ಅಖಿಲ ಭಾರತ ವೀರಶೈವ ಮಹಾಸಭೆಯ ಸಂಸ್ಥಾಪಕರು,

ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆಯ ಸಂಸ್ಥಾಪಕರು,

ಸಮಾಜೋದ್ಧಾರಕರು ಹಾಗೂ ಶಿವಯೋಗಸಂಪನ್ನರು

ಆದ

**ಪೂಜ್ಯ ಶ್ರೀ ಮ. ನಿ. ಪ್ರ. ಕುಮಾರ ಶಿವಯೋಗಿಗಳು**

**ಹಾನಗಲ್ಲ**

ಅವರಿಗೆ—

**ಈ " ಬೂದೀಶ್ವರ ಲೀಲೆ "**

ಭಕ್ತಿಪೂರ್ವಕ ಸಮರ್ಪಿತವಾಗಿದೆ.

— ಪ್ರಕಾಶಕರು.



ಕವಿ
ಕಲ್ಯಾಣಪ್ಪನವರು ಬ್ಯಾಳಿ, ಹುನಗುಂದ.

# ನನ್ನ ನಾಲ್ಕು ಮಾತುಗಳು

ಶಾಲಿವಾಹನ ಶಕ ೧೮೯೦ರಲ್ಲಿ ನಾನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಚನ ವಾಙ್ಮಯ ಶಾಖೆಯಲ್ಲಿ ಸಹಾಯಕ ಸಂಶೋಧಕನೆಂದು ಕೆಲಸ ಮಾಡುತ್ತಿದ್ದಾಗ ಧಾರವಾಡದ ಶ್ರೀ ಮುರುಘಾಮಠದಲ್ಲಿ ವಾಸವಾಗಿದ್ದೆನು. ಆಗ ಒಂದು ದಿನ ಹೊಸಹಳ್ಳಿ ಶ್ರೀ ಬೂದೀಶ್ವರ ಸಂಸ್ಥಾನ ಮಠಾಧ್ಯಕ್ಷರಾದ ಶ್ರೀ ಮ. ನಿ. ಪ್ರ. ಪ್ರಭುಸ್ವಾಮಿಗಳು ಧಾರವಾಡ ಮಠಕ್ಕೆ ಆಗಮಿಸಿದ್ದರು. ಅವರ ಮನಸ್ಸಿನಲ್ಲಿ ತಮ್ಮ ಮಠದ ಕರ್ತೃಗಳಾದ ಶ್ರೀ ಬೂದೀಶ್ವರ ಶಿವ ಯೋಗಿಗಳ ಪುರಾಣವನ್ನು ಬರೆಯಿಸಬೇಕೆಂಬ ಉತ್ಕಟೇಚ್ಛೆಯಿದ್ದಿತು. ಆದರೆ ಪುರಾಣ ಬರೆಯುವಂಥವರು ಆಗ ಕೆಲವು ಅನಿವಾರ್ಯ ಪ್ರಸಂಗಗಳ ಮೂಲಕ ಅವರಿಗೆ ದೊರೆತಿರಲಿಲ್ಲ. ಅವರು ಧಾರವಾಡ ಶ್ರೀ ಮುರುಘಾಮಠಾಧ್ಯಕ್ಷರಾದ ಶ್ರೀ ಮ. ನಿ. ಪ್ರ. ಮಹಾಂತಪ್ಪಗಳೊಡನೆ ಯಾರಿಂದ ಪುರಾಣವನ್ನು ಬರೆಯಿಸ ಬೇಕೆಂಬ ಬಗ್ಗೆ ಆಪ್ತಾಲೋಚನೆ ಮಾಡಿದರು. ಶ್ರೀ ಮಹಾಂತಪ್ಪಗಳು "ಇಲ್ಲಿಯೇ ನಮ್ಮ ಬ್ಯಾಳಿ ಮಾಸ್ತರ ಇದ್ದಾರೆ. ಅವರಿಗೆ ಬೂದೀಶ್ವರ ಪುರಾಣ ದಲ್ಲಿ ಕಾಣಿಸಬೇಕಾಗುವ ಚರಿತ್ರಾಂಶಗಳನ್ನು ಕೊಡಿರಿ. ಅವರು ಶ್ಲೋಕ ರೂಪದಿಂದ ಆ ಪುರಾಣವನ್ನು ರಚಿಸುತ್ತಾರೆ"ಂದು ಅಪ್ಪಣೆ ಕೊಡಿಸಿದರು.

ಆ ಪ್ರಕಾರ ಶ್ರೀ ಪ್ರಭುಸ್ವಾಮಿಗಳು ನನ್ನನ್ನು ಕರೆಯಿಸಿಕೊಂಡು "ನೋಡಿರಿ, ಶ್ರೀ ಬೂದೀಶ ಶಿವಯೋಗಿಗಳು ೭೭೫ ವರ್ಷ ಬಾಳಿ ಭಕ್ತೋ ದ್ಧಾರಕ್ಕಾಗಿ ನಾಡಿನಾದ್ಯಂತ ಸಂಚರಿಸಿ ಬಹುವಿಧ ಲೀಲೆಗಳನ್ನಾಚರಿಸಿದ್ದಾರೆ. ಅವರ ಚರಿತ್ರಾಂಶಗಳನ್ನು ನಿಮಗೆ ಕೊಡುವೆವು. ನಿಮಗೆ ಸರಿಕಂಡಂತೆ ಅವು ಗಳ ಸಹಾಯದಿಂದ ಸುಲಭ ಸುಂದರವಾದ ಭಾಮಿನೀ ಷಟ್ಪದಿಯಲ್ಲಿ ಪುರಾಣ ವನ್ನು ರಚಿಸಿರಿ. ಆ ಪುರಾಣವನ್ನು ನೀವು ಬರೆಯಬೇಕೆಂದು ಶ್ರೀ ಮಹಾಂತಪ್ಪ ಗಳು ಅಪ್ಪಣೆ ಕೊಡಿಸಿದ್ದಾರೆ. ಈ ಸುಯೋಗವನ್ನು ಕಳೆದುಕೊಳ್ಳಬೇಡಿರಿ ಈ ಪುರಾಣವನ್ನು ರಚಿಸುವ ಭಾಗ್ಯ ನಿಮ್ಮದಾಗಿದೆ. ನಿಮ್ಮಲ್ಲಿ ನಮಗೆ ತುಂಬಾ ನಂಬುಗೆಯಿದೆ. ಈ ಸೇವೆಯನ್ನು ನೀವು ಕೈಕೊಳ್ಳಲೇ ಬೇಕು. ಶ್ರೀ ಬೂದೀ ಶ್ವರನು ನಿಮಗೆ ಕೃಪೆ ಮಾಡುವನು" ಎಂದು ಅಪ್ಪಣೆ ಮಾಡಿದರು.

ಆಗ ನಾನು "ಬುದ್ಧೀ ಮಹಾ ಮಹಿಮರಾದ ಶ್ರೀ ಬೂದೀಶ್ವರ ಶಿವ ಯೋಗಿಗಳೆತ್ತ ! ಮಂದಮತಿಯಾದ ನಾನೆತ್ತ ! ಅಂಥವರ ಪುರಾಣವನ್ನು

ನಾನು ಬರೆಯ ಬಲ್ಲೆನೇ ? ಈ ವರೆಗೆ ನಾನು ಯಾವ ಪುರಾಣವನ್ನೂ ಬರೆ ದಿಲ್ಲ" ಹೀಗೆಂದು ಸಂಕೋಚಪಟ್ಟುಕೊಳ್ಳಲು ಶ್ರೀ ಪ್ರಭುಸ್ವಾಮಿಗಳು "ಶ್ರೀ ಮಹಾಂತಪ್ಪಗಳು ಅಪ್ಪಣೆ ಕೊಡಿಸಿರುವರೆಂದ ಬಳಿಕ ನೀವು ಬರೆದೇ ಬರೆಯು ತ್ತೀರಿ" ಎಂದು ಧೈರ್ಯ ಹೇಳಿ ಶಾಲಿವಾಹನ ಶಕ ೧೮೭೦ನೆಯ ಸಂವತ್ಸರದ ಆಶ್ವಿನ ಶುದ್ಧ ಮಹಾನವಮಿಯ ದಿವಸ ನನ್ನಿಂದ ಅದನ್ನು ಬರೆಯ ಹಚ್ಚಿದರು. ನಾನು ಶ್ರೀ ಮಹಾಂತಪ್ಪಗಳ ಬಳಿಗೆ ಹೋಗಿ ಸಾಷ್ಟಾಂಗವೆರಗಿ "ಬುದ್ಧೀ, ಅಂಥ ದೊಡ್ಡ ಯೋಗಿಗಳ ಪುರಾಣವನ್ನು ಬರೆಯುವದು ನನಗೆ ಹೇಗೆ ಸಾಧ್ಯ ?" ಎಂದು ಬಿನ್ನವಿಸಿಕೊಳ್ಳಲು ಅವರು "ನೀವು ಬರೆಯುತ್ತೀರಿ, ಬರೆಯಿರಿ" ಎಂದು ಆಜ್ಞಾಪಿಸಿದರು. ಅವರ ಅಪ್ಪಣೆಯೇ ಮಹಾ ಪ್ರಸಾದವೆಂದು ಭಾವಿಸಿ ನಾನು ಅದನ್ನು ಬರೆಯಲುಜ್ಜುಗಿಸಿದೆನು.

ನಾನು ವರಕವಿಯಾಗಲಿ ಪಂಡಿತನಾಗಲಿ ಆಗದಿದ್ದರೂ ಏನೋ ಪುಣ್ಯಾ ತ್ಮರ ಜೀವನ ಚರಿತ್ರೆಯನ್ನು ಬರೆಯುವ ಸುಸಂಧಿಯನ್ನು ಕಳೆದುಕೊಳ್ಳಬಾರ ದೆಂಬ ಸದುದ್ದೇಶದಿಂದ ಶ್ರೀ ಬೂದೀಶ್ವರನ ಮೇಲೆಯೇ ಭಾರ ಹಾಕಿ ಈ ಸಾಹಸಕ್ಕೆ ಕೈಹಾಕಿದೆನು.

ಶಕ ೧೮೭೦ ಮಾಘ ಶುದ್ಧ ೫ಕ್ಕೆ ಪುರಾಣವನ್ನು ಪೂರ್ತಿಗೊಳಿಸಿ ಹೊಸಹಳ್ಳಿಗೆ ಶ್ರೀ ಪ್ರಭುಸ್ವಾಮಿಗಳ ಬಳಿಗೆ ಬಂದು ಓದಿ ತೋರಿಸಿದೆನು. ಅವರು ಚೆನ್ನಾಗಿ ಆಗಿದೆಯೆಂದು ಅಭಿಪ್ರಾಯಬಟ್ಟು ಅನವಶ್ಯಕವಾದ ಕೆಲವು ಪದ್ಯಗಳನ್ನು ತೆಗೆಯಿಸಿ ಹೊಸದಾಗಿ ಸಂಗ್ರಹವಾಗಿದ್ದ ಕೆಲವು ವಿಷಯಗಳನ್ನು ಸೇರ್ಪಡೆ ಮಾಡಲು ಸೂಚಿಸಿದರು. ಅದೆಲ್ಲ ಮುಗಿದನಂತರ ಅಲ್ಪಸ್ವಲ್ಪ ತಿದ್ದುಪಡೆಗಳೊಂದಿಗೆ ಪುರಾಣವು ಸಿದ್ಧವಾಯಿತು. ಶ್ರೀಗಳು ಅದನ್ನು ಮೆಚ್ಚಿ ಕೊಂಡು ಆದಷ್ಟು ಬೇಗನೇ ಅದನ್ನು ಮುದ್ರಣ ಮಾಡಿಸುವದಾಗಿ ತಿಳಿಸಿದರು. ಆದರೆ ದುಡ್ಡಿನ ಅಡಚಣೆಯಿಂದಾಗಿ ಮುದ್ರಣದ ವಿಚಾರವು ನನೆಗುದಿಗೆ ಬಿದ್ದಿತು. ಹೀಗೆ ಸಮಗ್ರ ಎರಡು ವರ್ಷಗಳು ಗತಿಸಿದವು. ಆದರೂ ಪ್ರಿಂಟಿನ ಬಗ್ಗೆ ಚಕಾರ ಶಬ್ದವಿಲ್ಲ. ನಾನು ಪಟ್ಟ ಶ್ರಮವೆಲ್ಲ ವ್ಯರ್ಥವಾಯಿತೆಂದು ನಾನು ನಿರಾಶನಾದೆನು.

ಆಗ ನನ್ನ ಮನಸ್ಸಿನಲ್ಲಿ ಬೇರೆ ಬೇರೆ ಸಂಕಲ್ಪ ವಿಕಲ್ಪಗಳುದ್ಭವಿಸಿದವು. ಕದಾಚಿತ್ ನಾನು ಬರೆದ ಪುರಾಣವು ಶ್ರೀಗಳವರ ಮನಸ್ಸಿಗೆ ಬಂದಿರಲಿಕ್ಕಿಲ್ಲ; ಬೇರೆ ಮತ್ತಾರ ಕಡೆಯಿಂದಾದರೂ ಬರೆಯಿಸಬೇಕೆಂದಿರಬಹುದು. ಅದಕ್ಕಾ

ಗಿಯೋ ಅವರು ದುಡ್ಡು ಕೊಡಿಲ್ಲವೆಂಬ ನೆವ ತೋರಿಸಿ ಮುಂದಕ್ಕೆ ಹಾಕುತ್ತಿದ್ದಾರೆಂದು ನನ್ನ ಭಾವನೆಯುಂಟಾಯಿತು. ಆಗ ನಾನು ಶ್ರೀಗಳಿಗೆ "ಪುರಾಣವನ್ನು ಪ್ರಿಂಟು ಮಾಡಿಸುವಿರೋ ಇಲ್ಲವೋ ಸ್ಪಷ್ಟವಾಗಿ ತಿಳಿಸಿ ಬಿಡಿರಿ. ನಾನು ನಿಶ್ಚಿಂತನಾಗುವೆನೆ"ಂದು ಪತ್ರ ಬರೆದೆನು. ಆಗ ಒಮ್ಮಿಂದೊಮ್ಮೆ ಶ್ರೀ ಬೂದೀಶನ ಕೃಪೆಯೋ ಆಜ್ಞಾರೂಪವಾಗಿ ಶ್ರೀ ಪ್ರಭುಸ್ವಾಮಿಗಳ ಪತ್ರದ ಮುಖಾಂತರ "ದುಡ್ಡು ಸಾಕಷ್ಟು ಕೂಡಿದೆ. ಧಾರವಾಡ ಶ್ರೀ ಮಹಾಂತ ಮುದ್ರಣಾಲಯದಲ್ಲಿ ಪುರಾಣವನ್ನು ಪ್ರಿಂಟಿಗೆ ಕೊಟ್ಟಿದೆ. ಶ್ರೀ ಬಸವ ಜಯಂತಿಯ ದಿವಸ ಪ್ರಿಂಟಿಂಗೆ ಮೊದಲಾಗುವದು. ಆದುದರಿಂದ 'ಪ್ರೂಫ್' ತಿದ್ದುವುದಕ್ಕೆ ಮತ್ತು ಪುರಾಣದ ಕಥಾಸಾರವನ್ನು ಬರೆಯಲಿಕ್ಕೆ ನೀವು ಒಂದೆರಡು ದಿವಸ ಮುಂಚಿತವಾಗಿ ಧಾರವಾಡಕ್ಕೆ ಬರಬೇಕೆ"ಂದು ಅಪ್ಪಣೆ ಬಂದದ್ದರಿಂದ ನನ್ನಲ್ಲಿ ಪುನಃ ಆಶಾಕಿರಣವು ಮೂಡಿತು.

ನಡು ನಡುವೆ ಶ್ರೀಗಳು ನನಗೆ ನಿರಾಶೆಯಾಗಬಾರದೆಂದು ಪತ್ರಗಳನ್ನು ಬರೆದು ಧೈರ್ಯ ನೀಡಿದ್ದರೂ ನನಗೆ ಸಮಾಧಾನವಾಗಿರಲಿಲ್ಲ.

ದಿ. ೧೫-೯-೭೦ರ ಪತ್ರದಲ್ಲಿ ಶ್ರೀಗಳವರು ಹೀಗೆ ಕಾಣಿಸಿದ್ದಾರೆ. "ನೀವು ನಿಮ್ಮ ರಚನೆಯಲ್ಲಿ ಸಹಜವಾಗಿ ಸಮಯೋಚಿತವಾದ ವಿಷಯಗಳನ್ನು ಸೇರಿಸಿದ್ದೀರಿ. ತುಂಬ ಸರಳವಾದ ಶೈಲಿಯನ್ನು ಬಳಸಿಕೊಂಡಿರುವಿರಿ. ಮತ್ತೇನೇನೋ ವಿಷಯಗಳನ್ನು ಸೇರಿಸದೆ ಮೂಲವಿಷಯವನ್ನು ಬಿಡದೆ ರಚಿಸಿರುವುದು ಜನಪ್ರಿಯವಾಗುವದರಲ್ಲಿ ಸಂದೇಹವಿಲ್ಲ: ನನಗೂ ತುಂಬ ಸಂತೋಷವಾಗಿದೆ.

ದಿ. ೨೬-೯-೭೦ ರಲ್ಲಿ ಬರೆದ ಪತ್ರದಲ್ಲಿ ಶ್ರೀಗಳು ಹೀಗೆ ಅಪ್ಪಣೆಕೊಡಿಸಿದ್ದಾರೆ. "ನೀವು ಬರೆದಿರುವ ಬೂದೀಸ್ವಾಮಿಗಳ ಪುರಾಣವು ನನಗೆ ಅತ್ಯಂತ ಮೆಚ್ಚಿಗೆಯಾಗಿದೆ. ಇದಕ್ಕಿಂತಲೂ ಚೆನ್ನಾಗಿ ಮತ್ತಾರೂ ಬರೆಯಲಾರರೆಂದು ನನ್ನ ಭಾವನೆಯಾಗಿದೆ. ಇದೆಲ್ಲದಕ್ಕೆ ಸ್ವಾಮಿಯ ಪ್ರೇರಣೆ, ನಿಮ್ಮ ಶ್ರದ್ಧಾಭಕ್ತಿಗಳೇ ಕಾರಣವಾಗಿವೆ.

ದಿ. ೧೨-೧೦-೭೦ ನೆಯ ಪತ್ರದಲ್ಲಿ ಹೀಗೆ ಬರೆದಿದ್ದಾರೆ, "ನಾನು ಧಾರವಾಡಕ್ಕೆ ಹೋದಾಗ ನೀವು ಪುರಾಣವನ್ನು ಪೂರ್ತಿಯಾಗಿ ರಚಿಸಿ ಕೊಟ್ಟಿರುವದನ್ನೂ ಬಹಳ ಚೆನ್ನಾಗಿ ಬರೆದಿರುವದನ್ನೂ ನನಗೆ ತುಂಬ ಮೆಚ್ಚಿಗೆಯಾಗಿರುವದನ್ನೂ ಶ್ರೀ ಮಹಾಂತಪ್ಪಗಳಲ್ಲಿ ಅರಿಕೆ ಮಾಡಿಕೊಂಡೆ. ಅವರು ಅತ್ಯಂತ ಸಂತೋಷವನ್ನು ವ್ಯಕ್ತಪಡಿಸಿದರು."

ಇಷ್ಟೆಲ್ಲ ಬರೆದು ನನಗೆ ಪ್ರೋತ್ಸಾಹಿಸಿದ್ದರೂ ನನ್ನ ನಿರಾಶೆಯು ದೂರ ವಾಗಿರಲಿಲ್ಲ. ಕೊನೆಯ ಪತ್ರದಲ್ಲಿ ನನಗೆ ಧಾರವಾಡಕ್ಕೆ ಬರಬೇಕೆಂದು ಅವರು ಅಪ್ಪಣೆ ಕೊಡಿಸಿದಾಗ ನನ್ನ ನಿರಾಶೆಯು ಸಂಪೂರ್ಣ ಬಯಲಾಯಿತು. ಶ್ರೀ ಬೂದೀಶ್ವರ ಪುರಾಣವು ಕೊನೆಗೆ ಮೂರ್ತಸ್ವರೂಪಕ್ಕೆ ಬಂದಿತೆಂದು ವಾಚಕ ರಿಗೆ ತಿಳಿಸಲು ತುಂಬಾ ಸಂತೋಷವೆನಿಸುತ್ತದೆ.

## ವಂದನಾರ್ಪಣ

ಧಾರವಾಡ ಮುರುಘಾಮಠಾಧ್ಯಕ್ಷರಾದ ಶ್ರೀ ಮ. ನಿ. ಪ್ರ. ಮಹಾಂತ ಪ್ಪಗಳು "ಶ್ರೀ ಬೂದೀಶ್ವರ ಲೀಲೆ" ಯೆಂಬೀ ಪುರಾಣವನ್ನು ರಚಿಸಲು ನನಗೆ ಕೃಪಾಶೀರ್ವಾದಪೂರ್ವಕ ಪ್ರೋತ್ಸಾಹ ನೀಡಿದುದಲ್ಲದೆ ನನಗೆ ಎಲ್ಲ ಸೌಕರ್ಯ ಗಳನ್ನೊದಗಿಸಿ ಕೊಟ್ಟಿದ್ದಕ್ಕಾಗಿ ಆ ಮಹಾ ಪಾದಕ್ಕೆ ನನ್ನ ಭಕ್ತಿ ಪುರಸ್ಸರವಾದ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಹೊಸಹಳ್ಳಿ ಶ್ರೀ ಬೂದೀ ಮಹಾಸ್ವಾಮಿಗಳವರ ಸಂಸ್ಥಾನ ಮಠಾಧಿ ಪತಿಗಳಾದ ಶ್ರೀ ಮ. ನಿ. ಪ್ರ. ಪ್ರಭುಸ್ವಾಮಿಗಳು ಈ ಪುರಾಣ ಬರೆಯಲು ನನಗೆ ಶ್ರೀ ಬೂದೀಶ್ವರರ ಬಗ್ಗೆ ಚರಿತ್ರಾಂಶಗಳನ್ನೊದಗಿಸಿದ್ದಲ್ಲದೆ ಅದಕ್ಕೆ ಸುಂದರವಾದ ಮುನ್ನುಡಿಯನ್ನು ಬರೆದುಕೊಟ್ಟು ಪುರಾಣವನ್ನು ಅಚ್ಚು ಮಾಡಿಸಿ ಪ್ರಕಾಶನಗೊಳಿಸಿದುದಕ್ಕಾಗಿ ಅವರ ಅಡಿದಾವರೆಯಲ್ಲಿ ನನ್ನ ಅನಂತ ವಂದನೆಗಳನ್ನು ಸಮರ್ಪಿಸದಿರಲಾರೆನು.

ಧಾರವಾಡದ ಶ್ರೀ ಮಹಾಂತ ಮುದ್ರಣಾಲಯದ ಒಡೆಯರಾದ ಪಂಡಿತ ನಾಗಭೂಷಣ ಶಾಸ್ತ್ರಿಗಳು ಪುರಾಣದ 'ಪ್ರೂಫ್' ತಿದ್ದಲಿಕ್ಕೆ ನನಗೆ ನೆರ ವಾದುದಲ್ಲದೆ ಕೆಲವೊಂದು ದೋಷಗಳನ್ನು ತಿದ್ದಲಿಕ್ಕೆ ಸಹಾಯ ಮಾಡಿದ್ದ ರಿಂದಲೂ ಈ ಪುರಾಣವನ್ನು ಬಹು ಶ್ರಮವಹಿಸಿ ಮುದ್ರಣ ಮಾಡಿಕೊಟ್ಟಿ ದ್ದರಿಂದಲೂ ಅವರಿಗೆ ನನ್ನ ಹೃತ್ಪೂರ್ವಕವಾದ ಅಭಿವಂದನೆಗಳನ್ನು ಸಲ್ಲಿಸುತ್ತೇನೆ.

ಪಂ. ನಾಗಭೂಷಣ ಶಾಸ್ತ್ರಿಗಳ ಚಿರಂಜೀವರಾದ ಶ್ರೀ ಬಸಣ್ಣ ಹಾಗೂ ಶ್ರೀ ಚೆನ್ನಬಸವಣ್ಣ ಈ ಉಭಯರು ಪುರಾಣ ಮುದ್ರಣ ಕೆಲಸದಲ್ಲಿ ವಿಶೇಷ ಆಸಕ್ತಿ ವಹಿಸಿ ಪರಿಶ್ರಮ ಪಟ್ಟಿದ್ದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಕಲ್ಯಾಣಪ್ಪ ಬ್ಯಾಳಿ



ಐದನೆಯ ಪಟ್ಟಾಧಿಕಾರಿಗಳಾದ
ಶ್ರೀ ಮ. ನಿ. ಪ್ರ. ಪ್ರಭುಸ್ವಾಮಿಗಳವರು

ಶ್ರೀ ಗುರುಬಸವಲಿಂಗಾಯ ನಮಃ

# ಪ್ರಸ್ತಾವನೆ

ಅನುಪಮರಾದ ಭಕ್ತಿಭಂಡಾರಿ ಬಸವಣ್ಣನವರು ಮರ್ತ್ಯಲೋಕದ ಮಾನವರ ಮನದ ಮಾಲಿನ್ಯವನ್ನು ಕಳೆಯಲೋಸುಗ ಅವತರಿಸಿದರು. ತಮ್ಮ ಅಸಾಧಾರಣವಾದ ಶಿವಭಕ್ತಿಪ್ರಭಾವದಿಂದ ಕಲ್ಯಾಣದಲ್ಲಿ **"ಶಿವಾನುಭವ ಮಂಟಪ"** ವನ್ನು ರಚಿಸಿದರು.

ಮಹಾಯೋಗಸಿದ್ಧರು ವೈರಾಗ್ಯನಿಧಿಗಳು ಆದ ಅಲ್ಲಮಪ್ರಭುಗಳು ಆ ಅನುಭವ ಮಂಟಪದ ಪೀಠಾಧಿಪತಿಗಳಾದರು. ಸುಜ್ಞಾನಚಕ್ರವರ್ತಿ ಚೆನ್ನಬಸವಣ್ಣನವರು ಮಾರ್ಗದರ್ಶಕರಾದರು. ಅನಂತ ಶಿವಶರಣ, ಶಿವ-ಶರಣೆಯರ ಸಲಹೆ, ಸಹಾಯ, ಸಹಾನುಭೂತಿಗಳಿಂದ ಅನುಭವ ಮಂಟಪದ ಪ್ರಭಾವವು ಜಾಜ್ವಲ್ಯಮಾನವಾಗಿ ಬೆಳೆಯಿತು

ಅನುಭವ ಮಂಟಪದ ಸತ್ಯ ಶುದ್ಧ ಶಿವಶರಣರು ಶಿವಶರಣೆಯರು ತಮ್ಮ ಸತ್ಯಶುದ್ಧವಾದ ಅನುಭವಾಮೃತ ವಾಣಿಯಿಂದ ಅಭೂತಪೂರ್ವವಾದ, ಅಸದೃಶವಾದ, ಚಿರನೂತನವಾದ ವಚನಸಾಹಿತ್ಯವನ್ನು ವಿವಿಧ ವಿಧಾನಗಳಿಂದ ರಚಿಸಿದರು. ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಪರಿಶುದ್ಧವಾಗಿಯೂ, ಸುಸ್ಪಷ್ಟವಾಗಿಯೂ ರೂಪಿಸಿದರು. ನಿತ್ಯಾಚರಣೆಯ ಕ್ರಮಗಳನ್ನು ನಿರೂಪಿಸಿದರು. ಕಾಯಕದ ಮಹತಿಯನ್ನರುಹಿದರು. ಭಕ್ತಿ ಭಾವವನ್ನೂ ದಾಸೋಹಂಭಾವವನ್ನೂ ಪ್ರಚುರಪಡಿಸಿದರು.

ಪರಶಿವನ ಕರುಣದ ಕಂದನೂ ಭಕ್ತಕುಲಲಲಾಮನೂ ಸತ್ಯಸಾಮ್ರಾಜ್ಯ ಸಾರ್ವಭೌಮನೂ ಸದ್ಭಕ್ತಿಯ ಸೂರೆಗಾರನೂ ದಾಸೋಹಂ ಭಾವಿಯೂ ಆದ ಬಸವಣ್ಣನ ಪುಣ್ಯಕೀರ್ತಿಲತೆ ಸರ್ವತ್ರ ಪ್ರಸರಿಸಿತು. ಬಸವರಾಜನ ಭಕ್ತಿ, ಕಿಂಕರವೃತ್ತಿ, ದಾನ ವಿನೋದ ಗುಣ, ಲಿಂಗನಿಷ್ಠೆ, ಪೆರ್ಮೆಗಳನ್ನು ಕೇಳಿ ನಲಿದು ಆತನ ದರ್ಶನಾರ್ಥಿಗಳಾಗಿ ಹರ್ಷಾತುರದಿಂದ ದಿನ ದಿನಕೆ, ಗಳಿಗೆ ಗಳಿಗೆಗೆ ಮಿಗಿಲಾದ ಶರಣ ಸಂಕುಳವು ಹರಿದು ಬಂದು ಕಲ್ಯಾಣವನ್ನು ಸೇರಿತು. ಬಸವನ ದಾಸೋಹದ ಮಹಾಮನೆಯಲ್ಲಿ ಹಾಗೂ ಶಿವಾನುಭವ ಮಂಟಪದಲ್ಲಿ ಸಮ್ಮಿಳಿತವಾಯಿತು.

ಅನುಭವ ಮಂಟಪದಲ್ಲಿ ತತ್ತ್ವಜ್ಞಾನಿಗಳು, ವಿರಾಗಿಗಳು, ತ್ಯಾಗಿಗಳು, ಆತ್ಮಜ್ಞಾನಿಗಳು, ಲಿಂಗಪೂಜಾನಿಷ್ಠರು. ಭಕ್ತರು, ಭಾವಿಕರು, ಅರಸರು, ಲೆಂಕರು, ಸಿದ್ಧರು, ಸಾಧಕರು, ಧ್ಯಾನ ಧಾರಣ ಯಮ ನಿಯಮ ಸಮಾಧಿ ಸಂಪನ್ನರು ಗಳೆಲ್ಲರು ಬಂದು ಸಮ್ಮಿಳಿತರಾದರು.

ಕರದಲ್ಲಿ ಲಿಂಗವಂ ಪಿಡಿದವರು, ಉಜ್ವಳಿಪ ಲಿಂಗವಂ ನೋಡುತಿಪ್ಪ ವರು, ಶಿವಶಬ್ದಮಂ ಕೇಳ್ದು ಪುಳುಕಿಸುತ್ತಿಪ್ಪವರು, ಲಿಂಗಮಂ ನೋಡು ನೋಡುತ್ತಲೇ ಎವೆಯಿಕ್ಕದವರು, ಇಂತನಂತ ಬಗೆಯ ಮಹಾನುಭಾವಿಗಳೆ ಲ್ಲರು ತಂಡೋಪತಂಡವಾಗಿ ಬಂದು ಅವಿಮುಕ್ತ ಕ್ಷೇತ್ರವಾದ ಕಲ್ಯಾಣದ ಅನು ಭವ ಮಂಟಪವನ್ನು ಸೇರಿದರು. ಅವರಲ್ಲಿ ಹಠಯೋಗಿಗಳು, ಶಿವಯೋಗಿ ಗಳು ಆದ ಬೂದಿಸ್ವಾಮಿಗಳು ಒಬ್ಬರು. ಅಲ್ಲಮಪ್ರಭುದೇವರ ಪರಮ ಶಿಷ್ಯರಾಗಿ ಹಠಯೋಗ ಶಿವಯೋಗಗಳನ್ನು ಸಾಧಿಸಿದರು.

ಹಿಂದೂ ಧರ್ಮದ ಹೆಚ್ಚಳವನ್ನು ಸಾರುವ ಶಾಸ್ತ್ರಗಳಲ್ಲಿ ಯೋಗವು ಒಂದು. ಯೋಗ ಶಬ್ದದ ವ್ಯಾಖ್ಯೆಯನ್ನು ವಿವಿಧ ರೀತಿಯಲ್ಲಿ ಮಾಡುತ್ತಾರೆ. ಮನಸ್ಸಿನ ಚಲನವಲನವನ್ನು ತಡೆದು ಒಂದೇ ವಿಷಯದ ಮೇಲೆ ಸ್ಥಿರಪಡಿಸ ಬೇಕಾದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಮೊದ ಲಾದ ಅಷ್ಟ ಯೋಗಾಂಗಗಳನ್ನು ಆಚರಿಸಬೇಕಾಗುತ್ತದೆ. ಕುಂಭಕ, ರೇಚಕ, ಪೂರಕ, ದ್ವಾರಾ ಸ್ಥೂಲ ಶರೀರದೊಳಗಣ ಮಲಿನತೆಯನ್ನೂ ಸರ್ವವ್ಯಾಧಿ ಗಳನ್ನೂ ಹೊರದೂಡಿ ಬಹುಕಾಲ ಆರೋಗ್ಯದಿಂದಿರಬೇಕಾದರೆ ಯೋಗಾ ಭ್ಯಾಸವು ಮಹತ್ವದ ಸಾಧನೆಯಾಗಿದೆ. ಯೋಗವೇತ್ತರು ಯೋಗವನ್ನು ಮಂತ್ರ, ಲಯ, ಹಠ, ರಾಜಯೋಗವೆಂದು ನಾಲ್ಕು ವಿಧವಾಗಿ ಹೇಳುತ್ತಾರೆ. ಯೋಗ ಸಾಧನೆಯಿಂದ ಮನಸ್ಸಿನ ಚಂಚಲ ಸ್ವಭಾವವಡಗಿ ಸಮಸ್ತ ಸಿದ್ಧಿಗಳು ಪ್ರಾಪ್ತವಾಗುತ್ತವೆ.

೧. ಮೊದಲನೆಯ ವರ್ಷದಲ್ಲಿ ನಿರೋಗಿಯಾಗಿ ಸಕಲ ಜನಪ್ರಿಯ ನಾಗುವನು.

೨. ಎರಡನೆಯ ವರುಷದಲ್ಲಿ ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಕವಿತ್ವಮಂ ಮಾಡುವನು.

೩. ಮೂರನೆಯ ವರುಷದಲ್ಲಿ ಸರ್ಪಾದಿ ದುಷ್ಟಪ್ರಾಣಿಗಳ ವಿಷ ಬಾಧೆಗೆ ಒಳಗಾಗನು.

೪. ನಾಲ್ಕನೆಯ ವರ್ಷದಲ್ಲಿ ಹಸಿವು, ತೃಷೆ, ನಿದ್ರೆ, ಶೋಕ ಮೋಹಾದಿಗಳಿಂದ ಬಿಡುಗಡೆ ಹೊಂದುವನು.

೫. ಐದನೆಯ ವರ್ಷದಲ್ಲಿ ದೂರಶ್ರವಣ, ವಾಕ್ಸಿದ್ಧಿ, ಪರಕಾಯ ಪ್ರವೇಶವುಳ್ಳವನಾಗುತ್ತಾನೆ.

೬. ಆರನೆಯ ವರ್ಷದಲ್ಲಿ ವಜ್ರಾದ್ಯಾಯುಧಗಳಿಂದ ಭೇದಿಸಲ್ಪಡದಾತನಾಗಿ, ಶೀಘ್ರಗಾಮಿಯಾಗಿ, ದೂರದರ್ಶನವುಳ್ಳಾತನಾಗುವನು.

೭. ಏಳನೆಯ ವರ್ಷದಲ್ಲಿ ಖೇಚರಗಾಮಿಯಾಗುವನು.

೮. ಎಂಟನೆಯ ವರ್ಷದಲ್ಲಿ ಅಣಿಮಾದ್ಯಷ್ಟೈಶ್ವರ್ಯ ಸಂಪನ್ನನಾಗುವನು.

೯. ಒಂಭತ್ತನೆಯ ವರ್ಷದಲ್ಲಿ ಸ್ವೇಚ್ಛಾಗಮನಿಯಾಗಿ ವಜ್ರಶರೀರಿಯಾಗುವನು.

೧೦. ಹತ್ತನೆಯ ವರ್ಷದಲ್ಲಿ ಮನೋವೇಗಿಯಾಗಿ ಇಚ್ಛಾ ವಿಷಯಗಳನ್ನು ಪಡೆಯುವನು.

೧೧. ಹನ್ನೊಂದನೆಯ ವರ್ಷದಲ್ಲಿ ಸಕಲ ಲೋಕಗಳಿಗೆ ಆಜ್ಞಾಕರ್ತನಾಗುವನು.

೧೨. ಹನ್ನೆರಡನೆಯ ವರ್ಷದಲ್ಲಿ ಶಿವಸಮಾನನಾಗಿ ಸೃಷ್ಟಿ, ಸ್ಥಿತಿ, ಸಂಹಾರಂಗಳಂ ಮಾಡುವನು.

ಸ್ಥೂಲನಾಗುವ. ಸೂಕ್ಷ್ಮನಾಗುವ, ಬಾಲನಾಗುವ, ತರುಣನಾಗುವ, ವೃದ್ಧನಾಗುವ ನಾನಾ ಜಾತಿ ರೂಪವನ್ನೈದುವ ಪೃಥ್ವಿ ಸಿದ್ಧಿಗಳನ್ನು;

ಜಲ ನಿರಸನಮಂ ಮಾಡುವ, ಭೂಸದೃಶ ಜಲಮಂ ಮಾಡುವ. ನಿರ್ಜಲ ಸ್ಥಾನದಲ್ಲಿ ಜಲದರ್ಶನಮಂ ಮಾಡುವ ಶಿಲಾದಿ ತಾಡನದಿಂ ವ್ರಣವಿಲ್ಲದಿರುವ ಕರಪುಟದಲ್ಲಿ ಸಮುದ್ರಮಂ ಧರಿಸುವ, ನೀರಸ ವಸ್ತುವಂ ಸುರಸಂ ಮಾಡುವ ಅಪ್‌ಸಿದ್ಧಿಗಳನ್ನು:

ಮನೋಜಿತ್ವ ಭೂತಾಂತಃಪ್ರವೇಶನ. ಪರ್ವತಾದಿಭಾರಧಾರಣ. ಗುರುತ್ವ, ಲಘುತ್ವ. ಹಸ್ತಾನಿಲಧಾರಣ. ಅಗ್ನ್ಯಾಹುತಿಯಿಂದ ಭೂಕಂಪನ ಮಾಡುವ ಮಾರುತ ಸಿದ್ಧಿಗಳನ್ನು:

ಛಾಯಾ ವಿಹೀನತೆ, ಇಂದ್ರಿಯಾವ್ಯಶ್ಯತೆ, ಖೇಚರತೆ, ಯಥೇಷ್ಟವಿಷಯಾ ಸಂಗತೆ, ಶೈಲಲಂಘನ, ಶೈಲಗರ್ಭೀಕರಣ, ಆಕಾಶಪಿಂಡೀಕರಣ. ಅಶರೀರತ್ವ ವೆಂಬ ಅಂಬರ ಸಿದ್ಧಿಗಳನ್ನು;

ಯಥಾ ಕಾಮೋಪಲಬ್ಧ, ಯಥಾ ಕಾಮನಿರ್ಗಮನ, ಸರ್ವತಿರಸ್ಕರಣ ಸರ್ವಗುಹ್ಯಾರ್ಥದರ್ಶನ, ಕರ್ಮಾನುಗುಣ ನಿರ್ಮಾಣ, ವಶಿತ್ವ, ಪ್ರಿಯದರ್ಶ ನವೆಂಬ ಮನಸ್ಸಿದ್ಧಿಗಳನ್ನು;

ಭೇದನ, ತಾಡನ, ಬಂಧನ, ಮೋಹನ, ಗ್ರಹಣ, ಸಂಸಾರ ಪರಿವರ್ತನ ಪ್ರಸಾದ ಮೃತ್ಯುಕಾಲ ಜಯವೆಂಬ ಅಹಂಕಾರ ಸಿದ್ಧಿಗಳನ್ನು;

ಜಗಜ್ಜನನ, ಜಗದ್ರಕ್ಷಣ, ಜಗತ್‌ಸಂಹರಣ ಇಷ್ಟಾಧಿಕರಣ, ಅಭಿಮತ ಲೋಕ ಪ್ರದರ್ಶನ, ಅದೃಶ್ಯ ನಿರ್ಮಾಣ, ಅಶುಭಕರಣ, ಶುಭಕರಣವೆಂಬ ಬುದ್ಧಿ ಸಿದ್ಧಿಗಳನ್ನು;

ಅತ್ಯಂತ ಸೂಕ್ಷ್ಮವಾದ ಪ್ರಾಣಿಗಳಾತ್ಮತತ್ತ್ವದಿಂ ಪ್ರವೇಶಿಸುವ ತನುವೇ ಅಣಿಮೆ. ಬೃಹದಾದಿ ಶಿವಾಂತವಾದ ಮೂವತ್ತಾರು ತತ್ವಗಳ ಹೊರಗೆ ವ್ಯಾಪಿಸಿ ವರ್ತಿಸುವ ತನುವೇ ಮಹಿಮೆ. ಮಹಾ ಮೇರು ಪರ್ವ ತಕ್ಕೆ ಸಮಾನವುಳ್ಳಾತನಾಗಿ ಮೇಲಕ್ಕೆ ನೆಗಹುವ ಕೃತ್ಯದಲ್ಲಿ ಪರಮಾಣುವಿಗೆ ಸದೃಶವಹ ತನುವೇ ಲಘಿಮೆ. ಪರಮಾಣು ಸದೃಶವಾದ ದೇಹಿಯನೂ ರ್ಧ್ವಕ್ಕೆ ನೆಗಹುವ ಕೃತ್ಯದಲ್ಲಿ ಸುಮೇರುವಿನೋಪಾದಿ ಭಾರವಹ ತನುವೇ ಗರಿಮೆ. ಸ್ವಸ್ಥಾನದೊಳಿರ್ದು ಸಮಸ್ತ ಲೋಕ ಸಾಕ್ಷಾತ್ಕಾರವೇ ಪ್ರಾಪ್ತಿ. ಸ್ವೇಚ್ಛೆಯಿಂದ ಆಕಾಶಗಮನಾದಿ ಸರ್ವಸಿದ್ಧಿಯೇ ಪ್ರಾಕಾಮ್ಯ. ಸ್ವೇಚ್ಛಾ ಮಾತ್ರದಿಂದ ಜಗದುತ್ಪತ್ಯಾದಿ ಕೃತ್ಯಕಾರಣವಾದ ಸೂರ್ಯಾದಿಗಳಂ ಪ್ರೇರೇ ಪಿಸುವ ತನುವೇ ಈಶತ್ವ. ಸಕಲ ದಿಕ್ಪಾಲಕರೊಡಗೂಡಿದ ಜಗಮಂ ತನ್ನಾ ಧೀನವಾಗಿ ನಡೆಸುವ ತನುವೇ ವಶಿತ್ವ, ಈ ಪ್ರಕಾರವಾದ ಮಹಾ ಸಿದ್ಧಿ ಗಳೆಲ್ಲವೂ ಯೋಗದಿಂದ ಸಾಧ್ಯವಾಗುತ್ತವೆ.

ಶಿವಯೋಗವೆಂದರೆ ಜೀವಭಾವವು ಶಿವಭಾವದಲ್ಲಿ ಪರಿವರ್ತನೆಗೊಂಡು ಜೀವ ಪ್ರಪಂಚವೆಲ್ಲ ಶಿವಪ್ರಪಂಚವಾಗಿ ಮಾರ್ಪಡುವುದೇ ಶಿವಯೋಗದ ಗುರಿಯಾಗಿದೆ.

ಶಿವಯೋಗಕ್ಕೂ ಯೋಗಕ್ಕೂ ಅತಿ ನಿಕಟ ಸಂಬಂಧವಿದೆ. ಮಂತ್ರ, ಹಠ, ಲಯ, ರಾಜಯೋಗಗಳು ಒಂದು ಮಂಚಕ್ಕೆ ನಾಲ್ಕು ಕಾಲುಗಳಿದ್ದಂತೆ-

ಅವೆಲ್ಲವುಗಳನ್ನೊಡಗೊಂಡು ಉಪರಿಯಲ್ಲಿರುವ ಹಲಿಗೆಯು ಶಿವಯೋಗವಿದ್ದಂತೆ ಎಂದು ಹೇಳಬಹುದು. ವೀರಶೈವ ತತ್ತ್ವಜ್ಞಾನದಲ್ಲಿ ಷಟ್‌ಸ್ಥಲ ಸಿದ್ಧಾಂತವು ಅತಿ ಮಹತ್ವವಾದುದು. ಅದರಲ್ಲಿ ಅಡಿಗಡಿಗೂ ಯೋಗದ ತತ್ತ್ವಗಳು ಅಡಕವಾಗಿವೆ.

ಶಿವಯೋಗದ ಸ್ವರೂಪವನ್ನು ವಚನಕಾರರು ತಮ್ಮ ವಚನಗಳಲ್ಲಿಯೂ ಚೆನ್ನಸದಾಶಿವ ಶಿವಯೋಗಿಗಳು ಶಿವಯೋಗ ಪ್ರದೀಪಿಕೆಯಲ್ಲಿಯೂ ವಿಪುಲವಾಗಿ ವರ್ಣಿಸಿದ್ದಾರೆ. ಇವೆಲ್ಲದರ ಯಥಾರ್ಥವನ್ನು ತೋರಿಸುವ ಸಿದ್ಧಲಿಂಗಯತಿಗಳ ಒಂದೇ ವಚನದಲ್ಲಿ ನೋಡಬಹುದಾಗಿದೆ.

ಬ್ರಹ್ಮರಂಧ್ರದಲ್ಲಿಪ್ಪನಾದ ಚೈತನ್ಯನಪ್ಪ
ಪರಶಿವ ಚಿತ್ಕಳೆಯೇ ಭಾವಮನಕರದಲ್ಲಿ
ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ
ಭಾವದಲ್ಲಿ ಸತ್‌ಸ್ವರೂಪನಪ್ಪ ಇಷ್ಟಲಿಂಗವೆನಿಸಿ
ಒಂದೇ ವಸ್ತು ತನು ಮನ ಭಾವಂಗಳಲ್ಲಿ
ಇಷ್ಟ ಪ್ರಾಣ ಭಾವವಾದ ಭೇದವನರಿದು
ಇಷ್ಟ ಲಿಂಗವ ದೃಷ್ಟಿಯಿಂದ ಗ್ರಹಿಸಿ
ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ
ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ
ಈ ಲಿಂಗತ್ರಯವಿಡಿದು ಆಚರಿಸಿ
ಲಿಂಗದೊಡನೆ ಕೂಡಿ ಲಿಂಗವೇ ತಾನು ತಾನಾಗಿ
ವಿರಾಜಿಸುತಿರ್ಪುದೀಗ ಶಿವಯೋಗ ನೋಡಾ
ಮಹಾಲಿಂಗ ಗುರು ಶಿವಸಿದ್ಧೇಶ್ವರಪ್ರಭುವೇ"

ಎಂದು ಶಿವಯೋಗದ ಮಹತಿಯನ್ನು ನಿರೂಪಿಸಿದ್ದಾರೆ.

ವೀರಶೈವ ಗುರುಗಳು ಯೋಗವಿದ್ಯೆಯಲ್ಲಿ ಒಳ್ಳೆ ನಿಪುಣರಾಗಿದ್ದರು. ಯೋಗದ ಗುಟ್ಟನ್ನು ಕಂಡುಹಿಡಿದು ಅದು ಸರ್ವರಿಗೂ ಸಾಧಿಸಲು ಸಾಧ್ಯವಾಗುವಂತೆ ಯೋಗಶಿವಯೋಗಗಳೆರಡನ್ನೂ ಸಮನ್ವಯಗೊಳಿಸಿದರು. ಯೋಗಾಭ್ಯಾಸವಿರಹಿತ ಶಿವಯೋಗ ಸಾಧನೆಯು ಕಡಿವಾಣವಿಲ್ಲದ ತುಂಟ ಕುದುರೆಯ ಸವಾರಿ ಮಾಡಿದಂತೆ. ಯೋಗಾಭ್ಯಾಸಯುಕ್ತವಾದ ಶಿವಯೋಗ ಸಾಧನೆಯು ಪಳಗಿದ ಕುದುರೆಯನ್ನೇರಿ ಸವಾರಿ ಮಾಡಿದಂತೆ ಸುಕರವೂ ಸುಸೂತ್ರವೂ

ಆಗಿದೆ. ಇಂತಹ ಶಿವಯೋಗಿಯು ಪುಟವಿಟ್ಟ ಚಿನ್ನದಂತೆ ಪರಿಮಳಯುಕ್ತವಾದ ಅಪರಂಜಿಯಂತೆ ಪ್ರಕಾಶಮಯವಾಗಿಯೂ ಮನೋಹರವಾಗಿಯೂ ಸರ್ವಾಭರಣೀಯವಾಗಿಯೂ ಪರಿಶೋಭಿಸುತ್ತಾನೆ.

ಯೋಗ ಶಿವಯೋಗಾಭ್ಯಾಸ ಪರಿಣತರೂ ವೀರಶೈವ ಮಹಾಸಭೆಯ ಸಂಸ್ಥಾಪಕರೂ ದೂರದರ್ಶಿಗಳೂ ಆದ ಹಾನಗಲ್ಲ ಕುಮಾರ ಮಹಾ ಶಿವಯೋಗಿಗಳು ಶಿವಯೋಗ ಮಂದಿರವನ್ನು ಸ್ಥಾಪಿಸಿದರು. ಸ ದಾ ಚಾ ರ, ಜಿತೇಂದ್ರಿಯತ್ವ, ವೇದಾಗಮಾನಗಳ ಜ್ಞಾನ, ಬ್ರಹ್ಮ ವಿದ್ಯಾ ವಿಚಾರ, ಯೋಗ ಶಿವಯೋಗಾಭ್ಯಾಸ ಸಾಧನೆಗಳ ವಿಷಯದಲ್ಲಿ ಧರ್ಮ ಗುರುಗಳನ್ನು ನಿರತರನ್ನಾಗಿ ಮಾಡುವುದೇ ಶಿವಯೋಗಮಂದಿರದ ಮುಖ್ಯೋದ್ದೇಶವಾಗಿದೆ. ಇಂತಹ ಆದರ್ಶಸಂಸ್ಥೆಯನ್ನು ಸ್ಥಾಪಿಸಿದ ಕು ಮಾ ರ ಶಿವಯೋಗಿಗಳು ಚಿರಸ್ಮರಣೆಯರಾಗಿದ್ದಾರೆ.

ಹಠಯೋಗ ಶಿವಯೋಗಸಿದ್ಧರಲ್ಲಿ ಬೂದಿಸ್ವಾಮಿಗಳು ಒಬ್ಬರೆಂದು ಪ್ರಖ್ಯಾತರಾಗಿದ್ದಾರೆ.

ಕಲ್ಯಾಣದ ಮಹಾವೈಭವದ ಕಾಲದಲ್ಲಿ ಅನುಭವಮಂಟಪದಲ್ಲಿ ಬೂದೀಸ್ವಾಮಿಗಳು ಪ್ರಭುದೇವರ ಅನುಗ್ರಹಕ್ಕೆ ಪಾತ್ರರಾಗಿ ಬಸವಣ್ಣನವರಲ್ಲಿ, ಚೆನ್ನಬಸವಣ್ಣನವರಲ್ಲಿ ಅಪಾರಭಕ್ತಿಯುಳ್ಳವರಾಗಿ ಶಿವಶರಣರಲ್ಲಿ ಕಿಂಕರಭಾವದಿಂದ ವರ್ತಿಸುತ್ತಿದ್ದರು.

" ಒಮ್ಮೆ ಚನ್ನಬಸವೇಶ್ವರನು ತಾ–
ನಮ್ಮಯೀ ಬೂದೀಶಯೋಗಿಗೆ
ಒಮ್ಮನದಿ ಭಸ್ಮದ ಹಸಬಿಯನ್ನೀಯೆ ಕೃಪೆದೋರಿ
ನೆಮ್ಮಿ ಬೂದಿಯ ಪಡೆದ ಯೋಗಿಯ
ಸೊಮ್ಮು ಸಿದ್ಧಿಯರೂಪತಾಳಿರೆ
ಸುಮ್ಮನದಿ ಜನರಾತನಾ ಮಹಿಮೆಯನು ಬೆಳಗಿದರು

ಶರಣ ಕರುಣಿಸಿ ಕೊಟ್ಟಬೂದಿಯ
ಪರಮಹಿಮೆಯಿಂದಾ ಮಹಾತ್ಮನು
ಧರೆಯೊಳಾಂತನು ಬೂದಿಯೋಗಿಯುಚಿಂಬ ನಾಮವನು

ಚೆನ್ನಬಸವಣ್ಣನವರು ಕರುಣಿಸಿಕೊಟ್ಟವರ ವಿಭೂತಿಯನ್ನು ಹೋದ ಹೋದೆಡೆಗಳಲ್ಲಿ ಅಭಿಮಂತ್ರಿಸಿಕೊಡಲು ರೋಗರುಜೆಗಳು, ಪಿಶಾಚಬಾಧೆಗಳು ದುರಿತಕಂಟಕಗಳು ನಿವಾರಣೆಯಾಗಿ ಸರ್ವರ ಸರ್ವ ಅಭೀಷ್ಟಗಳು ಪ್ರಾಪ್ತವಾಗುತ್ತಿದ್ದವು. ಅದರಿಂದ ಎಲ್ಲರು ಬೂದಿಯೋಗಿಯೆಂದು ಕರೆದ ನಾಮವೆ ಪ್ರಖ್ಯಾತವಾಗಿದೆ.

"ಕಾಲೋ ವಿಚಿತ್ರಾಗತಿಃ" ಎಂಬಂತೆ ಅನಿರೀಕ್ಷಿತವಾಗಿ, ಅನಿವಾರ್ಯವಾಗಿ ಕಲ್ಯಾಣದ ಕ್ರಾಂತಿಯಾಯಿತು. ಬಸವಣ್ಣನವರು ಅಸಹನೀಯವಾದ ದುಃಖದಿಂದ ಆವೃತರಾದರು ಚೆನ್ನಬಸವಣ್ಣನ ಕೈವಿಡಿದು.

" ನಾನು ಬಂದಕಾರ್ಯಕ್ಕೆ ನೀನು ಬಂದೆ
ನಾನು ನೀನು ಬಂದಕಾರ್ಯಕ್ಕೆ ಪ್ರಭುದೇವರು ಬಂದರು.
ಕಲ್ಯಾಣವೆಂಬ ಪ್ರಣತಿಯಾಯಿತ್ತು
ನಾನೇ ಬತ್ತಿಯಾದೆ, ನೀವೇ ತೈಲವಾದಿರಿ,
ಪ್ರಭುದೇವರು ಜ್ಯೋತಿಯಾದರು."

ಆದರೆ " ಒಂದು ಕಾಲಕ್ಕೆ ಕಲ್ಯಾಣವೆಂಬ ಪ್ರಣತಿ ಒಡೆಯಿತ್ತು, ಎಣ್ಣೆ ಒರೆಯಿತ್ತು, ಬತ್ತಿ ಕಂದಿತ್ತು, ಜ್ಯೋತಿ ನಂದಿತ್ತು " ಎಂದು ಸರ್ವಸ್ವವನ್ನೂ, ಸಮಸ್ತ ಶರಣರನ್ನೂ ಅವರಿಗೊಪ್ಪಿಸಿ ಕೂಡಲಸಂಗಮದತ್ತ ಸಾಗಿದರು.

ಚೆನ್ನಬಸವಣ್ಣನವರು ಎಲ್ಲ ಶರಣರಿಗೆ ಕೈ ಮುಗಿದು ತಮತಮಗೆ ಉಚಿತವಾದ ಸುರಕ್ಷಿತವೆನಿಸುವ ಸ್ಥಲಗಳಿಗೆ ತೆರಳಬೇಕೆಂದು ಬಿನ್ನವಿಸಿಕೊಳ್ಳುತ್ತಾರೆ. ಚೆನ್ನಬಸವಣ್ಣನವರು ಇನ್ನುಳಿದ ಶರಣರೊಡನೆ ಉಳವಿಗೆ ಆಗಮಿಸುತ್ತಾರೆ. ಗಣಪರ್ವವನ್ನೆಸಗುತ್ತ ಸಕಲ ಶರಣರು ಸುಖಸಂತೋಷದಿಂದಿರುತ್ತಿರಲು

"ಬಳಿಕ ಶ್ರೀ ಚೆನ್ನೇಶ ಬೂದಿಗೆ
ತೊಳೆಪ ಮುಖಕಾಂತಿಯಲಿ ಪೇಳ್ದನು
ಇಳೆಯೊಳೆಲ್ಲೆಡೆ ಸಂಚರಿಸಿ ಧರ್ಮವನು ಸಾರಲ್ಕೆ।"

ಬಸವ ತಂದೆಯ ತತ್ವಗಳ ನೀ-
ವೊಸೆದು ಎಲ್ಲೆಡೆಗಳಲಿ ಹಬ್ಬಿಸಿ
ಪೊಸಕಳೆಯ ಜನರಲ್ಲಿ ತುಂಬುತೆ ಸಾಗುವುದು ಮುಂದೆ॥

ವಸುಧೆಯೊಳೇಳ್ನೂರು ಎಪ್ಪ-
ತ್ತೈಸೆವ ಸಂವಂತ್ಸರವ ದಾಂಟಿಸಿ
ಮಿಸುಪಲಿಂಗದೊಳೈಕ್ಯವಾಗುವುದೆಂದು ಜೆಸಸಿದನು॥

ನೀವು ಏಳುನೂರೆಪ್ಪತ್ತು ವರುಷ ಪರಿಯಂತ ಅಲ್ಲಲ್ಲಿ ಸಂಚರಿಸಿ ತಪಸ್ಸನ್ನಾಚರಿಸಿ ಬಸವ ವಚನಗಳನ್ನೂ, ತತ್ತ್ವಗಳನ್ನೂ. ಭಕ್ತಿಯನ್ನೂ, ದಾಸೋಹಂಭಾವವನ್ನೂ ಪ್ರಚಾರ ಮಾಡಿ ನಂತರ ಐಕ್ಯರಾಗಬೇಕೆಂದು ಹಾರೈಸುತ್ತಾರೆ.

ಬೂದಿಸ್ವಾಮಿಗಳು ತಪಗೈಧ ತಾಣಗಳು ಕರ್ನಾಟಕದ ಪ್ರತಿಯೊಂದು ತಾಲೂಕುಗಳಲ್ಲಿಯೂ ಬೂದೀಸ್ವಾಮಿಯ ಮಠ, ಪ್ರಭುಗದ್ದಿಗೆ,ಬೂದಿಯಬಸವ, ತೈಲಬಸವ ಮೊದಲಾದ ಹೆಸರುಗಳಿಂದ ಪ್ರಚಲಿತವಾಗಿರುವದನ್ನು ಕಾಣಬಹುದಾಗಿದೆ. ಕಲ್ಯಾಣದಲ್ಲಿ ಬೂದಿಸ್ವಾಮಿಗಳು ತಪಗೈದ ಗವಿಯಿದೆ. ತೆಲಗು, ಕೇರಳ, ಮಹಾರಾಷ್ಟ್ರ, ಗುಜರಾತ ಪ್ರಾಂತಗಳಲ್ಲಿ, ಶ್ರೀಶೈಲ ಹಿಮವತ್‌ಕೇದಾರ ನೇಪಾಳ, ಮುಂಬಯಿ ಮೊದಲಾದ ಸ್ಥಳಗಳಲ್ಲಿ ಬೂದೀಸ್ವಾಮಿ ಮಠಗಳು, ಬೂದೀಶ್ವರ ಲಿಂಗಗಳು ಸ್ಥಾಪಿತವಾದುದನ್ನು ನಾವು ಕೇಳುತ್ತೇವೆ.

ಶ್ರೀ ಬೂದೀಸ್ವಾಮಿಗಳು ದೀರ್ಘ ಕಾಲಾವಧಿಯವರೆಗೆ ಬಾಳಿರುವುದರಿಂದ ದೇಶದಾದ್ಯಂತ ಸಂಚರಿಸಿ ಅನಂತ ಲೀಲೆಗಳನ್ನೆಸಗಿದ್ದಾರೆ. ಆಯಾಯ ಕಾಲದ ತಪಸ್ವಿಗಳನ್ನೂ, ಯೋಗಿಗಳನ್ನೂ, ತತ್ತ್ವಜ್ಞಾನಿಗಳನ್ನೂ, ಕವಿಗಳನ್ನೂ ಶರಣ ಶರಣೆಯರನ್ನೂ, ಅನೇಕ ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸಿದ್ದಾರೆ. ಅವರು ಸಂಚರಿಸಿದ ಸ್ಥಲಗಳು ಮತ್ತು ಮಾಡಿದ ಮಹಿಮೆಗಳು ಅಪರಿಮಿತವಾಗಿವೆ. ನಾವು ಅವುಗಳನ್ನು ತಿಳಿದಿರುವುದು ಅತ್ಯಲ್ಪವಾಗಿದೆ. ಶೋಧಿಸಿದಂತೆ ಅವರ ಹೊಸ ಹೊಸ ಲೀಲೆಗಳು ಎಷ್ಟೋ ನಮ್ಮ ಗಮನಕ್ಕೆ ಈಗಲೂ ಬರುತ್ತಲಿವೆ.

ಬೂದಿಸ್ವಾಮಿಗಳು ಅಸಾಧಾರಣ ತಪಶ್ಚರ್ಯದಿಂದ ಪೂಜ್ಯರಾಗಿ ಲೋಕಮಾನ್ಯರಾಗಿದ್ದಾರೆ. ಬೂದಿಸ್ವಾಮಿಗಳನ್ನು ಮನೆದೇವರೆಂದೂ ಕುಲದೇವರೆಂದೂ ಆರಾಧಿಸುತಲಿದ್ದಾರೆ.

ಯೋಗಶಾಸ್ತ್ರದಲ್ಲಿ ಯೋಗಸಿದ್ಧಿಯಿಂದ ಅನಂತಾನಂತ ಲೀಲೆಗಳನ್ನು ಸಾಧಿಸಬಹುದೆಂದೂ. ಅಹಂಕಾರ ಸಿದ್ಧಿಯಿಂದ ಮೃತ್ಯುವನ್ನೂ, ಕಾಲವನ್ನೂ ಜಯಿಸಿ ಇಚ್ಛಾಮರಣಿಯಾಗಬಹುದೆಂದೂ ಹಿಂದೆ ನಿರೂಪಿತವಾಗಿದೆ.

ಇಂದಿನ ವಿಜ್ಞಾನ ಯುಗದಲ್ಲಿ ಸಾವಿರಾರು ವರುಷ ಮನುಷ್ಯನು ಬಾಳಬಹುದೆಂಬ ಮಾತನ್ನು ನಂಬಬಹುದೇ? ನಮಗೆ ಅಸಾಧ್ಯ, ಅಸಂಭವವಾದುದನ್ನು ಅಸತ್ಯವೆಂದು ಹೇಳಬಾರದು. ನಾವು ಇಂದು ಯೋಗಸಾಧನೆಯಿಂದ ಮನಸ್ಸಂಯಮದಿಂದ ಬಹುದೂರವಾಗಿದ್ದೇವೆ. ಆದರಿಂದ ಪೂರ್ವಕಾಲದ ನಮ್ಮ ಋಷಿಗಳ ಶಾಸ್ತ್ರ ಯೋಗಸಾಧನೆಗಳನ್ನು ಅಸತ್ಯವೆಂದು ಭಾವಿಸುತ್ತೇವೆ.

ವಿಜ್ಞಾನದಲ್ಲಿ ಮುಂದುವರಿದ ಅಮೇರಿಕ, ರಶಿಯಾ ಮೊದಲಾದ ರಾಷ್ಟ್ರಗಳ ವಿಜ್ಞಾನಿಗಳು, ತತ್ತ್ವಜ್ಞಾನಿಗಳು ಭಾರತೀಯ ಯೋಗದ ಮಹತ್ವವನ್ನು ಅರಿತುಕೊಳ್ಳಲು ಉತ್ಸುಕರಾಗಿರುವುದು ಒಂದು ಶುಭ ಸೂಚನೆಯಾಗಿದೆ. ಕರ್ನಾಟಕದಲ್ಲಿ ಅತ್ಯುನ್ನತ ಮಟ್ಟದಲ್ಲಿರುವ "**ಸಂಯುಕ್ತ ಕರ್ನಾಟಕ**" ದಿನಪತ್ರಿಕೆಯ ದಿ. ೯-೭-೭೨ನೆಯ ಸಂಚಿಕೆಯಲ್ಲಿ "**ಧ್ಯಾನಸಂಜೀವಿನಿ**" ಎಂಬ ಸಂಪಾದಕೀಯ ಲೇಖನವು ತುಂಬ ಮನನೀಯವಾಗಿದೆ.

"ಹಿಮಾಲಯದಲ್ಲಿ ಆರೇಳುನೂರು ವರ್ಷ ಆಯುಷ್ಯದ ಯೋಗಿಗಳಿದ್ದಾರೆ" ಎಂದು ಹೇಳಿದರೆ ಭಾರತೀಯರಂತೂ ನಂಬುತ್ತಿದ್ದರು. ಜೊತೆಗೆ ಈಗ ಪಾಶ್ಚಾತ್ಯರೂ ನಂಬುವಂಥ ಪರಿಸ್ಥಿತಿಯುಂಟಾಗಿದೆ. "ಈ ಯೋಗಿಗಳು ತಮ್ಮ ಅಪಾರವಾದ ಯೋಗ ಸಾಮರ್ಥ್ಯದಿಂದ ಬಳಿಸಾರಿಬ ಮೃತ್ಯುವನ್ನು ವಂಚಿಸಿ ಪುನಃ ಶತಾಯುಷ್ಯವನ್ನು ಪಡೆಯುತ್ತಿದ್ದರು." ಎಂದು ಹೇಳಿದಾಗ ಆಶ್ಚರ್ಯ ಪಡುತ್ತಿದ್ದ ನಾವು ಇಂದು ಅದರ ರಹಸ್ಯ ಭೇದಿಸುವಲ್ಲಿ ಸಮರ್ಥರಾಗಿದ್ದೇವೆ ಎಂದು ಅಮೇರಿಕೆಯ ಹಾರ್ವರ್ಡ ವಿಶ್ವವಿದ್ಯಾಲಯದ ಡಾ. ರಾಬರ್ಟ ವ್ಯಾಲೇಸ ಹಾಗೂ ಡಾ. ಹರ್ಬರ್ಟ ಬೆನ್‌ಸನ್ನರು ಧೈರ್ಯದಿಂದ ಹೇಳುತ್ತಲಿದ್ದಾರೆ. ಯೋಗದಿಂದ ಮಾನವರು ತಮ್ಮ ಜಾಡ್ಯವನ್ನು ನಿವಾರಿಸಿಕೊಳ್ಳಬಲ್ಲರು ಎಂಬುದನ್ನು ಅನೇಕ ಪ್ರಯೋಗಗಳ ಮೂಲಕ ಮನಗಂಡಿದ್ದಾರೆ.

ಧ್ಯಾನವೆಂದರೆ ಯೋಗಸಾಧನೆಯ ಮೊದಲನೆಯ ಮೆಟ್ಟಲು. ಯಾವುದಾದರೊಂದು ವಸ್ತುವಿನಲ್ಲಿ ನಮ್ಮ ಮನಸ್ಸನ್ನು ಸಂಪೂರ್ಣವಾಗಿ ಕೇಂದ್ರೀಕರಿಸುವದರಿಂದ, ತದೇಕ ಚಿತ್ತದಿಂದ, ತಲ್ಲೀನವಾಗುವದರಿಂದ ದೇಹಕ್ಕೆ ಸಂಪೂರ್ಣ ವಿಶ್ರಾಂತಿ ದೊರೆತು ಚಿಂತೋದ್ವೇಗಗಳೆಲ್ಲ ನಷ್ಟವಾಗಿ ಪ್ರಸನ್ನತೆಯಿಂದ ಚಿತ್ತಶಾಂತಿ ಲಭಿಸಿ ಆನಂದದಿಂದ ಮನುಷ್ಯನ ಆಯುಷ್ಯ ವರ್ಧಿಸುತ್ತದೆ.

ಡಾ. ವ್ಯಾಲೇಸ, ಡಾ. ಬೆನ್‌ಸನ್‌ರು ಇದೆಲ್ಲವನ್ನು ವೈಜ್ಞಾನಿಕವಾಗಿ ಪರೀಕ್ಷಿಸಿ ಯೋಗಸಾಧನೆಯಿಂದ ಅಪಾರ ಲಾಭವಿದೆಯೆಂದು ಮನಗಂಡು

ಉಮೇಶಯೋಗಿಗಳು ಬೋಧಿಸಿರುವ ಧ್ಯಾನಮಾರ್ಗವನ್ನು ಪ್ರಶಂಸಿಸಿದ್ದಾರೆ ಯೋಗಮಾರ್ಗದ ಮೊದಲ ಘಟ್ಟದ ಪರಿಣಾಮವನ್ನೇ ಇವರು ಇಷ್ಟು ಹೊಗಳಿದರೆ ಯೋಗಸಾಧನೆ ಸಂಪೂರ್ಣ ಸಿದ್ಧಿಸಿದರೆ ಕೈಲಾಸವೇ ಕೈಸೇರಿ ದಂತಾಗುತ್ತದೆಯೆಂದು ಮುಂತಾಗಿ ಹೇಳಲಾಗಿದೆ.

ಸಾಮಾನ್ಯರಾದ ನಾವು ಪ್ರಕೃತಿ ನಿಯಮಕ್ಕನುಸರಿಸಿ ಪಂಚಭೂತಗಳಿಗೆ ಆಧೀನರಾಗಿರುತ್ತೇವೆ. ಯೋಗಿಗಳು ಪ್ರಕೃತಿ ನಿಯಮಗಳನ್ನು ಮೀರಿ ಪಂಚ ಭೂತಗಳನ್ನೇ ತಮ್ಮ ಆಧೀನ ಮಾಡಿಕೊಂಡಿರುತ್ತಾರೆ. ಸ್ವಾಭಾವಿಕವಾಗಿ ನಮ್ಮ ಶ್ವಾಸೋಚ್ಛ್ವಾಸವು ದಿನವೊಂದಕ್ಕೆ ಇಪ್ಪತ್ತೊಂದು ಸಾವಿರದ ಆರುನೂರು ಗಮನಾಗಮನವುಳ್ಳದ್ದಾಗಿದೆ. ಈ ಗಮನಾಗಮನದ ವೇಗವನ್ನು ಯೋಗಿಗಳು ರೇಚಕ, ಪೂರಕ, ಕುಂಭಕ ಸಾಧನೆಗಳಿಂದ ಪ್ರತಿಬಂಧಿಸಿ ಪ್ರಾಣವಾಯುವನ್ನು ತಮ್ಮ ಸ್ವಾಧೀನಪಡಿಸಿಕೊಂಡು ಆಯುಷ್ಯವನ್ನು ಬೆಳೆಸುತ್ತ ಇಚ್ಛಾಮರಣಿ ಗಳಾಗುತ್ತಾರೆ. ಪ್ರಕೃತಿ ನಿಯಮಾನುಸಾರವಾಗಿ ಒದಗುವ ಮರಣವನ್ನು ಗೆಲ್ಲುತ್ತಾರೆ.

ಮತ್ತೊಂದು ವಿಧವಾಗಿ ಹೇಳುವುದಾದರೆ ಈಡ, ಪಿಂಗಳ ಎಂಬ ಎರಡು ನಾಳಗಳಿರುತ್ತವೆ. ಪೃಥ್ವಿಸ್ವರ. ಅಪ್ಪುಸ್ವರ. ತೇಜಸ್ವರ, ವಾಯು ಸ್ವರ, ಆಕಾಶಸ್ವರ ಈ ಪಂಚಸ್ವರಗಳು ಒಂದೊಂದು ನಾಳದಲ್ಲಿ ವಿಶೇಷವಾಗಿ ಚರಿಸುವದರಿಂದ ಆಯುಷ್ಯವು ಕ್ಷಯವಾಗುತ್ತದೆ.

ದಿವಾರಾತ್ರಿ ಒಂದೇ ನಾಳದಲ್ಲಿ ನಡೆದರೆ ಆರು ತಿಂಗಳು ಆಯುಷ್ಯ.
ಐವತ್ತು ಗಳಿಗೆ ನಡೆದರೆ ಐದು ವರ್ಷ ಆಯುಷ್ಯ.
ನಾಲ್ವತ್ತು ಗಳಿಗೆ ನಡೆದರೆ ಹತ್ತು ವರ್ಷ ಆಯುಷ್ಯ.
ಮೂವತ್ತು ಗಳಿಗೆ ನಡೆದರೆ ಹದಿನೈದು ವರ್ಷ ಆಯುಷ್ಯ.
ಇಪ್ಪತ್ತು ಗಳಿಗೆ ನಡೆದರೆ ಮೂವತ್ತು ವರ್ಷ ಆಯುಷ್ಯ.
ಹದಿನೈದು ಗಳಿಗೆ ನಡೆದರೆ ನಾಲ್ವತ್ತು ವರ್ಷ ಆಯುಷ್ಯ.
ಹತ್ತು ಗಳಿಗೆ ನಡೆದರೆ ಐವತ್ತು ವರ್ಷ ಆಯುಷ್ಯ.
ಎಂಟು ಗಳಿಗೆ ನಡೆದರೆ ಅರವತ್ತು ವರ್ಷ ಆಯುಷ್ಯ.
ಏಳು ಗಳಿಗೆ ನಡೆದರೆ ಎಂಭತ್ತು ವರ್ಷ ಆಯುಷ್ಯ.
ಆರು ಗಳಿಗೆ ನಡೆದರೆ ನೂರು ವರ್ಷ ಆಯುಷ್ಯ.
ಐದು ಗಳಿಗೆ ನಡೆದರೆ ನೂರಾ ಇಪ್ಪತ್ತು ವರ್ಷ ಆಯುಷ್ಯ.

ಯೋಗಿಗಳ ಸ್ವಾಭಾವಿಕವಾದ ಈ ಗತಿಯನ್ನು ಯೋಗ ಸಾಧನೆಯಿಂದ ಕಡಿಮೆ ಮಾಡುತ್ತ ಮಾಡುತ್ತ ಆಯುಷ್ಯವನ್ನು ಬೆಳೆಯಿಸಿಕೊಳ್ಳುತ್ತಾರೆ.

ಮಹಾಯೋಗಸಿದ್ಧರಾದ ಬೂದಿಸ್ವಾಮಿಗಳು ಯೋಗಸಾಧನೆಯ ಸಾಮರ್ಥ್ಯದಿಂದ ಏಳುನೂರು ಎಪ್ಪತ್ತೈದು ವರ್ಷ ಬಾಳಿದರೆಂದು ಹೇಳಿದರೆ ಅಸಂಭವ ಅತ್ಯುಕ್ತಿಯಲ್ಲ. ಅದಕ್ಕೆ ಯಾರೂ ವಿಸ್ಮಯಪಡಬೇಕಾಗಿಲ್ಲ.

ಮಹಾಮಹಿಮರಾದ ಬೂದೀಸ್ವಾಮಿಗಳ ಚರಿತ್ರೆಯನ್ನು ಪುರಾಣ ರೂಪದಲ್ಲಿ ಬರೆಯಿಸಿ ಪ್ರಕಟಿಸಬೇಕೆಂಬ ಬಹುದಿವಸದ ಹಂಬಲವಿತ್ತು. ಈ ವಿಚಾರವನ್ನು ಒಂದು ಸಲ ಧಾರವಾಡ ಮುರುಘಾಮಠಾಧ್ಯಕ್ಷರಾದ ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳವರಲ್ಲಿ ಯಾವ ಕವಿಗಳಿಂದ ಬರೆಯಿಸಬೇಕೆಂದು ನನ್ನ ಅಪೇಕ್ಷೆಯನ್ನು ನಿವೇದನೆ ಮಾಡಿಕೊಂಡೆ. ಶ್ರೀಗಳು ತುಂಬಾ ಸಂತೋಷಚಿತ್ತರಾಗಿ "ನೀವು ಯೋಚಿಸಬೇಡಿ. ಸಜ್ಜನರು, ಸುಶೀಲರು, ಸುಸಂಸ್ಕೃತರು ಮೇಲಾಗಿ ನಮ್ಮವರೇ ಆದ ಬ್ಯಾಳಿ ಕಲ್ಯಾಣಪ್ಪನವರಿದ್ದಾರೆ. ಅವರಿಂದ ಬರೆಯಿಸೋಣ" ಎಂದು ಅಪ್ಪಣೆ ಮಾಡಿ, ಅವರನ್ನು ಬರಮಾಡಿಕೊಂಡು "ಕಲ್ಯಾಣಪ್ಪನವರೇ, ನೋಡಿ. ಬೂದೀಸ್ವಾಮಿಗಳು ಬಹಳ ದೊಡ್ಡವರು. ಅವರ ಚರಿತೆಯನ್ನು ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಬರೆಯಿರಿ"ಎಂದು ಅಂತಃಕರಣದಿಂದ ಅಪ್ಪಣೆ ಮಾಡಿದರು.

ಕಲ್ಯಾಣಪ್ಪನವರು ಸನ್ನಿಹಿತವಾದ ಸುಸಂಧಿಯನ್ನು ಸಾರ್ಥಕಮಾಡಿಕೊಳ್ಳಬೇಕೆಂದು ಅದಕ್ಕೆ ಬಹು ಸಂತೋಷದಿಂದ ಸಮ್ಮತಿಸಿದರು. ನಾವು ಒದಗಿಸಿಕೊಟ್ಟ ಎಲ್ಲ ವಿಷಯಗಳನ್ನು ಕ್ರಮಗೊಳಿಸಿ **"ಭಾಮಿನಿ ಷಟ್ಪದಿ"** ಯಲ್ಲಿ **"ಬೂದೀಶ್ವರಲೀಲೆ"** ಯನ್ನು ರಚಿಸಿದ್ದಾರೆ. ಇದು ೧೧೫೩ ಪದ್ಯಗಳಿಂದ ಯುಕ್ತವಾಗಿದೆ.

ಪುರಾಣಗಳು ಹಿಂದಿನ ಕಾಲದಲ್ಲಿದ್ದ ಮಹಾ ಪುರುಷರ ಚರಿತ್ರೆಗಳನ್ನು ವಿಸ್ತರಿಸಿ ಹೇಳುತ್ತವೆ. ಆ ಮಹಾನುಭಾವರು ದಿನಗಟ್ಟಳೆಯ ಜೀವನ ಕ್ರಮದಲ್ಲಿಯೂ, ವಿಶೇಷ ಸನ್ನಿವೇಶಗಳಲ್ಲಿಯೂ ಅನುಸರಿಸುತ್ತಿದ್ದ ರೀತಿ ನೀತಿಗಳನ್ನೂ ಆಚರಿಸುತ್ತಿದ್ದ ಧರ್ಮವನ್ನೂ ವರ್ಣಿಸುತ್ತವೆ.

ಪುರಾಣವ್ಯಾಸಂಗದಿಂದ ನಮ್ಮ ಜೀವನಕ್ರಮದಲ್ಲಿ ಬಂದೊದಗುವ ಸಮಸ್ಯೆಗಳನ್ನು ಪರಿಹರಿಸಿಕೊಂಡು ಸರಿಯಾದ ರೀತಿಯಲ್ಲಿ ಮುಂದುವರಿಯಲು

ಸಹಾಯವಾಗುತ್ತದೆ. ಮಹನೀಯರ ನಡೆ ನುಡಿಗಳು ನಮ್ಮನ್ನು ಸಂಸ್ಕರಿಸಿ ಸತ್ಕಾರ್ಯದಲ್ಲಿ ಪ್ರವೃತ್ತಿಯೂ ಅಸತ್ಕಾರ್ಯದಲ್ಲಿ ನಿವೃತ್ತಿಯೂ ಉಂಟಾಗುವಂತೆ ಮಾಡುತ್ತವೆ. ಅರ್ಥಕಾಮಗಳಲ್ಲೇ ಆಸಕ್ತವಾಗಿರುವ ಜನಗಳ ಮನಸ್ಸನ್ನು ಧರ್ಮ ಮೋಕ್ಷಗಳತ್ತ ಒಲಿಯುವಂತೆ ಮಾಡುವುದೇ ಪುರಾಣಗಳ ಉದ್ದೇಶವಾಗಿದೆ. ಬೂದೀಸ್ವಾಮಿಗಳು ತಮ್ಮ ಅನುಪಮವಾದ ಯೋಗಸಾಧನೆಯ ಪ್ರಭಾವದಿಂದ ಘನತೆ ಗೌರವಗಳನ್ನು ಸಂಪಾದಿಸಿದರು. ಜಗವ ಪಾವನಗೊಳಿಸಿದರು.

"ನಡೆವೊಡೆ ಭೂಮಿ ಪಾವನ ಮಹಾಶರಣಂ, ಸಹಜಾನುಭಾವದಿಂ
ನುಡಿದೊಡೆ ಸರ್ವ ಜೀವಿಗಳ ಜನ್ಮನಿವಾರಣ, ವೊಮ್ಮೆ ನೋಡಿ ಕಂ-
ಡೊಡವನೆ ಸತ್ಯತಾರ್ಥಕರಪಂಕಜ ಮುಂದೆಯು ಮೇಲೆ ಬಂದು ಬೀ-
ಳ್ದೊಡೆ ಕುಲಕೋಟಿಯೆಲ್ಲಕೆ ಸಮುದ್ಧರಣಂ ಗುರು ಶಂಕರೇಶ್ವರಾ"

"ಕಂಡುವೆಲ್ಲಾ ಪಾವನ, ಕೇಳುವುದೆಲ್ಲಾ ಪರಮ ಬೋಧೆ, ಮುಟ್ಟಿದುದೆಲ್ಲಾ ಪರುಷದ ಸೋಂಕು, ಒಡನೆ ನುಡಿದವರೆಲ್ಲಾ ಸದ್ಯೋನ್ಮುಕ್ತರು, ಸುಳಿದ ಸುಳುಹೆಲ್ಲಾ ಜಗತ್ಪಾವನ, ಮುಟ್ಟಿದ ಧರೆಯೆಲ್ಲವೂ ಅವಿಮುಕ್ತ ಕ್ಷೇತ್ರ, ಸೋಂಕಿದ ಜಲವೆಲ್ಲವೂ ಪುಣ್ಯತೀರ್ಥಂಗಳು, ಶರಣೆಂದು ಭಕ್ತಿ ಮಾಡಿದವರೆಲ್ಲರು ಸಾಯುಜ್ಯರು, ಗುಹೇಶ್ವರನ ಶರಣರ ಸುಳುಹಿನ ಸೊಗಸನ್ನುಪಮಿಸಬಾರದು"

ಬೂದಿಸ್ವಾಮಿಗಳು ಇಂತಹ ಮಹಾ ಮಹಿಮರಾಗಿದ್ದರು. "ಪಾವನ ಚರಿತ ಶರಣರಂ ನೆನೆವುದೇ ಘನಮುಕ್ತಿಪದಂ" ಎಂಬ ಮಹದುಕ್ತಿಯಂ ನೆನೆದು ಕಲ್ಯಾಣಪ್ಪನವರು ಬೂದೀಸ್ವಾಮಿಗಳ ಚರಿತೆಯನ್ನು ಪುರಾಣ ರೂಪದಲ್ಲಿ ಬರೆದು ಮಹದುಪಕಾರ ಮಾಡಿದ್ದಾರೆ.

ಕಲ್ಯಾಣಪ್ಪನವರು ವಿದ್ಯಾವಿನಯ ಸಂಪನ್ನರು, ಸುಸಂಸ್ಕೃತರು, ಅನುಭಾವಿಗಳು, ವೀರಶೈವ ತತ್ತ್ವ ಜ್ಞಾನಿಗಳು ಆಗಿದ್ದಾರೆ. ಅವರಿಂದ ರಚಿತವಾದ ಈ **"ಬೂದೀಶ್ವರಲೀಲೆಯು"** ಶಿವಶರಣರ ರೀತಿ ನೀತಿ ತತ್ತ್ವಗಳನ್ನರಿತು ಹಿತ ಮಿತವಾದ, ಅರ್ಥಪೂರ್ಣವಾದ, ಸುಂದರ ಸುಲಲಿತವಾದ ಸುಲಭ ಶೈಲಿಯಲ್ಲಿ ಭಕ್ತಿಪುರಸ್ಸರವಾಗಿಯೂ ಮನೋಹರವಾಗಿಯೂ ಚಿತ್ರಿತವಾಗಿದೆ.

“ಸರ್ವ ವಿದ್ಯಾನಿಳಯೆ ನಿರ್ಮಳೆ
ಸರ್ವಬುದ್ಧಿಯ ಕಣ್ಗೆಳು ಕೋಮಳೆ
ಸರ್ವಸಿದ್ಧಿಗಳಾದಿ ಕಾರಣಳಾದ ಶರ್ವಾಣಿ।
ಸರ್ವ ಜೀವರ ತೋರಿಕೆಗೆ ಮೇಣ್
ಸರ್ವಪ್ರಕೃತಿಗೆ ಮೂಲಮಾಗಿಹ
ಸರ್ವಮಂಗಳೆ ನಿನ್ನಯಡಿದಾವರೆಗೆ ನತನಪ್ಪೆ ॥

ಇಲ್ಲಿ ಸರ್ವಮಂಗಳೆಯ ಸ್ವರೂಪದರ್ಶನವು ಸಾರವತ್ತಾಗಿ ಸಮರ್ಪಕವಾಗಿ ಬಂದಿದೆ.

“ವಸುಧೆಯಂ ಕೈಲಾಸ ಮಾಡಿದ
ಬಸವ ತಂದೆಯ ಪಾದಪದ್ಮಕೆ
ಒಸೆದು ನಾಂ ಒಂದಿಸುವೆ ನಿತ್ಯವು ಮಂತ್ರ ಮೂರುತಿಗೆ।
ಅಸಮ ಶಿವಯೋಗೀಶ್ವರರು ತಾವ್
ಬಸವ ಮಂತ್ರವ ಜಪಿಸುತಿರ್ಪರು
ಬಸವ ನೀನೆನ್ನಯ ಕೃತಿಗೆ ಮಂಗಲವ ನೀಡುವುದು ॥”

ಬಸವನ ಪೂಜ್ಯತೆಯನ್ನೂ, ಘನತೆಯನ್ನೂ ಆತನ ನೈಜಸ್ವರೂಪವನ್ನೂ ಚಿತ್ರಿಸಿ ಅಪಾರ ಭಕ್ತಿ ಭಾವದಿಂದ ಕಂಡು ಹಾಡಿ ಹರಸಿರುವುದು ತುಂಬ ಹೃದಯಂಗಮವಾಗಿದೆ.

“ವೀರಪುರುಷರ ನಾಡು ಕನ್ನಡ
ಚಾರುಕವಿಗಳ ಬೀಡು ಕನ್ನಡ
ಸಾರಶರಣರ ದಾಸರಾ ನೆಲೆವೀಡು ಕರುನಾಡು।
ಭೂರಿ ಸಾಮ್ರಾಜ್ಯಗಳ ನೆಲೆವನೆ
ಚಾರುವನ ಸೌಂದರ್ಯದೆಲೆವನೆ
ನಾರಿ ನರರೌದಾರ್ಯದಾ ಸಿರಿವನೆಯು ಕರುನಾಡು ॥”

“ಯೋಗಸಿದ್ಧರ ನಾಡು ಕನ್ನಡ
ಭೋಗಿಗಳ ನೆಲೆವೀಡು ಕನ್ನಡ
ತ್ಯಾಗವೀರರ ತೌರು ಕನ್ನಡ ವಾಸ್ತು ಶಿಲ್ಪಿಗಳ।
ರಾಗರಂಜಿತ ಬೀಡು ಕನ್ನಡ
ವೇಗಳುಂ ತಲೆಯೆತ್ತಿ ಮೆರೆವುದು
ಬಾಗಿದಾತಲೆ ಮುಗಿದ ಕೈಗಳ ಭಕ್ತರಾಶ್ರಮವು ॥”

ಕವಿಯು ತನಗಿರುವ ಕನ್ನಡ ನಾಡಿನ ಮೇಲಿನ ಪ್ರೇಮಾದರಗಳನ್ನು ಕನ್ನಡ ನಾಡಿನ ಸ್ಥಿತಿಗಳನ್ನು ಹರ್ಷಾಭಿಮಾನದದಿಂದ ಹಾಡಿದ್ದಾನೆ.

ನೊಸಲಿನೊಳೆಸೆಯುತಿದೆ ಭಸ್ಮವು
ಮಿಸುಪ ರುದ್ರಾಕ್ಷಿಯ ಸರವು ತಾ–
ನೊಸೆದು ಕಂಠದಿ ಶೋಭಿಸುತ್ತಿದೆ ಇಷ್ಟಲಿಂಗವದು ।
ಅಸಮ ಮಹಿಮನ ಉರದೊಳೊಪ್ಪಿದೆ
ಎಸೆವ ಕಾವಿಯ ವಸನ ಮೈಯೊಳು
ರಸನೆಯೊಳ್ಬಸವೇಶ ನಾಮವು ಒಪ್ಪುತಿಹವೈಸೆ ॥"

"ಜಡೆಯು ಶಿರವನ್ನೆಲ್ಲ ವ್ಯಾಪಿಸೆ
ಬಿಡದೆ ಗಡ್ಡವು ಎದೆಯ ನಡುವಿರೆ
ಪಿಡಿದ ಬಲಗೈಯೊಳು ಕಮಂಡಲು ಠೀವಿಯಿಂ ಬೆಳಗೆ ।
ಎಡದ ಕೈಯೊಳು ಯೋಗದಂಡವು
ಒಡನೆ ಬಗಲೊಳು ವಚನಗ್ರಂಥವು
ಅಡಿಯೊಳಾವಿಗೆ ಶೋಭಿಸುತ್ತಿರೆ ಯೋಗಿ ಕಣ್ಗೆಸೆದ ॥"

"ಬಸವ ಮಂತ್ರವು ಸತತ ಯೋಗಿಯ
ರಸನೆಯೊಳೋಲಾಡುತಿರ್ಪುದು
ಬಸವ ಬಸವಾ ಬಸವ ಶಿವನೇ ಎಂದು ಗದ್ಗದಿಸಿ ।
ಉಸುರುತಿರೆ ಎದೆದುಂಬಿ ಕಂಬನಿ-
ಯೊಸರುತಿರೆ ಮೈನವಿರು ಮೂಡಿರೆ
ಅಸಮ ಮಹಿಮನ ಬಸವ ಭಕ್ತಿಯು ಸೊಬಗನೇನೆಂಬೆ ॥"

ಕವಿಯು ಇಲ್ಲಿ ಬೂದೀಶ್ವರ ಯೋಗಿಯ ರೂಪು ಲಾವಣ್ಯವನ್ನೂ, ವೇಷ ಭೂಷಣಗಳ ನೈಜಸ್ಥಿತಿಯನ್ನೂ ಬಸವೇಶನಲ್ಲಿರುವ ಅಪಾರವಾದ ಭಕ್ತಿಯನ್ನೂ ಸರಳ ಸುಂದರ ಶೈಲಿಯಲ್ಲಿ ಭಕ್ತಿಭಾವದಿಂದ ಬಣ್ಣಿಸಿದ್ದಾನೆ.

"ಪರಶಿವನ ರೂಪಿಗಳು ಶರಣರು
ಧರೆಯೊಳಗೆ ಬಹು ಪುಣ್ಯವಂತರು
ಪರಮ ಸುಖಶಾಂತಿಯನು ಬೀರಿದ ಭಾಗ್ಯಶಾಲಿಗಳು ।

ಕುರುಹ ತೋರಿಸಿ ಅರುಹ ಜಾಗ್ರತ-
ವಿರಿಸಿದರು ಸದ್ಭಕ್ತ ಗಣಗಳ
ಕರುಣಾಶಾಲಿಗಳವರು ಸರ್ವರ ಲೇಸ ಬಯಸುವರು ॥"

ಇಂತು ಶರಣರ ನಿಲುವನ್ನೂ ಪವಿತ್ರತೆಯನ್ನೂ ಚೆನ್ನಾಗಿ ಬಣ್ಣಿಸಿದ್ದಾನೆ.

ಕಲ್ಯಾಣಪ್ಪನವರು **"ಬೂದೀಶ್ವರ ಲೀಲೆ"** ಯಲ್ಲಿ ಜಟಿಲವಾದ ತತ್ತ್ವಗತ ವಿಷಯಗಳನ್ನು ಸುಲಭವಾಗಿ, ಅರ್ಥಪೂರ್ಣವಾಗಿ, ಭಾವಪೂರ್ಣವಾಗಿ ಸರ್ವರ ಮನಮೆಚ್ಚುವಂತೆ ನಿರೂಪಿಸಿದ್ದಾರೆ. ಮಹಾತ್ಮರ ಯೋಗ್ಯತೆಗೆ ಎಲ್ಲಿಯೂ ಚ್ಯುತಿಬಾರದಂತೆ ಅನೇಕ ಪವಾಡಗಳನ್ನು ಯುಕ್ತಿಯುಕ್ತವಾಗಿ ರೂಪಿಸಿದ್ದಾರೆ. ಭಕ್ತಿ, ಜ್ಞಾನ, ವೈರಾಗ್ಯ, ಧರ್ಮ, ನೀತಿ, ತತ್ತ್ವಗಳ ಪ್ರತಿಪಾದನೆಯಿಂದ ಭಕ್ತರ ಭಾವನೆಯು ಶ್ರದ್ಧಾಭಕ್ತಿಗಳ ಕಡೆಗೆ ಎಳೆಸುವಂತೆ ಮಾಡಿದ್ದಾರೆ,

ಪರಮ ಪವಿತ್ರವಾದ **"ಬೂದೀಶ್ವರ ಲೀಲೆ"** ಯ ಕೃತಿ ರಚನೆಯಿಂದ ಕವಿಗಳು ಪುಣ್ಯ ಕೀರ್ತಿಗಳನ್ನು ಸಂಪಾದಿಸಿದ್ದಾರೆ. ತಮ್ಮ ಜೀವನವನ್ನು ಸಫಲ ಮಾಡಿಕೊಂಡಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವೀರಶೈವ ತತ್ತ್ವ ನಿರೂಪಣೆಯ ಇತಿಹಾಸದಲ್ಲಿ ತಮ್ಮ ಅಂಕಿತವು ಸ್ಥಿರವಾಗಿ ನಿಲ್ಲುವಂತೆ ಮಾಡಿದ್ದಾರೆ.

**'ಬೂದೀಶ್ವರ ಲೀಲೆ'** ಯ ಪವಿತ್ರ ಚರಿತ್ರೆಯಿಂದ ನಮ್ಮ ಜನತೆಯ ಜೀವನವು ಪಾವನವಾಗಲಿ, ಚಿತ್ತವು ನಿರ್ಮಲವಾಗಲಿ, ಹೃದಯದ ಸಂಸ್ಕಾರವಾಗಲಿ. ಪಾಪ ಪಲ್ಲಟವಾಗಲೆಂದು ಹಾರೈಸುತ್ತೇವೆ.

ಈ ಗ್ರಂಥವನ್ನು "ಶಿವಾದ್ವೈತ ಸಿದ್ಧಾಂತರತ್ನಂ" ಪಂಡಿತ ನಾಗಭೂಷಣ ಶಾಸ್ತ್ರಿಗಳು ಹಾಗು ಅವರ ಚಿರಂಜೀವರಾದ ಶ್ರೀ ಬಸವಣ್ಣ ಹಾಗು ಚೆನ್ನಬಸವಣ್ಣ ಇವರು ಶ್ರದ್ಧೆವಹಿಸಿ ಅಂದ ಚೆಂದವಾಗುವ ರೀತಿಯಲ್ಲಿ ಮುದ್ರಿಸಿಕೊಟ್ಟಿದ್ದಾರೆ, ಅವರ ಉಪಕೃತಿಯನ್ನು ಸದಾ ಸ್ಮರಿಸುತ್ತೇವೆ.

**ಹೊಸಹಳ್ಳಿ**
ದಿ. ೨೫-೮-೭೦

**ಶ್ರೀ. ಮ. ನಿ ಪ್ರ. ಪ್ರಭುಸ್ವಾಮಿಗಳು,**
ಶ್ರೀ ಬೂದೀಸ್ವಾಮಿ ಸಂಸ್ಥಾನಮಠ

# ಪದ್ಯ-ಪುಟಗಳ ಕೋಷ್ಟಕ



| ಸಂಧಿಗಳು | ಪದ್ಯಗಳ ಸಂಖ್ಯೆ | ಒಟ್ಟು ಪದ್ಯಗಳು | ಪುಟ ಸಂಖ್ಯೆ | ಪುಟದಿಂದ | ಪುಟದ ವರೆಗೆ |
|---|---|---|---|---|---|
| ಪೀಠಿಕಾ ಸಂಧಿ | ೫೯ | ೫೯ | ೧೬ | ೧ | ೧೬ |
| ೧ ನೆಯ | ೬೭ | ೧೨೬ | ೧೮ | ೧೭ | ೩೪ |
| ೨ ,, | ೪೫ | ೧೭೧ | ೧೨ | ೩೫ | ೪೬ |
| ೩ ,, | ೬೫ | ೨೩೬ | ೧೮ | ೪೭ | ೬೪ |
| ೪ ,, | ೬೩ | ೨೯೯ | ೧೬ | ೬೫ | ೮೦ |
| ೫ ,, | ೭೨ | ೩೭೧ | ೨೦ | ೮೧ | ೧೦೦ |
| ೬ ,, | ೬೨ | ೪೩೩ | ೧೫ | ೧೦೧ | ೧೧೫ |
| ೭ ,, | ೫೭ | ೪೯೦ | ೧೫ | ೧೧೬ | ೧೩೦ |
| ೮ ,, | ೪೬ | ೫೩೬ | ೧೨ | ೧೩೧ | ೧೪೨ |
| ೯ ,, | ೫೦ | ೫೮೬ | ೧೩ | ೧೪೩ | ೧೫೫ |
| ೧೦ ,, | ೭೪ | ೬೬೦ | ೧೯ | ೧೫೬ | ೧೭೪ |
| ೧೧ ,, | ೪೯ | ೭೦೯ | ೧೩ | ೧೭೫ | ೧೮೭ |
| ೧೨ ,, | ೬೪ | ೭೭೩ | ೧೭ | ೧೮೮ | ೨೦೪ |
| ೧೩ ,, | ೮೦ | ೮೫೩ | ೨೧ | ೨೦೫ | ೨೨೫ |
| ೧೪ ,, | ೬೯ | ೯೨೨ | ೧೮ | ೨೨೬ | ೨೪೩ |
| ೧೫ ,, | ೭೬ | ೯೯೮ | ೨೦ | ೨೪೪ | ೨೬೩ |
| ೧೬ ,, | ೫೬ | ೧೦೫೪ | ೧೫ | ೨೬೪ | ೨೭೮ |
| ೧೭ ,, | ೪೫ | ೧೦೯೯ | ೧೨ | ೨೭೯ | ೨೯೦ |
| ೧೮ ,, | ೫೪ | ೧೧೫೩ | ೧೪ | ೨೯೧ | ೩೦೪ |

* * *



೭೭೫ ವರುಷ ಬಾಳಿದ

**ಬೂದೀಮಹಾಸ್ವಾಮಿಗಳವರ ಗದ್ದುಗೆ**

ಶ್ರೀಗುರುಬಸವಲಿಂಗಾಯ ನಮಃ

# ಕಥಾಸಾರ

## ಪೀಠಿಕಾ ಸಂಧಿ

**ಪೀಠಿಕಾ ಸಂಧಿಯ ಮಂಗಲಾಚರಣದಲ್ಲಿ** ಕವಿಯು ತನ್ನ ಕಾವ್ಯವು ನಿರ್ವಿಘ್ನದಿಂದ ಪರಿಸಮಾಪ್ತಿಯಾಗಲೆಂದೂ ತನಗೆ ಸ್ಫೂರ್ತಿಯನ್ನೀಯಲು ಕೃಪಾಶೀರ್ವಾದವುಂಟಾಗಲೆಂದೂ ಕೆಳಗೆ ಕಾಣಿಸಿದಂತೆ ಮಹಾವಿಭೂತಿಗಳನ್ನು ಸ್ತುತಿಸಿದ್ದಾನೆ.

೧. **ಕೈಲಾಸದ ಶಿವಗಣಗಳು:—**

ಶಿವ, ಪಾರ್ವತಿ, ಗಣಪತಿ, ಷಣ್ಮುಖ, ವೀರಭದ್ರ, ನಂದಿ, ಭೃಂಗಿ.

೨. **ಶಿವಶರಣರು:—**

ಬಸವ, ಚೆನ್ನಬಸವ, ಅಲ್ಲಮಪ್ರಭು, ಸಿದ್ಧರಾಮ, ಕಾಶ್ಮೀರದ ಮಹಾದೇವ ಭೂಪಾಲ, ಮಡಿವಾಳ ಮಾಚಿದೇವ.

೩. **ಶಿವಶರಣೆಯರು:—**

ಅಕ್ಕಮಹಾದೇವಿ, ನೀಲಮ್ಮ, ನಾಗಮ್ಮ, ಲಿಂಗಮ್ಮ, ಲಕುಮಮ್ಮ, ಕಾಶ್ಮೀರ ಮಹಿಷಿ ಮಹಾದೇವಮ್ಮ, ಕದಿರೆ ರೆಮ್ಮವ್ವ, ಗುಡ್ಡಾಪುರದ ದಾನಮ್ಮ, ಬೊಂತಾದೇವಿ.

೪. **ಹಿಂದಿನ ಶಿವಕವಿಗಳು—**

ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಷಡಕ್ಷರ ಕವಿ, ಪಾಲ್ಕುರಿಕೆ ಸೋಮ, ಚಾಮರಸ, ಭೀಮಕವಿ, ವಿರೂಪಾಕ್ಷ ಪಂಡಿತ, ಮಗ್ಗಿ,

ಮಾಯಿದೇವ, ತೋಂಟದ ಸಿದ್ಧಲಿಂಗ, ಸರ್ವಜ್ಞ, ಕಲ್ಮಠದ ಪ್ರಭು, ಗುರುಬಸವಕವಿ, ಗುಬ್ಬಿಯ ಮಲ್ಲಣಾರ್ಯ, ಕರಿಬಸವಶಾಸ್ತ್ರಿ. ಬಸವಪ್ಪ ಶಾಸ್ತ್ರಿ.

೫ **ಕೈವಲ್ಯಕಾರರು;—**

ನಿಜಗುಣ, ಸರ್ಪಭೂಷಣ, ಮುಪ್ಪಿನ ಷಡಕ್ಷರಿ; ಬಾಲಲೀಲಾ ಮಹಾಂತ ಶಿವಯೋಗಿ.

೬. **ಆಧುನಿಕ ಶಿವಕವಿಗಳು:—**

ದಾವಣಗೆರೆಯ ಚಂದ್ರಶೇಖರ ಶಾಸ್ತ್ರಿಗಳು, ದ್ಯಾಂಪುರ ಚೆನ್ನಕವಿ. ಹುಕ್ಕೇರಿ ಸದಾಶಿವ ಶಾಸ್ತ್ರಿಗಳು, ಬಳ್ಳಾರಿ ನಾಗೇಶ ಶಾಸ್ತ್ರಿಗಳು.

೭. **ಶಿವಯೋಗಿಗಳು:—**

ಶ್ರೀ ಅಥಣಿ ಮುರುಗೇಶ. ಶ್ರೀ ಹಾನಗಲ್ಲ ಕುಮಾರೇಶ, ಧಾರವಾಡದ ಶ್ರೀ ಮೃತ್ಯುಂಜಯಪ್ಪಗಳು ಮತ್ತು ಶ್ರೀ ಮಹಾಂತಪ್ಪಗಳು. ಶ್ರೀ ಹೊಸಹಳ್ಳಿ ಬೂದೀಶ್ವರ ಶಿವಯೋಗಿಗಳು.

ಪೀಠಿಕಾ ಸಂಧಿಯ '**ಕಥಾನಿರ್ದೇಶ**' ಎಂಬ ಭಾಗದಲ್ಲಿ ಕವಿಯು ೭೩ ವರ್ಷ ಬಾಳಿದ ಶಿವಯೋಗಿ ಮಹಾಮಹಿಮರಾದ ಶ್ರೀ ಬೂದೀಶ್ವರ ಚರಿತ್ರವನ್ನು ರಚಿಸಲಿಕ್ಕೆ ಮಂಗಲವ ಕೋರಿ, ಸರಳ ಭಾಮಿನಿಯ ಷಟ್ಪದಿಯಲ್ಲಿ ಹೊಸಹಳ್ಳಿ ಶ್ರೀ ಪ್ರಭುಸ್ವಾಮಿಗಳ ಅಭಿಪ್ರಾಯದಂತೆ ಕಥೆಯನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಕಾವ್ಯದಲ್ಲಿ ರಸ, ಗಣ, ಪ್ರಾಸ ಲಕ್ಷಣಗಳಿಲ್ಲದಿದ್ದರೂ ಅದು ಶಿವಯೋಗಿಯ ಚಾರಿತ್ರ್ಯವಿರುವದರಿಂದ ಅದಕ್ಕೆ ಕುಂದು ಬರಲಾರದೆಂದು ನಂಬಿದ್ದಾನೆ. ತಾನು ಪಂಡಿತನಲ್ಲದಿದ್ದರೂ ಬೂದೀಶ್ವರ ಕಾವ್ಯರಚಿಸಲಿಕ್ಕೆ ಕೈ ಹಾಕಿದ್ದರಿಂದ ತನಗೆ ಕುಂದು ಬಾರದಂತೆ ಬೂದೀಶ್ವರನೇ ಹರಸಿ ಕರುಣಿಸಬೇಕೆಂದು ಬೇಡಿಕೊಂಡಿದ್ದಾನೆ,

ಬೂದೀಶ್ವರರು ಸಾಮಾನ್ಯರಲ್ಲ.ಅವರು ಅಷ್ಟಾವರಣ ಯುಕ್ತರೂ ಪಂಚಾಚಾರ ಪರಾಯಣರೂ ಷಟ್‌ಸ್ಥಲಜ್ಞಾನಿಗಳೂ ಆಗಿದ್ದರು.ಅಂಥಮಹಿಮರ ಚರಿತ್ರ ಬರೆಯುವುವದಕ್ಕೆ ಕೈಹಾಕಿದ್ದುದು ದೊಡ್ಡ ಸಾಹಸವೇ ಸರಿಯೆಂಬುದು ಕವಿಯ ನಮ್ರಭಾವನೆ.ಈ ಕೃತಿಯ ಹೆಸರು ಬೂದೀಶ್ವರಲೀಲೆ, ಶ್ರೀ ಬೂದೀಶ್ವರನು ಕೃತಿಗೆ ಅಧಿಪತಿಯು. ಕೃತಿಯನ್ನು ರಚಿಸಿದವನು. ಹುನಗುಂದದ ಜ್ಯಾಳಿ ಕಲ್ಯಾಣಪ್ಪನು.

ಈ ಕೃತಿಗೆ ಚರಿತ್ರಾಂಶಗಳನ್ನೊದಗಿಸಿ ಕೊಟ್ಟವರು ಹೊಸಹಳ್ಳಿಯ ಬೂದೀಶ್ವರ ಮಠದ ಶ್ರೀ ಪ್ರಭುಸ್ವಾಮಿಗಳು.

ಶ್ರೀ ಪ್ರಭುಸ್ವಾಮಿಗಳು ಹಾಸನ ಜಿಲ್ಲೆಯೊಳಗೆ ಚೆಲುವನಹಳ್ಳಿಯೆಂಬೂರಲ್ಲಿ ಬಸವಾರ್ಯ-ಬಸವಾಂಬೆಯೆಂಬ ದಂಪತಿಗಳೊಡಲಲ್ಲಿ ಜನಿಸಿ ಸಿದ್ಧವೀರಾರ್ಯನೆಂಬ ನಾಮಾಂಕಿತರಾಗಿ ಬೆಳೆದು ದೊಡ್ಡವರಾದ ಬಳಿಕ ಶಿವಯೋಗಮಂದಿರದಲ್ಲಿ ವಿದ್ಯಾಭ್ಯಾಸ, ಯೋಗಸಾಧನ, ಭಕ್ತಿಜ್ಞಾನ, ವೈರಾಗ್ಯಗಳನ್ನು ಸಾಧಿಸಿ ಅಲ್ಲಿಯೇ ಜಂಗಮದೀಕ್ಷೆ ಪಡೆದು ಹೊಸಹಳ್ಳಿ ಮಠಕ್ಕೆ ಶ್ರೀ ಪ್ರಭುಸ್ವಾಮಿಗಳೆಂಬ ಹೆಸರಿನಿಂದ ಅಧಿಪತಿಗಳಾದರು. ಮುಂದೆ ಅವರು ಗಣಭಾಷಿತ ರತ್ನಮಾಲೆ, ಮಿಶ್ರಸ್ತೋತ್ರವಚನ, ಆಚರಣ ವಚನಗಳನ್ನು ಸಂಶೋಧಿಸಿ ಪ್ರಕಟಗೊಳಿಸಿ ಸಮಾಜಕ್ಕೆ ಮಹದುಪಕಾರ ಮಾಡಿರುವರು.

ಶ್ರೀ ಪ್ರಭುಸ್ವಾಮಿಗಳ ಮನಸ್ಸಿನಲ್ಲಿ ತಮ್ಮ ಹೊಸಹಳ್ಳಿಮಠದ ಕರ್ತೃಗಳಾದ ಬೂದೀಶ್ವರ ಶಿವಯೋಗಿಗಳ ಪುರಾಣವನ್ನು ಬರೆಯಿಸಿ ಪ್ರಕಟಿಸಬೇಕೆಂಬ ಉತ್ಕಟೇಚ್ಛೆಯುಂಟಾಯಿತು. ಆಗ ಅವರು ಸಹಜವಾಗಿ ಧಾರವಾಡ ಶ್ರೀ ಮುರುಘಾಮಠಕ್ಕೆ ಬಂದಾಗ ಆ ಪುರಾಣವನ್ನು ಯಾರಿಂದ ಬರೆಯಿಸಬೇಕೆಂಬ ಬಗ್ಗೆ ಶ್ರೀ ಮಹಾಂತಪ್ಪಗಳೊಡನೆ ಆಪ್ತಾಲೋಚನೆ ಮಾಡಿದರು. ಆಗ ಪೂಜ್ಯರಾದ ಶ್ರೀ ಮಹಾಂತಪ್ಪಗಳು " ಅದಕ್ಕೇಕೆ ಚಿಂತಿಸುವಿರಿ ? ಇಲ್ಲಿಯೇ ನಮ್ಮ ಬ್ಯಾಳಿ ಮಾಸ್ತರ ಇದ್ದಾರೆ. ಅವರಿಗೆ ನೀವು ಸಂಗ್ರಹಿಸಿದ ಚರಿತ್ರಾಂಶಗಳನ್ನು ಕೊಡಿರಿ. ಅವರು ಕಾವ್ಯರೂಪದಿಂದ ಬರೆದು ಬಿಡುವರೆಂದು " ಅಪ್ಪಣೆಕೊಡಿಸಿದರು. ಆ ಪ್ರಕಾರ ಶ್ರೀ ಪ್ರಭುಸ್ವಾಮಿಗಳು ಶ್ರೀ ಬ್ಯಾಳಿಮಾಸ್ತರರನ್ನು ಕರೆಯಿಸಿಕೊಂಡು " ನೋಡಿರಿ, ಶ್ರೀ ಬೂದೀಶಯೋಗಿಗಳು ನಾಡಿನಾದ್ಯಂತ ಸಂಚರಿಸಿ ತಮ್ಮ ಯೋಗಬಲದಿಂದ ಬಹುವಿಧ ಲೀಲೆಗಳನ್ನು ಆಚರಿಸಿದ್ದಾರೆ. ಅವರ ಚರಿತ್ರಾಂಶಗಳನ್ನು ನಿಮಗೆ ಒಪ್ಪಿಸುವೆವು. ಈ ಪುರಾಣವನ್ನು ನೀವು ಬರೆಯಬೇಕೆಂದು ಶ್ರೀ ಮಹಾಂತಪ್ಪಗಳು ಪ್ರೇಮದಿಂದ ಅಪ್ಪಣೆ ಕೊಡಿಸಿದ್ದಾರೆ. ಈ ಪುರಾಣ ರಚಿಸುವ ಭಾಗ್ಯವು ನಿಮ್ಮದಾಗಿದೆ. ನಿಮ್ಮಲ್ಲಿ ನಮಗೆ ನಂಬುಗೆಯಿದೆ. ಈ ಸೇವೆಯನ್ನು ನೀವು ಕೈಕೊಳ್ಳಬೇಕು. ಭಾಮಿನಿ ಷಟ್ಪದಿಯ ಸರಳಗನ್ನಡ ಶೈಲಿಯಲ್ಲಿ ನಿಮಗೆ ಯುಕ್ತಕಂಡಂತೆ ಕಥೆಯಲ್ಲಿ ಮಾರ್ಪಾಟು ಮಾಡಿಕೊಂಡು ಬರೆಯಿರಿ. ಶ್ರೀ ಬೂದೀಶ್ವರನ ಕೃಪೆಯು ನಿಮಗಾಗುವದು " ಎಂದು ಅಪ್ಪಣೆ ಮಾಡಿದರು.

ಆಗ ಶ್ರೀ ಬ್ಯಾಳಿ ಮಾಸ್ತರರು "ಬುದ್ಧಿ, ಮಹಾಮಹಿಮರಾದ ಬೂದೀಶಿವಯೋಗಿಗಳೆತ್ತ! ಮಂದಮತಿಯಾದ ನಾನೆತ್ತ! ನಾನು ಈವರೆಗೆ ಒಂದೂ ಪುರಾಣವನ್ನು ಬರೆದವನಲ್ಲ. ಹೀಗಿದ್ದು ಅಂಥವರ ಚರಿತ್ರೆಯನ್ನು ನಾನು ಬರೆಯಬಲ್ಲೆನೇ?" ಎಂದು ಸಂಕೋಚಪಟ್ಟುಕೊಂಡಾಗ ಶ್ರೀಗಳು ಧೈರ್ಯಹೇಳಿ "ಶ್ರೀ ಮಹಾಂತಪ್ಪಗಳು ಅಪ್ಪಣೆ ಕೊಡಿಸಿರುವರೆಂದಬಳಿಕ ನೀವು ಬರೆದೇ ಬರೆಯುತ್ತೀರಿ" ಎಂದು ಪ್ರೋತ್ಸಾಹಿಸಿ ಶಾಲಿವಾಹನ ಶಕ ೧೮೯೦ ಆಶ್ವಿನ ಶುದ್ಧ ೯ನೆಯ ದಿವಸ ಶ್ರೀಗಳು ಅವರಿಂದ ಪುರಾಣ ಬರೆಯಲಿಕ್ಕೆ ಹಚ್ಚಿದರು. ಅನಾಯಾಸವಾಗಿ ಪ್ರಾಪ್ತವಾದ ಸುಸಂಧಿಯನ್ನು ಕಳೆದುಕೊಳ್ಳಬಾರದೆಂದು ಹಾರೈಸಿ ಶ್ರೀ ಬೂದೀಶನ ಮೇಲೆ ಭಾರಹಾಕಿ ಅವರು ಭಕ್ತಿ ವಿಶ್ವಾಸದಿಂದ ಪುರಾಣವನ್ನು ರಚಿಸಲುಜ್ಜುಗಿಸಿದರು,

## ೧ನೆಯ ಸಂಧಿ

ಈ ಸಂಧಿಯಲ್ಲಿ ಬೂದಿಯೋಗಿಗಳ **ವ್ಯಕ್ತಿಚಿತ್ರ** ಹಾಗೂ ಅವರ **ನಿತ್ಯ ಕ್ರಮಗಳು** ವಿವರಿಸಲ್ಪಟ್ಟಿವೆ. ಭಾರತವು ವಿಶ್ವಕ್ಕೆಲ್ಲ ತನ್ನ ಆಧ್ಯಾತ್ಮಿಕ ಪ್ರಕಾಶವನ್ನು ಬೀರಿದ್ದರೆ ಭಾರತಕ್ಕೆ ಕನ್ನಡನಾಡು ಹೆಚ್ಚಿನ ಪ್ರಭಾವವನ್ನು ಬೀರಿದೆ. ಇಂಥ ಕನ್ನಡನಾಡಿನಲ್ಲಿ ನಮ್ಮ ಕಥಾನಾಯಕನಾದ ಶ್ರೀ ಬೂದೀಶ್ವರನ ಉದಯವಾಯಿತು. ಕವಿಯು ಕನ್ನಡ ನಾಡುನುಡಿಗಳ ವರ್ಣನೆಯನ್ನು ಸವಿಸ್ತಾರವಾಗಿ ಮಾಡಿದ್ದಾನೆ. ಕರ್ನಾಟಕ ವೀರಪುರುಷರ ನಾಡು. ಧೀರ ಕವಿಗಳ ಬೀಡು. ಸಾರಶರಣರ ನೆಲವೀಡು. ಭೂರಿ ಸಾಮ್ರಾಜ್ಯಗಳ ನೆಲವನೆ. ಚಾರು ಸೌಂದರ್ಯದ ಎಲೆವನೆ. ನರನಾರಿಯರ ಔದಾರ್ಯದ ಸಿರಿವನೆ. ಎಂದು ವರ್ಣಿಸಿರುವನು.

ಕನ್ನಡ ನಾಡು ಅನ್ಯಧರ್ಮಗಳ ಉನ್ನತಿಗೆ ಆಶ್ರಯ ನೀಡಿದೆ. ಶಂಕರ, ಮಧ್ವ, ರಾಮಾನುಜರು ಇಲ್ಲಿಗೆ ಬಂದು ಮತಪೀಠಗಳನ್ನು ರಚಿಸಿಕೊಂಡು ಅಗ್ಗಳಿಕೆಯಿಂದ ಮೆರೆದರು. ಈ ನಾಡಿನಲ್ಲಿ ಸರ್ವಧರ್ಮಸಮನ್ವಯತೆಯು ಕಂಡುಬರುತ್ತಿದೆ. ಕನ್ನಡನಾಡು ಜೈನ, ಮುಸ್ಲಿಮ, ಕ್ರೈಸ್ತ ಧರ್ಮಗಳಿಗೆ ಆಶ್ರಯವನ್ನಿತ್ತಿದೆ. ಇದರಿಂದ ಕನ್ನಡಿಗರಲ್ಲಿರುವ ಪರಧರ್ಮ ಸಹಿಷ್ಣುತೆಯೂ ಮಾನವ ಬಂಧು ಪ್ರೇಮವೂ ವ್ಯಕ್ತವಾಗುತ್ತವೆ. ಕನ್ನಡ ನಾಡು ವಿಪುಲವಾದ ಧನಧಾನ್ಯಗಳಿಂದ ಯಾವಾಗಲೂ ತುಂಬಿಕೊಂಡಿದೆ. ಸಂಗೀತ

ನಾಟಕ ಮೊದಲಾದ ಲಲಿತ ಕಲೆಗಳಿಗೆ ಕರ್ನಾಟಕವು ತವರು ಮನೆಯಾಗಿತ್ತು. ಕನ್ನಡಿಗರ ತೋಳ ಶಕ್ತಿಗೆ ಕುಂದಿಲ್ಲ. ಬಲಾಢ್ಯವಾದ ರಾಷ್ಟ್ರಗಳೆಷ್ಟೋ ಇಲ್ಲಿ ನೆಲಸಿದ್ದವು.

ಕನ್ನಡನಾಡು ಸಮೃದ್ಧವಾದಂತೆ ಕನ್ನಡ ನುಡಿಯು ಸುಂದರವೂ, ಸರಸವೂ ಗಂಭೀರವೂ ಆಗಿದೆ. ಕನ್ನಡ ನಾಡು ಅಮರವಾದ ವಚನಶಾಸ್ತ್ರವನ್ನು ಹೊತ್ತು ಚಿರನೂತನವಾಗಿದೆ. ಕನ್ನಡ ಕಾವ್ಯಗಳೂ ಪಾಡು ಗಬ್ಬುಗಳೂ ಉಚ್ಚಮಟ್ಟದ ಸಾಹಿತ್ಯ ಸಂಸ್ಕೃತಿಯ ಕುರುಹುಗಳಾಗಿವೆ. ಇಂಥ ಕನ್ನಡ ನಾಡಿನಲ್ಲಿ ಶ್ರೀ ಬೂದಿಯೋಗಿಯು ಅವತರಿಸಿದ ಕೂಡಲೆ ಅವರಿಗೆ ಕನ್ನಡ ಕೋಗಿಲೆಯು ಸ್ವಾಗತ ಗೀತೆಯನ್ನು ಹಾಡಿತು. ಕನ್ನಡ ನವಿಲು ಕುಣಿಯಿತು. ಕನ್ನಡ ಗಿಳಿಯು ಸ್ವಸ್ತಿಪಾಠವ ಪಠಿಸಿತು. ಕನ್ನಡ ಹುಂಜವು ಸುಪ್ರಭಾತವನ್ನು ಘೋಷಿಸಿತು.

ಶ್ರೀ ಬೂದಿಶಿವಯೋಗಿಗಳ ನೊಸಲಿನಲ್ಲಿ ಸಿತಭಸ್ಮವು ಎಸೆಯುತ್ತಿದೆ. ರುದ್ರಾಕ್ಷಮಾಲೆಯು ಕೊರಳಿಗೆ ಸಿಂಗಾರವನ್ನುಂಟು ಮಾಡಿದೆ. ಇಷ್ಟಲಿಂಗವು ಅವರ ಎದೆಯನ್ನಪ್ಪಿಕೊಂಡಂತಿದೆ. ಕಾವಿಯ ಬಟ್ಟೆಯು ಅವರ ಮೈಗೆ ಒಪ್ಪುತ್ತಿದೆ. ಅವರ ನಾಲಗೆಯು ಬಸವ ನಾಮ ಮಂತ್ರವನ್ನು ಜಪಿಸುತ್ತಿದೆ. ಅವರ ನಿಡು ಜಡೆಯು ಶಿವನ ಜಡೆಯಂತೆ ಹಬ್ಬಿಬಿಟ್ಟಿದೆ. ಗಡ್ಡವು ಎದೆಯ ಮೇಲೆಲ್ಲ ನಲಿದಾಡುತ್ತಿದೆ. ಬಲಗೈಯಲ್ಲಿ ಕಮಂಡಲು, ಎಡಗೈಯಲ್ಲಿ ಯೋಗದಂಡ, ಕುಕ್ಷಳಲ್ಲಿ ಬಸವ ವಚನದ ಹೊತ್ತಿಗೆ, ಪಾದಗಳಲ್ಲಿ ಹಾವುಗೆಗಳು ಕಂಗೊಳಿಸುತ್ತಿವೆ. ಅವರ ಕಂಗಳ ಕಾಂತಿಯು ಹೊರಸೂಸುತ್ತಿದೆ. ಶಾಂತಿಯು ಅವರ ಚಿತ್ತವನ್ನು ವಳಗಿದೆ. ಭ್ರಾಂತಿಯು ಅವರನ್ನು ಬಿಟ್ಟೋಡಿದೆ. ಹೃದಯದಲ್ಲಿ ಚಿತ್ಕಳೆಯು ಹೊರೆಹೊಮ್ಮುತ್ತಿದೆ. ಗುರುವೆಂದರೂ ಈತನೇ, ಲಿಂಗವೆಂದರೂ ಈತನೇ, ಜಂಗಮವೆಂದರೂ ಈತನೇ. ಶಿವನ ಅಪ್ಪಣೆಯಿಂದ ಲೋಕೋದ್ಧಾರಾರ್ಥವಾಗಿ ಜನ್ಮ ತಾಳಿದ ಮಹಾಮಹಿಮನೀತ. ಈತನು ಭಕ್ತರಲ್ಲಿ ಕ್ರಿಯಾ, ಭಕ್ತಿ, ಯುಕ್ತಿ, ಬಲಗಳನ್ನು ಹೆಚ್ಚಿಸುತ್ತಿಹನು. ಈತನು ವ್ಯಕ್ತಿಯಾಗಿರದೆ ಶಕ್ತಿಯಾಗಿದ್ದಾನೆ.

ಬೂದೀಶನ ಮೊಗದಲ್ಲಿ ತಪಃಕಾಂತಿಯೂ ಮನದಲ್ಲಿ ಸಹನಶೀಲತೆ ಶಾಂತಿಗಳೂ ಮನೆಮಾಡಿಕೊಂಡಿವೆ. ಆತನು ಅರ್ಪಿತ ವಸ್ತುಗಳನ್ನು ಲಿಂಗ ಭೋಗೋಪಭೋಗಿಯಾಗಿ ಸ್ವೀಕರಿಸುವನು. ಆತನು ಶ್ರೋತ್ರಿಯನೂ

ಬ್ರಹ್ಮನಿಷ್ಠನೂ ಆಗಿರುವನು. ಯಾರಿಂದಲೂ ಆತನು ಒಂದು ಕಾಸಿಗೆ ಸಹ ಆಶೆ ಮಾಡುವವನಲ್ಲ. ಇಷ್ಟಲಿಂಗಪೂಜೆ, ಪ್ರಾಣಲಿಂಗಾನುಸಂಧಾನ, ಭಾವಲಿಂಗಸಾಮರಸ್ಯದಿಂದ ಆತನು ಮೈಮರೆಯುವನು. ಆತನು ಭಕ್ತಿ, ಜ್ಞಾನ, ವೈರಾಗ್ಯಸಂಪನ್ನನು. ಬಸವೇಶನಲ್ಲಿ ಆತನಿಗೆ ವಿಶೇಷವಾದ ಭಕ್ತಿಯಿದ್ದಿತು. ಬಸವಮಂತ್ರವು ನಾಲಗೆಯೊಳಾಡುತ್ತಿರುವಾಗ ಅವರ ಕಂಠವು ಗದ್ಗದಿತವಾಗುತ್ತಿದ್ದಿತು. ಅವರು ಹೋದ ಹೋದಲ್ಲಿ ಪ್ರಭುದೇವರ ಮಠ ಗದ್ದುಗೆಗಳನ್ನು ಕಟ್ಟಿಸುತ್ತಿದ್ದರು. ಬೂದಿ ಬಸವನ ವಿಗ್ರಹಗಳನ್ನು ಪ್ರತಿಷ್ಠೆಗೊಳಿಸುತ್ತಿದ್ದರು.

ಬೂದೀಶ್ವರನು ೧೨ನೆಯ ಶತಮಾನದಲ್ಲಿ ಪ್ರಭುದೇವರಿಂದ ಅನುಗ್ರಹ ಪಡೆದುಕೊಂಡನು. ಅವರ ಕೃಪೆಯಿಂದ ಆತನಿಗೆ ಶಿವಯೋಗ ಸಂಪತ್ತು ಬೆಳೆಯಿತು. ತಮ್ಮ ಹಠಯೋಗವನ್ನು ಶಿವಯೋಗದಲ್ಲಿ ಬೆರೆಸಿ ಸಮನ್ವಯಗೊಳಿಸಿದನು. ಒಮ್ಮೆ ಚೆನ್ನಬಸವೇಶನು ಲೋಕಸೇವೆ ಮಾಡೆಂದು ಹೇಳಿ ಬೂದೀಶ್ವರನಿಗೆ ಒಂದು ಬೂದಿಯ ಹಸಬಿಯನ್ನು ಕೊಟ್ಟನು. ನೆಮ್ಮಿ ಪಡೆದಾಸೊಮ್ಮು ಯೋಗಸಿದ್ಧಿಯ ರೂಪ ತಾಳಿತು. ಆ ಬೂದಿಯ ಮಹಿಮೆಯಿಂದ ಆತನು ಬೂದಿಯೋಗಿಯೆಂಬ ಹೆಸರು ಪಡೆದನು. ಮುಂದೆ ಬೂದೀಶನು ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ಗುರ್ಜರ ದೇಶಗಳಲ್ಲಿ ಸಂಚರಿಸಿ ಬೂದಿಯ ಬಲದಿಂದ ಪತಿತರನ್ನು ಪಾವನಮಾಡಿದನು.

ಬೂದಿಯ ಬಲದಿಂದ ಆತನು ಜನಗಳ ರೋಗ, ಪಿಶಾಚ ಬಾಧೆಗಳನ್ನು ಕಳೆದನು; ಮಕ್ಕಳನ್ನು ದಯಪಾಲಿಸಿದನು; ಭಕ್ತರ ದುರಿತ ಕಂಟಕಗಳನ್ನು ನೀಗಿದನು. ಸರ್ವರೋಗಗಳಿಗೆ ಬೂದಿಯೇ ಔಷಧವಾಗಿತ್ತು. ಎಲ್ಲ ಇಷ್ಟಾರ್ಥಗಳಿಗೆ ಬೂದಿಯು ಕಲ್ಪವೃಕ್ಷವಾಗಿತ್ತು. ಬೂದಿಯನ್ನು ಬಡಕೊಂಡೇ ಶಿವನು ಪರಮ ಪೂಜ್ಯನೆನಿಸಿಕೊಂಡನು ಸಾಧುಸಂತರು. ಋಷಿಮುನಿಗಳು, ಸದ್‌ಭಕ್ತ ಶರಣರು ಭಸ್ಮಧಾರಣ ಮಾಡಿಕೊಂಡು ಸೊಗದಿಂದ ಬಾಳಿದರು. ಚಾಡಿ, ಸಿದ್ಧಾಟಿಕೆ, ಮೋಡಿ, ಜನವಶ್ಯಾದಿಗಳು ಬೂದಿಮಂತ್ರದ ಬಲದಿಂದಲೇ ತಮ್ಮಾಟವನ್ನು ನಡೆಯಿಸುತ್ತವೆ. ಬೂದಿಯಲ್ಲಿ ಶಕ್ತಿಯೇನಿದೆಯೆನ್ನುವವರು ಅಜ್ಞರು.

ಬೂದೀಶನು ೧೨ನೆಯ ಶತಮಾನದ ಹರಿಹರ, ರಾಘವಾಂಕ, ಕೆರೆಯ ಪದ್ಮರಸ ಮೊದಲಾದ ಶಿವಕವಿಗಳನ್ನು ಕಂಡಿದ್ದನು. ೧೫ನೆಯ ಶತಮಾನದ

ಶಿವಕವಿಗಳೆನಿಸಿದ ಲಕ್ಕಣ್ಣದಂಡೇಶ-ಜಕ್ಕಣಾರ್ಯರ ಹಾಗೂ ನೂರೊಂದು ವಿರಕ್ತರ ಸಂದರ್ಶನವನ್ನು ಪಡೆದಿದ್ದನು. ೧೯ನೆಯ ಶತಮಾನದ ಗರಗದ ಮಡಿವಾಳಸ್ವಾಮಿ, ನಾಗಲಿಂಗಯತಿ, ಬಾಲಲೀಲಾ ಮಹಾಂತಶಿವಯೋಗಿ, ಶಿಶುನಾಳ ಶರೀಫ ಮೊದಲಾದ ಮಹಾಮಹಿಮರ ದರ್ಶನಯೋಗವು ಅವರಿಗೆ ದೊರೆತಿದ್ದಿತು. ಬೂದೀಶನು ಹದ್ದಿನಂತೆ ಸುಮ್ಮನೆ ಬಹಳ ವರ್ಷ ಬಾಳ ಲಿಲ್ಲ. ಭಕ್ತರ ಹಿತಾರ್ಥವಾಗಿ ಅವರು ಚಿರಕಾಲ ಬಾಳಿದರೆಂಬುದು ಗಮನಾ ರ್ಹವಾಗಿದೆ.

## ನಿತ್ಯಕ್ರಮ

ಬೆಳಗಿನಲ್ಲೆದ್ದು ಬೂದಿಯೋಗಿಯು ಮುಖಮಾರ್ಜನ ಮಾಡಿಕೊಂಡು ಹಣೆಗೆ ಭಸ್ಮವ ತಳೆದು, ಪ್ರಾತರ್ವಿಧಿಯ ತೀರಿಸಿ, ದಂತಧಾವನ ಮಾಡಿ ಕೊಂಡು ನಿರ್ಮಲ ಮನಸ್ಸಿನಿಂದ ಶಿವಮಂತ್ರವನ್ನು ಧ್ಯಾನಿಸುವರು. ಯೋಗಾಸ ನಗಳನ್ನು ಹಾಕಿ ಪ್ರಾಣಾಯಾಮವನ್ನು ಮಾಡಿ ಆ ಪ್ರಾಣವನ್ನು ಷಟ್ ಚಕ್ರ ಗಳಲ್ಲಿ ತಿರುಗಿಸುವರು. ಆ ಪರವಸ್ತುವಿನ ಚಿತ್ ಪ್ರಕಾಶವನ್ನು ಹೃತ್ಪಟಲ ದಲ್ಲಿ ಧ್ಯಾನಿಸುತ್ತ ಸಮಾಧಿ ಹೊಂದುವರು. ಬಳಿಕ ಸ್ನಾನಮಾಡಿ ಮಡಿ ಬಟ್ಟೆ ಯನ್ನುಟ್ಟು ಆಸನದಲ್ಲಿ ಪದ್ಮಾಸನ ಹಾಕಿ ಕುಳಿತುಕೊಂಡು ಅಂಗೈಯಲ್ಲಿ ಲಿಂಗವ ನ್ನಿಟ್ಟು ಏಕಾಗ್ರದೃಷ್ಟಿಯಿಂದ ಪೂಜಿಸಿ, ಧ್ಯಾನಿಸಿ ಅದರಲ್ಲಿ ಸಮರಸಹೊಂದು ವರು. ಭಕ್ತಿಯು ಹೊರಸೂಸಿ ಪೂಜೆಗೈವಾಗ ಅವರ ಕಂಬನಿಗಳು ಸುರಿಯು ತ್ತಿದ್ದವು. ಮೈನವಿರುಗಳೇಳುತ್ತಿದ್ದವು.

ಶಿವಯೋಗಿಯ ಸನ್ನಿಧಿಯಲ್ಲಿ ಪ್ರತಿನಿತ್ಯ ಪಾದೋದಕ ಪ್ರಸಾದ, ಲಿಂಗಾನುಭವಗೋಷ್ಠಿ, ಸದ್ಬೋಧೆಗಳು ನಡೆಯುವವು. ಭಕ್ತರು ಅವರ ಸದ್ಬೋ ಧೆಯಿಂದ ಪ್ರೇರಿತರಾಗಿ ತಮ್ಮ ಆಚಾರ ಶೀಲಗಳನ್ನು ಕಾಯ್ದುಕೊಂಡಿ ದ್ದರು. ಬಸವಣ್ಣನು "ನಿಚ್ಚಲುಂ ಶಿವರಾತ್ರಿಯುಂ ಅಚ್ಚಳಿಯದೆ ಬಾಳ್ವೆನೆಂದು ಹೇಳಿದಂತೆ ಶಿವಯೋಗಿಗಳು ಅದನ್ನೇ ಅನುಕರಿಸುವರು. ಆ ಮೇಲೆ ಅವರು ಶಿವನ ಅನಂತ ಗುಣಗಳನ್ನೂ ವಿಚಿತ್ರ ಲೀಲೆಗಳನ್ನೂ ಕೊಂಡಾಡುವರು. ಭಕ್ತ ರನ್ನು ಜಟಿಲವಾದ ಆಧ್ಯಾತ್ಮದ ತೊಡಕಿನಲ್ಲಿ ಬೀಳಗೊಡದೆ ಸುಲಭ ಸುಲಲಿತ ವಾದ ಭಕ್ತಿ ಮಾರ್ಗಕ್ಕೆ ಹಚ್ಚಿ ಇಹಪರ ಸುಖಗಳನ್ನನುಭವಿಸುವಂತೆ ಮಾಡು ತ್ತಿದ್ದರು, ಭಕ್ತಿಯನ್ನು ಮಾಡಬೇಕಾದರೆ ಹರಿಹರ ಬ್ರಹ್ಮರೂಪದ ಬಸವ

ನಾಮವನ್ನು ಸ್ಮರಿಸಲುಪದೇಶಿಸುವರು. ಶಾಂಬನೊಲಿವುವಕೆ ನಂಬುಗೆಯೇ ಕಾರಣವೆಂದು ಶ್ರುತಪಡಿಸಿ ಅವರ ಭಾವನೆಯನ್ನು ಉದಾತ್ತಗೊಳಿಸುವರು.

# ೨ ನೆಯ ಸಂಧಿ

## ಅನುಭಾವ ಮಂಟಪ

ಜಗತ್ತಿನಲ್ಲಿ ಐಹಿಕ ಹಾಗೂ ಪಾರಮಾರ್ಥಿಕ ಸುಖವನ್ನು ಪಡೆದು ಜಗತ್ತು ಸುಖವಾಗಿ ಬಾಳಬೇಕೆಂಬುದನ್ನು ಚರ್ಚಿಸಲು ಬಸವೇಶ್ವರನು ಕಲ್ಯಾಣದಲ್ಲಿ ಶಿವಾನುಭವಮಂಟಪವನ್ನು ಸ್ಥಾಪಿಸಿದನು. ಅಲ್ಲಿ ಮೇಲ್ತರಗತಿಯ ಶರಣ ಶರಣೆಯರು ಶಿವಾನುಭವ ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು. ಶಿವಾನುಭವ ಮಂಟಪದ ಅಧಿವೇಶನಕ್ಕೆ ಶ್ರೀ ಪ್ರಭುದೇವರೇ ಅಧ್ಯಕ್ಷರು. ವಿಚಾರಮಂಥ ನಂದಿದ ಅನುಭವಮಂಟಪದಲ್ಲಿ ಹೊರಟ ದಿವ್ಯ ತತ್ತ್ವಗಳನ್ನು ಕೆಲವು ಜಂಗ ಮರು ನಾಡಿನಲ್ಲೆಲ್ಲ ಸಂಚರಿಸಿ ಪ್ರಚುರ ಪಡಿಸುತ್ತಿದ್ದರು.

ಒಮ್ಮೆ ಶ್ರೀ ಪ್ರಭುದೇವರು ಶೂನ್ಯ ಪೀಠವನ್ನಲಂಕರಿಸಿದ್ದಾರೆ. ಕೆಳಗೆ ಆತನ ಎರಡೂ ಬದಿಗಳಲ್ಲಿ ಶರಣ ಶರಣೆಯರು ವಿರಾಜಿಸುತ್ತಿದ್ದಾರೆ. ಬಲ ಗಡೆಗೆ ಬಸವ, ಚನ್ನಬಸವ, ಮಡಿವಾಳ, ಸಿದ್ಧೇಶ, ಸೊಡ್ಡಳಬಾಚರಸ, ಹಡ ಪದಪ್ಪಣ್ಣ, ಮೋಳಿಗೆಯ ಮಾರಯ್ಯ, ಕಿನ್ನರಿ ಬೊಮ್ಮಯ್ಯ, ಮಸಣಯ್ಯ, ಮರುಳಶಂಕರದೇವ ಮೊದಲಾದವರು ಮಂಡಿಸಿದ್ದಾರೆ. ಎಡಗಡೆಗೆ ಆಯದಕ್ಕಿ ಮಾರಯ್ಯ, ರಾಯಸದ ಮಂಚಣ್ಣ, ಉರಿಲಿಂಗಪೆದ್ದಿ, ಘಟ್ಟಿವಾಳಯ್ಯ, ನುಲಿ ಯಚಂದಯ್ಯ, ಮೇದಾರ ಕೇತಯ್ಯ, ಅಂಬಿಗರ ಚೌಡಯ್ಯ, ಕಂಬಳಿಯ ಶಿವ ನಾಗಯ್ಯ, ಘೋರ ಕಕ್ಕಯ್ಯ, ಸಮಗಾರ ಹರಳಯ್ಯ ಮೊದಲಾದವರು ಒಪ್ಪು ತ್ತಿದ್ದಾರೆ. ಒತ್ತಟ್ಟಿಗೆ ಶಿವಶರಣೆಯರಾದ ನೀಲಮ್ಮ, ಗಂಗಾಂಬೆ, ನಾಗಮ್ಮ, ಅಕ್ಕಮಹಾದೇವಿ, ಲಕ್ಕಮ್ಮ, ಲಿಂಗಮ್ಮ ಮೊದಲಾದವರು ಶೋಭಾಯ ಮಾನವಾಗಿ ಕುಳಿತುಕೊಂಡಿದ್ದಾರೆ. ಆಗ ಶ್ರೀ ಪ್ರಭುದೇವರು ಪಿಂಡಜ್ಞಾನಸ್ಥಲ ಮೊದಲ್ಗೊಂಡು ಜ್ಞಾನಶೂನ್ಯ ಸ್ಥಲದ ಪರ್ಯಂತ ನೂರೊಂದು ಸ್ಥಲಗಳ ಪರಿಯನ್ನು ಸವಿಸ್ತಾರವಾಗಿ ವಿವರಿಸಿದರು. ಅದನ್ನೆಲ್ಲ ಶ್ರೀ ಬೂದೀಶ್ವರನು ಕೇಳಿ ಸಂತೋಷ ಬಟ್ಟನು.

ಈ ಪ್ರಕಾರ ಶರಣರ ನೂತನ ಭಕ್ತಿ ಪಂಥವು ತನ್ನ ಪ್ರಭೆಯನ್ನು ಎಲ್ಲ ಕಡೆಗೂ ಬೀರತೊಡಗಿತು. ಕನ್ನಡ ನುಡಿಯಲ್ಲಿ ಚಿನ್ನದಂತಹ ಶ್ರುತಿ ತತ್ತ್ವಗಳನ್ನು ಶಿವಶರಣರು ಮಥಿಸಿ ತೆಗೆದಿರಲು ಅವುಗಳ ಮಹಿಮೆಯನ್ನರಿದು ಅನ್ಯಮತೀಯರು ಸ್ವಯಂ ಸ್ಫೂರ್ತಿಯಿಂದ ಬಂದು ದೀಕ್ಷೆ ಹೊಂದಿ ವೀರ ಶೈವ ಮತಾವಲಂಬಿಗಳಾದರು. ಶರಣರು ಸಾರಿದ ತತ್ತ್ವಗಳಾವವೆಂದರೆ :- "ಪರಮ ಪತಿವ್ರತೆಗೆ ಗಂಡನೊಬ್ಬನೇ ಇರುವಂತೆ ನಿಷ್ಠೆಯುಳ್ಳ ಶರಣನಿಗೆ ಒಬ್ಬನೇ ದೇವರಿದ್ದಾನೆ. ಮತ್ತೊಂದಕ್ಕೆರಗಿದಡೆ ಆತನು ಕಿವಿ ಮೂಗು ಕೊಯ್ಯುವನು. ಆ ಪರವಸ್ತುವು ಕ್ರಿಯಾಭೇದದಿಂದ ಗುರು, ಲಿಂಗ, ಜಂಗಮ ವೆಂಬ ಮೂರು ರೂಪಗಳನ್ನು ತಾಳಿ ಜಗತ್ತನ್ನುದ್ಧರಿಸುವದು. ಆದುದರಿಂದ ಭಕ್ತರು ಲಿಂಗವನ್ನು ಬಿಟ್ಟು ಕಂಡ ದೈವಕ್ಕೆ ಶಿರಬಾಗಬಾರದು. ತನ್ನ ಗುರು ಚರರನ್ನು ಬಿಟ್ಟು ಅನ್ಯ ಧರ್ಮದ ಗುರುಗಳ ಪಾದಕ್ಕೆ ನಮಸ್ಕರಿಸಬಾರದು. ಗಂಡಹೆಂಡಿರು ಕೂಡಿ ಒಂದು ಸತ್ಯ ಶುದ್ಧ ಕಾಯಕವನ್ನು ಕೈಕೊಂಡು ಗುರು ಲಿಂಗ ಜಂಗಮದ ಸೇವೆ ಮಾಡಬೇಕು. ಲಿಂಗಧಾರಿಗಳಾವ ಭಕ್ತರು ಒಳ ಪಂಗಡಗಳಲ್ಲಿ ಬಳಕೆ ಮಾಡಬೇಕು. ತಮ್ಮ ತಮ್ಮೊಳಗೆ ನೆಂಟಸ್ತನವನ್ನು ಬೆಳೆ ಯಿಸಿಕೊಳ್ಳಬೇಕು.

ಶ್ರೀ ಗುರುವಿನಿಂದ ದೀಕ್ಷೆಹೊಂದಿದ ನರನಾರಿಯರು ಸರಿಸಮಾನರು. ಅವರ ಪೂರ್ವ ಕುಲ ಜಾತಿಗಳನ್ನಾರಿಸಬಾರದು. ಈ ಪ್ರಕಾರ ಲಿಂಗಾಂಗಿಗಳು ನಿಸ್ವಾರ್ಥದಿಂದಲೂ ಶಾಂತ ಮತದಿಂದಲೂ ವಿಶ್ವಪ್ರೇಮ ದಿಂದಲೂ ಸಹಕಾರವನ್ನು ಹೆಚ್ಚಿಸಬೇಕು. ಈ ಪ್ರಕಾರ ಶ್ರೀ ಪ್ರಭುದೇವರು ಅಪ್ಪಣೆ ಕೊಡಿಸಿದ ತತ್ತ್ವಗಳನ್ನೆಲ್ಲ ಶ್ರೀ ಬೂದೀಶನು ಗ್ರಹಿಸಿಕೊಂಡಿದ್ದನು.

ಈ ಉದಾರ ತತ್ತ್ವಗಳು ಗೌರವದಿಂದ ಪ್ರಸಾರವಾಗಹತ್ತಲು ಸ್ವಾರ್ಥಿ ಗಳೂ ಜಾತಿವಾದಿಗಳೂ ಆದ ಕರ್ಮಠರು ಮನದಲ್ಲಿ ಕಸಿವಿಸಿಯಾಗಿ ದೊರೆ ಯಾದ ಬಿಜ್ಜಳನೆದುರಿಗೆ ಬಂದು ಶರಣರು ವರ್ಣಾಶ್ರಮ ಧರ್ಮವನ್ನೆಲ್ಲ ಹಾಳು ಮಾಡಹತ್ತಿರುವರೆಂದು ಅನೇಕ ವಿಧವಾದ ಚಾಡಿಗಳನ್ನು ಹೇಳಹತ್ತಿದರು. "ದೊರೆಯೇ ಸದ್ಧರ್ಮರಕ್ಷಕನಾದ ನೀನಿರಲು ಈ ರೀತಿ ವಿಪರೀತವಾಗಿ ಶರಣರು ನಡೆಯುತ್ತಿರುವರು, ಮರುಳರನ್ನು ದಂಡಿಸದೆ ಹಾಗೆಯೇ ಬಿಟ್ಟರೆ ಮುಂದೇನು ಅನರ್ಥಸಂಭವಿಸುವದೋ ! ಜೀಯಾ, ನಮ್ಮ ಕರುಳು ಕೊರೆಯು ತ್ತಿದೆ, ಪ್ರಾಣವು ಹಾರಿ ಹೋಗುತ್ತಿದೆ. ನಿನ್ನನ್ನು ಮರೆಹೊಕ್ಕಿದ್ದೇವೆ. ರಕ್ಷಿಸ ಬೇಕು" ಎಂದು ಆತನ ಮುಂದೆ ಹೊರಳಾಡಿದರು.

ಆಗ ಬಿಜ್ಜಳ ರಾಜನು ಬಸವಮಂತ್ರೀಶ್ವರರನ್ನು ಕರೆಯಿಸಿ, "ಬಸವ ರಾಜರೇ, ನಿಮ್ಮ ಹೊಸಮತವನ್ನು ಪ್ರಸಾರಮಾಡುವ ನೆವದಿಂದ ನೀವು ಪರ ಸನಾತನವಾದ ವೈದಿಕ ಧರ್ಮವನ್ನು ಕಸವನ್ನು ತುಳಿಯುವಂತೆ ತುಳಿದು ಬಿಡಬೇಕೆ ? " ಎಂದೆನ್ನಲು ಬಸವರಾಜನು ಧೈರ್ಯದಿಂದ "ದೊರೆಯೇ, ಕರ್ಮಠರು ತಮಗೆ ಇಲ್ಲದ್ದೊಂದು ಚಾಡಿ ಹೇಳಿ ತಮ್ಮ ಮನಸ್ಸು ಕೆಡಿಸಿ ಸಿದ್ದಾರೆ. ಸನಾತನವಾದ ಶ್ರುತ್ಯಾಗಮ ಮತಕ್ಕೆ ವಿರೋಧವಾದುದೇನಾದರೂ ನಮ್ಮ ಲಿಂಗಾಂಗಿ ಮತದಲ್ಲಿದ್ದರೆ ಅವರು ತೋರಿಸಲಿ" ಎಂದು ಆಹ್ವಾನ-ವನ್ನಿತ್ತರು. ಆದರೆ ಆ ಮರುಳ ಪಂಡಿತರು ಬಸವನೊಡನೆ ವಾದಿಸಲು ಅಸಮರ್ಥರಾದುದರಿಂದ ಸಮೀಪಕ್ಕೆ ಬಾರದೆ ಜಾರಿಕೊಂಡುಬಿಟ್ಟರು. ಆಗ ದೊರೆಯು ಆ ಅಪಕ್ವ ಬುದ್ಧಿಯ ಕರ್ಮಠರಿಗೆ ಛೀ ಹಾಕಿ ಬಸವೇಶ್ವರ ನನ್ನು ಎತ್ತಿ ಕಟ್ಟಿದನು. ಅದರಿಂದ ವೈದಿಕರು ಬಸವಾದಿ ಶರಣರ ಮೇಲೆ ಮತ್ತಿಷ್ಟು ವಿಷ ಕಾರಹತ್ತಿದರು. ಶ್ರೀ ಬೂದೀಶ್ವರನು ಈ ಸಂಗತಿಗಳನ್ನೆಲ್ಲ ಅರಿತುಕೊಂಡನು.

ಶ್ರೀ ಬೂದೀಶ್ವರನು ಎಲ್ಲ ಶರಣರನ್ನು ಕಣ್ತುಂಬ ನೋಡಿದನು, ಬಸವಣ್ಣನಿಂದ ಭಕ್ತಿಯನ್ನೂ ಚೆನ್ನಬಸವಣ್ಣನಿಂದ ಜ್ಞಾನವನ್ನೂ ಪ್ರಭು ದೇವರಿಂದ ವೈರಾಗ್ಯವನ್ನೂ ತನ್ನಲ್ಲಿ ಅಳವಡಿಸಿಕೊಂಡನು. ಆಸನ, ಪ್ರಾಣಾ ಯಾಮ, ಆಕಾಶಗಮನ ಮೊದಲಾದ ತನ್ನ ಹಠಯೋಗ ಸಾಧನೆಗಳನ್ನು ಶರಣರಿಗೆ ತೋರಿಸಿ ಅವರಿಂದ ಮನ್ನಣೆ ಪಡೆದನು. ಮುಂದೆ ಶರಣರ ಅನುಮತಿಯಂತೆ ಸಮಗಾರ ಹರಳೇಶ್ವರನ ಮಗನಿಗೆ ಕುಲಜನಾದ ಮಧು ವರಸನು ತನ್ನ ಮಗಳನ್ನು ಕೊಟ್ಟು ಲಗ್ನ ಮಾಡಿದ್ದರಿಂದ ಕರ್ಮಠರು ಈ ವಿವಾಹವನ್ನು ಕಟುವಾಗಿ ನಿಂದಿಸಿ ರಾಜನಿಗೆ ದೂರುಕೊಟ್ಟರು. ಬಿಜ್ಜಳನಿಗೂ ಈ ಮಿಶ್ರ ವಿವಾಹವು ಶಾಸನ ವಿರುದ್ಧವೆನಿಸಿದ್ದರಿಂದ ಆತನು ಹರಳಯ್ಯ-ಮಧುವಯ್ಯಗಳಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಿದನು, ಶ್ರೀ ಬೂದೀಶನು ಇದನ್ನೆಲ್ಲ ಬಲ್ಲವನಾಗಿದ್ದನು.

ಹರಳಯ್ಯ ಮಧುವಯ್ಯಗಳ ಕೊಲೆಯಾದನಂತರ ಶಿವಶರಣರು ಕಲ್ಯಾಣ ವನ್ನು ತೊರೆದು ಕಂಡ ಕಂಡ ಕಡೆಗೆ ತಂಡೋಪತಂಡವಾಗಿ ತೆರಳಿದರು. ಶ್ರೀ ಚೆನ್ನಬಸವೇಶ್ವರನು ೭೭೦ ಅಮರಗಣಂಗಳೊಡನೆ ಉಳವಿಕೊಳ್ಳದ ಕಡೆಗೆ ಸಾಗಿದನು. ಅವರಲ್ಲಿ ನಮ್ಮ ಬೂದೀಶ್ವರನೂ ಒಬ್ಬನಾಗಿದ್ದನು. ಉಳವಿಯಲ್ಲಿ ಮಹಾಗಣಪರ್ವವನ್ನು ಮಾಡಿತಣಿದರು. ಅಲ್ಲಿಂದ ಮುಂದೆ ಚೆನ್ನ ಬಸವಣ್ಣನವರು ಶ್ರೀ ಶೈಲದ ಕಡೆಗೆ ಪ್ರಯಾಣ ಬೆಳೆಸುವುದರಲ್ಲಿದ್ದರು.

ಆಗ ಅವರು ಶ್ರೀ ಬೂದೀಶ್ವರನನ್ನು ಕುರಿತು, "ಚರವರ್ಯರೇ, ನಾವು ಇನ್ನು ಸ್ವಲ್ಪ ದಿನಗಳಲ್ಲಿ ಬಯಲಾಗುವೆವು. ನೀವು ನಿಮ್ಮ ಯೋಗಬಲದಿಂದ ೭೭೦ ವರ್ಷಗಳವರೆಗೆ ಜೀವಿಸಿ ಎಲ್ಲ ಕಡೆಗೂ ಸಂಚರಿಸಿ ಬಸವತಂದೆಯ ತತ್ವಗಳನ್ನು ಪ್ರಸಾರಗೊಳಿಸಿರಿ. ಆ ಮೇಲೆ ನಿಮ್ಮಿಚ್ಛೆಯಂತೆ ಲಿಂಗೈಕ್ಯರಾಗಿರಿ. ಎಂದು ಅಪ್ಪಣೆಕೊಡಿಸಿದ್ದಲ್ಲದೆ ಪುನಃ ಹೇಳಿದುದೇನಂದರೆ "ಮುಂದೆ ಕೆಟ್ಟ ದಿನಗಳು ಬರುವವು. ಶಿಷ್ಟರಿಗೆ ಜಯವಾಗದು. ದುಷ್ಟರ ಹಾವಳಿಯು ಹೆಚ್ಚಾಗುವದು. ಬಡವರ ಗೋಳಂತೂ ಹೇಳತೀರದು. ಮದಾಂಧರು ದೀನದಲಿತರನ್ನು ಮೆಟ್ಟಿ ತುಳಿಯುವರು. ಧರ್ಮಾಚಾರ ನೀತಿಗಳು ಕೆಟ್ಟುಹೋಗುವವು,

ಮತಮಾನ್ಯಗಳು ಹಾಳುಬೀಳುವವು, ಕೀಳು ಮೇಲೆಂಬ ಹೋರಾಟದಲ್ಲಿ ನಮ್ಮ ನಾಡು ಅಧೋಗತಿಗೆ ಹೋಗುವದು, ಸ್ವಾರ್ಥಿಗಳು, ಕಪಟಿಗಳು, ಮುಖಸ್ತುತಿ ಮಾಡುವವರು, ಜಾಲ ಬಡಿಯುವವರು, ಭ್ರಷ್ಟಾಚಾರಿಗಳು, ಶೋಷಕರು, ಅನ್ಯಾಯ ಅಧರ್ಮದಿಂದ ನಡೆಯುವವರು, ಲೋಕಕಂಟಕರು ಇವರದೇ ರಾಜ್ಯವಾಗುವದು, ಎತ್ತ ನೋಡಿದತ್ತ ಅಜ್ಞಾನ, ಡಂಭಾಚಾರ, ಮೂಢಭಾವನೆಗಳೇ ತಲೆಯೆತ್ತಿ ಮೆರೆಯುವವು. ಜಾತಿ ಕೋತಿಗಳೆಂಬ ಭೂತಗಳು ಹುಚ್ಚೆದ್ದು ಕುಣಿದಾಡುವವು. ನಮ್ಮವರಲ್ಲಿ ಪ್ರೇಮ ಐಕ್ಯಗಳು ಲೋಪ ಹೊಂದುವವು, ಕೀಳು ಕುಲದವರನ್ನು ಉಚ್ಚಕುಲದವರು ಬಹು ಕೆಟ್ಟ ರೀತಿಯಿಂದ ನಡೆಯಿಸಿಕೊಳ್ಳುವರು. ಪಾಪ! ಕೀಳು ಕುಲದವರು ದೈನ್ಯದಿಂದ ಮೇಲಿನವರ ಸೇವೆ ಮಾಡುತ್ತ ಗುಲಾಮರಾಗಿ ನಡೆದುಕೊಳ್ಳುವರು. ಶರಣಸಂಸ್ಕೃತಿಯು ಹಾಳಾಗುವದು. ಆದುದರಿಂದ ಚರವರೋತ್ತಮರೇ, ನಮ್ಮ ನಾಡಿನ ಭವಿತವ್ಯವನ್ನು ನೀವರಿದು "ಜನತೆಯಲ್ಲಿ ಸದಾಚಾರ ಸದ್ಭಕ್ತಿಗಳನ್ನು ನೆಲೆಗೊಳಿಸಿರಿ," ಎಂದು ಅಪ್ಪಣೆ ಕೊಡಿಸಿದರು.

ಶ್ರೀ ಚೆನ್ನಬಸವೇಶ್ವರನ ಆಜ್ಞೆಯನ್ನು ಶಿರಸಾವಹಿಸಿ ಬೂದೀಶ್ವರನು "ತಂದೆಯೇ ನಿನ್ನ ಕೃಪೆಯಿಂದ ನಾಡಿನ ತುಂಬೆಲ್ಲ ಸಂಚರಿಸಿ ಶರಣರ ತತ್ತ್ವಗಳನ್ನು ಪ್ರಸಾರ ಮಾಡುವೆನು, ಹೋದ ಹೋದಲ್ಲೆಲ್ಲ ದ್ವಿತೀಯ ನಂದಿಯೆನಿಸಿದ ಬಸವೇಶ್ವರನ ಸ್ಮಾರಕವಾಗಿ ಬಸವ ವಿಗ್ರಹಗಳನ್ನು ಪ್ರತಿಷ್ಠೆಗೊಳಿಸುವೆನು. ಅಲ್ಲಲ್ಲಿ ಶ್ರೀ ಪ್ರಭುದೇವರ ಮಠಗದ್ದುಗೆಗಳನ್ನು ಸ್ಥಾಪಿಸಿ ಭಕ್ತರಿಗೆ ಶರಣರಿಗೆ ಭಕ್ತಿಮಾರ್ಗವನ್ನು ಬೋಧಿಸುವೆನು". ಎಂದು ಬಿನ್ನವಿಸಿಕೊಂಡನು.

# ೩ ನೆಯ ಸಂಧಿ

## ಉಳುವೆ

ಶ್ರೀ ಚೆನ್ನಬಸವೇಶ್ವರನು ಕೆಲ ದಿವಸಗಳ ಮೇಲೆ ಉಳುವೆಯಲ್ಲಿ ಲಿಂಗೈಕ್ಯ ವಾಗಲು ಶ್ರೀ ಬೂದೀಶನು ತಡಮಾಡದೆ ಅವರಾಜ್ಞೆಯಂತೆ ಸ್ಫೂರ್ತಿಗೊಂಡು ಉಳುವೆಯಲ್ಲಿ ವಾಸವಾಗಿದ್ದ ಸಿದ್ಧಜನಸಮೂಹಕ್ಕೆ ಬಸವ ತತ್ತ್ವಗಳನ್ನು ಬೋಧಿಸಬೇಕೆಂದು ಮನದಲ್ಲಿ ನಿಶ್ಚಯಿಸಿದನು. ಆತನು ಗವಿಗಳಲ್ಲಡಗಿರ್ದ ಸಾಧುಗಳೆಲ್ಲರನ್ನೂ ಹೊರಗೆ ಕರೆದು ಅವರಿಗೆ ಸವಿಸವಿಯಾದ ಬಸವೇಶ್ವರ ವಚನಗಳ ತಿಂಡಿ ತಿನಿಸುಗಳನ್ನು ತಿನಿಸ ಹತ್ತಲು ಅವರೆಲ್ಲ ಬೂದೀಶ್ವರ ಯೋಗಿ ಯನ್ನು ಬಹು ಪ್ರೇಮದಿಂದ ಕಂಡರು. ಆಗ ಆತನು ತನ್ನ ಬೋಧೆಯಿಂದ ಅವರ ಸನ್ಯಾಸವನ್ನು ತೊಲಗಿಸಿ ಕರ್ಮಯೋಗದ ಮಾರ್ಗವಿಡಿಸಿದನು. ಆತನು ಅವರಿಗೆ ಅಪ್ಪಣೆ ಕೊಡಿಸಿದುದೇನಂದರೆ "ಸಿದ್ಧರೇ, ನೀವೆಲ್ಲ ನನ್ನ ಮಾತನ್ನು ಶುದ್ಧ ಮನಸ್ಸಿನಿಂದ ಕೇಳಿಕೊಳ್ಳಿರಿ. ಬಸವ ವಚನಾಮೃತವನ್ನು ಸವಿದು ಆತನ ತತ್ತ್ವಗಳನ್ನು ಜಗತ್ತಿನಲ್ಲಿ ಹಬ್ಬಿಸಿರಿ. ಬಸವ ವಚನಗಳಲ್ಲಿ ದಿವ್ಯ ತತ್ತ್ವವುಂಟು, ಮೋಕ್ಷ ಮಾರ್ಗವುಂಟು. ಭಕ್ತಿ, ಶಕ್ತಿ, ವಿರಕ್ತಿ ಸಂಪದವುಂಟು, ಲೋಕ ಸಂಸ್ಕೃತಿ ಯುಂಟು, ಅವುಗಳಲ್ಲಿ ಸಾರಸರ್ವಸ್ವವು ತುಂಬಿಕೊಂಡಿದೆ,

ಕೆಲ ಮಹಾತ್ಮರಿಗೆ ಸಿದ್ಧರೆಂಬುವರು. ಕೆಲವರಿಗೆ ಅವತಾರಿಗಳೆಂಬುವರು, ಶಿವಶರಣರೆಲ್ಲರೂ ಸಿದ್ಧಪುರುಷರು. ಬಸವೇಶ್ವರನು ಅವತಾರಿ ಪುರುಷನು. ದಯೆಯೇ ವಿಶ್ವಧರ್ಮದ ಮೂಲವಾಗಿದೆ, "ದಯವೇ ಧರ್ಮದ ಮೂಲ ವಯ್ಯಾ" ಎಂದು ಬಸವೇಶನು ಹೇಳಿದ್ದಾನೆ. ವಿಶ್ವಕ್ಕೆ ಬೆಳಕು ನೀಡಲು ಭಕ್ತಿ, ಜ್ಞಾನ, ವೈರಾಗ್ಯಗಳು ಬೇಕು, ವಿಶ್ವಬಂಧುತ್ವಾದಿ ಗುಣಗಳು ಬೆಳೆದು ವಿಶ್ವ ಧರ್ಮೋದ್ಧಾರವಾಗಬೇಕು. ಇಂತಹ ತತ್ತ್ವಗಳುಳ್ಳ ವೀರಶೈವ ಧರ್ಮ ವನ್ನು ಬಸವೇಶ್ವರನು ನಿರ್ಮಾಣ ಮಾಡಿದನು,

ಇಂಥ ವಿಶ್ವವ್ಯಾಪಕ ಗುಣಗಳನ್ನು ಪ್ರತಿಪಾದಿಸುವ ಅಷ್ಟಾವರಣ, ಪಂಚಾ ಚಾರ, ಷಟ್‌ಸ್ಥಲಗಳನ್ನು ಲೋಕಹಿತಕ್ಕಾಗಿ ನೀವು ಅಳವಡಿಸಿಕೊಳ್ಳಬೇಕು. ಬಸ ವೇಶನು ಸರ್ವೋದಯದ ನಿಯಮಾವಳಿಗನುಸಾರವಾಗಿ ಕಾಯಕ ದಾಸೋಹ ವೆಂಬ ದಿವ್ಯ ತತ್ತ್ವಗಳನ್ನು ಪ್ರಸಾರ ಮಾಡಿದನು. ರಾಜನಿಂದ ರಂಕನವರೆಗೆ

ಸುಲಭವಾಗಿ ಕಾಪಾಡಿಕೊಂಡು ಹೋಗುವ ಧರ್ಮಕಟ್ಟಳೆಗಳನ್ನು ಪ್ರಚಾರದಲ್ಲಿ ತಂದನು. ಈ ಹೊಸ ಪಂಥವು ಜನರ ಮೆಚ್ಚುಗೆಗೆ ಪಾತ್ರವಾಯಿತು. ರಾಜ ರಾಜೇಶ್ವರರೆಲ್ಲ ಸಹ ಆತನ ಹೊಸ ಮತವನ್ನು ಮೆಚ್ಚಿ ಅಂಗೀಕರಿಸಿದರು.

ಬಸವೇಶನು ಅಪ್ಪಣೆಕೊಡಿಸಿದುದೇನೆಂದರೆ "ಜಗವು ಸುಳ್ಳೆಂಬ ಮಾತು ಪುಸಿ. ಜಗತ್ತು ಜಗದೀಶನ ಪ್ರಸಾದವೆಂದು ತಿಳಿದು ಸಕಲ ಭೋಗ್ಯವಸ್ತುಗಳನ್ನು ಭೋಗಿಸಬೇಕು. ಜಗತ್ತಿನಲ್ಲಿ ವರ್ಣಭೇದಗಳ ವಿಷಮತೆಯು ತೊಲಗಬೇಕು, ಸಮತಾಭಾವವು ಎಲ್ಲರಲ್ಲಿಯೂ ಮೂಡಿ ಬರಬೇಕು. ಬೆಂಕಿಯಿಂದ ಕಾಷ್ಠವು ಸುಟ್ಟು ಬೂದಿಯಾಗುವಂತೆ ಸದ್ಗುರುವಿನ ದೀಕ್ಷೆಯಿಂದ ಮಾನವನ ಆಣವ, ಮಾಯಾ, ಕಾರ್ಮಿಕ ಮಲಗಳು ಸುಟ್ಟು ಆತನು ಪರಿಶುದ್ಧನಾಗುವನು. ಈ ಪ್ರಪಂಚವೆಂಬುದು ಕರ್ತಾರನ ಕಮ್ಮಟ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು. ಆದುದರಿಂದ ಎಲ್ಲರೂ ಸಂಸಾರದಲ್ಲಿ ಒಂದಿಲ್ಲೊಂದು ಕಾಯಕವನ್ನು ಕೈಕೊಂಡು ತಮ್ಮ ಸೇವೆಯನ್ನು ಸಲ್ಲಿಸಬೇಕು. ಸಂಸಾರವು ಹೇಯವೆಂದು ತಿಳಿದು ಕಾನನವನ್ನು ಸೇರಬಾರದು. ಆದುದರಿಂದ ನೀವು ಜನಮಧ್ಯದಲ್ಲಿದ್ದು ಜನಸೇವೆ ಮಾಡಬೇಕು. ಈವರೆಗೆ ನೀವು ಜಪ, ತಪ, ಯೋಗ ಮುಂತಾದ ಸಾಧನೆಗಳನ್ನು ನಿಮ್ಮ ಸ್ವಾರ್ಥಹಿತಕ್ಕಾಗಿ ಮಾಡಿದಿರಿ. ಅದರಿಂದ ಲೋಕಕ್ಕೇನು ಹಿತ ? ಆದುದರಿಂದ ನಿಮ್ಮ ಸ್ವಾರ್ಥವನ್ನು ಬಿಟ್ಟು ಲೋಕ ಸೇವೆಗೆ ಟೊಂಕ ಕಟ್ಟಿರಿ.

ನೀವು ವರ್ಣಾಶ್ರಮ ಧರ್ಮವನ್ನನುಸರಿಸಿ ಸನ್ಯಾಸ ದೀಕ್ಷೆಯನ್ನು ಕೈಕೊಂಡು ಜಪತಪಗಳನ್ನೆಸಗಿದಿರಿ, ವರ್ಣಾಶ್ರಮಗಳು ಜಾತಿ ಭೇದವನ್ನು ಪುಷ್ಟೀಕರಿಸುತ್ತಿವೆ, ಈ ಜಾತಿ ಭೂತದಿಂದ ಭರತಖಂಡವು ಅಧೋಗತಿಗಿಳಿದಿರುವುದು ದುರ್ದೈವದ ಸಂಗತಿ. ಜಾತಿ ಭೇದಗಳನ್ನು ಹುಟ್ಟಿಸಿದವರ ಪೂರ್ವಜರು ಯಾವ ಜಾತಿಯವರಿದ್ದರೆಂಬುದನ್ನು ಜ್ಞಾಪಿಸಿಕೊಳ್ಳಿರಿ. "ವ್ಯಾಸ ಬೋಯಿತಿಯ ಮಗ. ಅಗಸ್ತ್ಯ ಕಬ್ಬಲಿಗ ಮಾರ್ಕಂಡೇಯ ಮಾತಂಗಿಯ ಮಗ. ದುರ್ವಾಸ ಮೊಚ್ಚಿಗ, ವಶಿಷ್ಠ ಡೊಂಬ. ಕಶ್ಯಪ ಕಮ್ಮಾರ, ಕೌಂಡಿನ್ಯ ಕ್ಷೌರಿಕ. "ಋಷಿಮೂಲ ನದಿಮೂಲವನ್ನೆಣಿಸಬಾರದೆಂಬ ನಾಣ್ಣುಡಿಯುಂಟು. ಅವರಂತೆ ನಾನಾ ಕುಲ–ಜಾತಿಗಳಲ್ಲಿ ಹುಟ್ಟಿದ ಶಿವಶರಣರು ಶಿವದೀಕ್ಷೆಯಿಂದ ಲಿಂಗಾಂಗಿಗಳಾದ ಬಳಿಕ ಅವರ ಪೂರ್ವದ ಕುಲ ಜಾತಿಗಳನ್ನರಸಬಹುದೇ ? ಆದುದರಿಂದ ನಿಮ್ಮ ವರ್ಣಾಶ್ರಮದ ಬಗ್ಗೆ ಒಣ ಹೆಮ್ಮೆಯನ್ನು ತಾಳದೆ ಜಾತ್ಯತೀತವಾದ ಶಿವಶರಣ ಮಾರ್ಗವನ್ನು ಹಿಡಿಯಿರಿ. ಲಿಂಗವಿದ್ದಲ್ಲಿ ಕುಲವಿಲ್ಲ. ಲಿಂಗವು ಸಮತೆಯ

ಚಿಹ್ನವು. ಲಿಂಗ ಧರಿಸಿದ ಹೊಲೆಯನೂ ಸಹ ಸದ್ಭಕ್ತನೆನಿಸುವನು, ಲಿಂಗ-ಧಾರಿಗಳೆಲ್ಲರನ್ನೂ ಶರಣರು ಅಪ್ಪಿಕೊಳ್ಳುವರು. ಆದಕಾರಣ ನೀವೂ ಲಿಂಗಧಾರಿಗಳಾಗಿ ಲೋಕ ಸೇವೆ ಮಾಡಿರಿ."

ಹೀಗೆ ಆಡಿದ ಮಾತುಗಳನ್ನು ಕೇಳಿ ಮಂತ್ರಮುಗ್ಧರಾಗಿ ಆ ಸಾಧುಗಳು ಬೂದೀಶ್ವರನಿಂದ ಹೃತ್ಪೂರ್ವಕವಾಗಿ ಲಿಂಗಧಾರಣ ಹೊಂದಿದರು. ಆಮೇಲೆ ಬೂದೀಶ್ವರನು ಅವರಿಗೆ ಅಷ್ಟಾವರಣಗಳ ಮಹತ್ವವನ್ನು ಬೋಧಿಸುವನು.

## ಅಷ್ಟಾವರಣಗಳು

ಆಷ್ಟಾವರಣಗಳೆಂದರೆ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಇವು ಎಂಟು. ಗುರುವು ಲಿಂಗವನ್ನು ಧರಿಸು-ವನು. ಲಿಂಗವು ಅಂಗೈಯಲ್ಲಿ ಪೂಜೆಗೊಳ್ಳುವದು. ಜಂಗಮ ಭಕ್ತರ ಕ್ರಿಯಾ ಭಕ್ತಿಗಳನ್ನು ಪರೀಕ್ಷಿಸಿ ತಿದ್ದುವನು. ಭಸಿತ ರುದ್ರಾಕ್ಷಿ ಮಂತ್ರಗಳು ಲಿಂಗ-ಪೂಜಾ ಸಾಧನಗಳು, ಪಾದೋದಕ ಪ್ರಸಾದಗಳು, ಲಿಂಗಾಂಗ ಸಾಮರಸ್ಯದ ಉಪಾಯಗಳು, ಇವೆಲ್ಲ ಬಾಹ್ಯ ಅಷ್ಟಾವರಣಗಳು. ಲಿಂಗವು ಒಂದೇ ಇದ್ದು ಕ್ರಿಯಾಭೇದದಿಂದ ಇಷ್ಟ, ಪ್ರಾಣ, ಭಾವವೆಂದು ಮೂರು ವಿಧವಾಗಿದೆ. ಕೈಯಲ್ಲಿ ಪೂಜೆಗೊಂಬಾಗ ಇಷ್ಟಲಿಂಗವೆನಿಸುತ್ತದೆ. ಹೃದಯದಲ್ಲಿಟ್ಟು ಧ್ಯಾನಿಸುವಾಗ ಪ್ರಾಣಲಿಂಗವೆನಿಸುತ್ತದೆ. ಭಾವದಲ್ಲಿಟ್ಟು ಮೈಮರೆತಾಗ ಭಾವಲಿಂಗವೆನಿಸುತ್ತದೆ. ಅಂತರಂಗದಲ್ಲಿ ಕೂಡ ಅಷ್ಟಾವರಣಗಳುಂಟು. ಅವು ಯಾವವೆಂದರೆ ಅರುವೇ ಗುರು, ಅನುಭವವೇ ಲಿಂಗ, ಚಿನ್ಮಯ ಶಕ್ತಿಯೇ ಜಂಗಮ, ಮಾನಸಿಕ ಶಾಂತಿಯೇ ಪಾದೋದಕ, ಪ್ರಸಾದ, ಚಿತ್ಪ್ರಭೆಯಿಂದ ಕೂಡಿದ ದಿವ್ಯ ದೃಷ್ಟಿಯೇ ರುದ್ರಾಕ್ಷ, ನಾಮ ಸ್ಮರಣೆಯೇ ಮಂತ್ರ, ಇವುಗಳನ್ನರಿತು ಆಚರಿಸಿದರೆ ಆ ಆಷ್ಟಾವರಣಗಳೇ ಆತನ ಅಂಗವಾಗುವವು.

## ಪಂಚಾಚಾರಗಳು

(೧) ಲಿಂಗವೇ ಪರವೆಂದು ತಿಳಿದು ಅನ್ಯ ದೈವಂಗಳಿಗೆರಗದೆ ತನ್ನ ಇಷ್ಟ ಲಿಂಗವನ್ನು ಪೂಜಿಸುತೆ ಲಿಂಗಾಂಗಿಗಳನ್ನು ಬಂಧುಗಳಂತೆ ಗೌರವಿಸುತ್ತ ಅವರೊ

ಡನೆ ಕೂಡಿಕೊಂಡು ಪಾದೋದಕ ಪ್ರಸಾದ ಸೇವಿಸುತ್ತ ನಡೆಯುವಂಥವನೇ ಲಿಂಗಾಚಾರಿಯು.

(೨) ಪರಸ್ತ್ರೀಯರಿಗಾಸೆ ಮಾಡದೆ, ಪರಧನವನ್ನಪಹರಿಸದೆ, ಪರಹಿಂಸೆ ಮಾಡದೆ ಒಳ್ಳೆ ಶೀಲವನ್ನು ಕಾಯ್ದುಕೊಂಡು ತನ್ನ ಕಾಯಕವನ್ನು ನಿಷ್ಠೆಯಿಂದ ಆಚರಿಸಿ ದಾಸೋಹ ಮಾಡುವವನೇ ಸದಾಚಾರಿಯು.

(೩) ದೇವ ಭಕ್ತರು ಯಾರೇ ಇರಲಿ ಅವರನ್ನು ಮನಸ್ಸಿನಿಂದ ಮನ್ನಿಸಿ ಅವರೊಡನೆ ಪ್ರೀತಿ, ಸಹಕಾರದಿಂದ ನಡೆದುಕೊಂಡು ನಾನು ಹೆಚ್ಚೆಂಬ ಅಹಂಕಾರವನ್ನು ತಾಳದೆ ಮತ್ತೊಬ್ಬನು ಕೀಳೆಂಬ ಭಾವನೆಗೆ ಆಸ್ಪದ ಕೊಡದೆ ಭಕ್ತೈಕ ಪಕ್ಷಪಾತಿಯಾಗಿರುವವನೇ ಶಿವಾಚಾರಿಯು.

(೪) ಹರಮತವನ್ನು ಶಿವಶರಣರನ್ನು ಜರೆದು ದ್ರೋಹ ಮಾಡುವ ದುಷ್ಟರನ್ನು ಪ್ರತಿಭಟಿಸಿ ಅವರಿಗೆ ತಕ್ಕ ಶಾಸನಮಾಡಿ ಸಮಾಜದ ಭದ್ರತೆಯನ್ನು ಕಾಯ್ದುಕೊಳ್ಳುವ ಮತಾಭಿಮಾನಿಯೇ ಗಣಾಚಾರಿಯು.

(೫) ಶಿವಭಕ್ತರೆಲ್ಲ ಹಿರಿಯರು. ತಾನು ಕಿರಿಯನೆಂಬ ವಿನೀತ ಭಾವವನ್ನು ತಳೆದು ಕಿಂಕರನಾಗಿ ಆಚರಿಸುವ ಸದ್ಭಕ್ತನೇ ಭೃತ್ಯಾಚಾರಿಯು.

ಈ ಪಂಚಾಚಾರಗಳನ್ನು ಆಚರಿಸುವವರಿಗೆ ಆ ಪಂಚಾಚಾರಗಳು ಅವರ ಪ್ರಾಣವಾಗುವವು.

## ಷಟ್‌ಸ್ಥಲಗಳು

(೧) ಇಷ್ಟಲಿಂಗದಲ್ಲಿ ಶ್ರದ್ಧಾಭಕ್ತಿಯನ್ನಿರಿಸಿ ಕಾಯಕದಿಂದ ಧನವನ್ನು ಗಳಿಸಿ ಗುರು ಲಿಂಗ ಜಂಗಮ ದಾಸೋಹ ಮಾಡುವಂಥ, ಭಕ್ತರಲ್ಲಿ ಜಾತಿ ಭೇದವ ನೀಗಿ ಎಲ್ಲರೂ ಒಂದೆಂಬ ಭಾವದಿಂದ ಊಟೋಪಚಾರ ಕನ್ಯಾವ್ಯವಹಾರಗಳನ್ನು ಸಾಗಿಸುವಂಥವನೇ ಭಕ್ತ.

(೨) ಪರಧನ, ಪರಸ್ತ್ರೀಯರ ಆಶೆಯನ್ನು ಬಿಟ್ಟು, ಕಿರುಕುಳ ದೈವಂಗಳನ್ನು ಜರೆದು ಪರಹಿಂಸೆಯನ್ನು ಮನದಲ್ಲಿ ತಾರದೆ ನಿಷ್ಠಾಭಕ್ತಿಯಿಂದ ಇಷ್ಟ

ಲಿಂಗವನ್ನು ಪೂಜಿಸುವಂಥವನೂ, ನ್ಯಾಯ ನಿಷ್ಠುರನೂ, ನಿರ್ದಾಕ್ಷಿಣ್ಯನೂ. ನಿರ್ಭಯನೂ, ನಿಷ್ಕಪಟ ಹೃದಯನೂ ಆದವನೇ ಮಾಹೇಶನು.

(೩) ಶಿವನು ಕೊಟ್ಟ ಭೋಗ್ಯವಸ್ತುಗಳನ್ನು ಪ್ರಸಾದ ರೂಪದಿಂದ ಶಿವನಿಗೆ ಅರ್ಪಿಸಿ ಉಳಿದ ಪ್ರಸಾದವನ್ನು ಅವಧಾನ ಭಕ್ತಿಯಿಂದ ಸೇವಿಸುದಂಥವನೇ ಪ್ರಸಾದಿಯು. ಈತನು ಮಿತಾಹಾರಿಯೂ ಮಿತಭಾಷಿಯೂ ಪ್ರಸನ್ನ ಚಿತ್ತನೂ ಆಗಿರುವನು.

(೪) ಅನುಭವ ಭಕ್ತಿಯಿಂದ ಲಿಂಗವೇ ಪ್ರಾಣ, ಪ್ರಾಣವೇ ಲಿಂಗವೆಂದರಿದು ಅಂಗದೊಳಗಿನ ಆರುಚಕ್ರಗಳ ನೆಲೆಯನ್ನು ತಿಳಿದು ಯೋಗ ಮಾರ್ಗದಿಂದ ಆಯಾಯ ಚಕ್ರಗಳಲ್ಲಿ ಆರು ಲಿಂಗಗಳನ್ನು ನೆಲೆಗೊಳಿಸಬಲ್ಲವನೇ ಪ್ರಾಣಲಿಂಗಿಯು.

(೫) ಮೂಗು, ನಾಲಗೆ, ಕಣ್ಣು, ತ್ವಚ, ಕಿವಿಗಳಿಂದುಂಟಾಗುವ ಭೋಗಸುಖವನ್ನು ಲಿಂಗಮುಖವಾಗಿ 'ಶರಣಸತಿ, ಲಿಂಗಪತಿ' ಎಂಬ ಆನಂದ ಭಕ್ತಿಯಿಂದ ಸ್ವೀಕರಿಸುವವನೇ ಶರಣನು.

(೬) ನೀರು ನೀರಿನಲ್ಲಿ ಬೆರೆಯುವಂತೆ, ಹಾಲು ಹಾಲಿನಲ್ಲಿ ಬೆರೆಯುವಂತೆ ಅಂಗನು ಲಿಂಗದಲ್ಲಿ ಸಮರಸ ಭಕ್ತಿಯಿಂದ ಸೇರಿ ಬೇರಿಲ್ಲದಂತಿರುವವನೇ ಐಕ್ಯನು.

ಅಷ್ಟಾವರಣಗಳು ವೀರಶೈವನಿಗೆ ಅಂಗವೆನಿಸುವವು; ಪಂಚಾಚಾರಗಳು ಪ್ರಾಣವೆನಿಸುವವು; ಷಟ್‌ಸ್ಥಲಗಳು ಆತ್ಮವೆನಿಸುವವು. ಆರು ಸ್ಥಲಗಳಿಂದು ವಿದಿತವಾದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಷಟ್‌ಸ್ಥಲ ಬ್ರಹ್ಮಿಗಳು ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಲ್ಲಿ ಕೂಡಿ ಒಂದಾಗುವುದೇ ಲಿಂಗಾಂಗಸಾಮರಸ್ಯವೆನಿಸಿದೆ. ಅದಕ್ಕಾಗಿ ಭಕ್ತನಿಗೆ ಆಚಾರಲಿಂಗದಲ್ಲಿ ಶ್ರದ್ಧಾಭಕ್ತಿ ಬೇಕು, ಮಹೇಶನಿಗೆ ಗುರುಲಿಂಗದಲ್ಲಿ ನಿಷ್ಠಾಭಕ್ತಿ ಬೇಕು. ಪ್ರಸಾದಿಗೆ ಶಿವಲಿಂಗದಲ್ಲಿ ಅವಧಾನಭಕ್ತಿ ಬೇಕು. ಪ್ರಾಣಲಿಂಗಿಗೆ ಜಂಗಮ ಲಿಂಗದಲ್ಲಿ ಅನುಭವ ಭಕ್ತಿಬೇಕು, ಶರಣನಿಗೆ ಪ್ರಸಾದ ಲಿಂಗದಲ್ಲಿ ಆನಂದ ಭಕ್ತಿಬೇಕು. ಐಕ್ಯನಿಗೆ ಮಹಾಲಿಂಗದಲ್ಲಿ ಸಮರಸಭಕ್ತಿಬೇಕು.



ಶ್ರೀ ಪ್ರಭು ಗದ್ದುಗೆ

ಶ್ರೀ ಬೂದೀಮಹಾಸ್ವಾಮಿಗಳವರ ಶಿವಯೋಗ ನಿಲಯ

ಷಟ್‌ಸ್ಥಲ ಸಂಪನ್ನನಾದ ಸದ್ಭಕ್ತನ ನಾಸಿಕವು ಆಚಾರಲಿಂಗವೆನಿಸು-ತ್ತದೆ; ನಾಲಗೆಯು ಗುರುಲಿಂಗವೆನಿಸುತ್ತದೆ; ಕಣ್ಣು ಶಿವಲಿಂಗವೆನಿಸುತ್ತದೆ: ತ್ವಚವು ಜಂಗಮಲಿಂಗವೆನಿಸುತ್ತದೆ; ಕಿವಿಯು ಪ್ರಸಾದಲಿಂಗವೆನಿಸುತ್ತದೆ; ಮನವು ಮಹಾಲಿಂಗವೆನಿಸುತ್ತದೆ.

ಶ್ರೀ ಗುರುವು ತನ್ನ ಯೋಗಬಲದಿಂದ ಶಿಷ್ಯನ ಮಸ್ತಕದಲ್ಲಿರುವ ಶಿವ ಕಳೆಯನ್ನು ಹಸ್ತ ಮಸ್ತಕ ಸಂಯೋಗದಿಂದ ಹೃದಯಕ್ಕೆ ಇಳುಹಿ ಅಲ್ಲಿಂದ ನೇತ್ರದ ಮುಖಾಂತರ ಹೊರದೆಗೆದು ಶಿಷ್ಯನ ಕರಸ್ಥಲಕ್ಕೆ ಕೊಟ್ಟು ಉಪಕಾರ ಮಾಡಿದ್ದಾನೆ. ಆದುದರಿಂದ ಇಷ್ಟಲಿಂಗವನ್ನು ದೇಹದಲ್ಲಿ ಧರಿಸಿ ಅಷ್ಟವಿಧ ದಿಂದ ಪೂಜಿಸಬೇಕು. ಸಾಕ್ಷಾತ್ ಪರಶಿವನು ಜಂಗಮ ರೂಪದಿಂದ ಸಂಚಾರ ಮಾಡಿ ಲೋಕಹಿತಗೈಯುವನು. ಆದುದರಿಂದ ಆ ಜಂಗಮದಲ್ಲಿಯೂ ಭಕ್ತಿ ಬೇಕು. ಕ್ರಿಯಾಚಾರಗಳನ್ನು ನಡೆಯಿಸಬೇಕಾದರೆ ಭಕ್ತಿ ಬೇಕು. ಜ್ಞಾನಪಡೆಯ ಬೇಕಾದರೆ ಭಕ್ತಿ ಬೇಕು. ಶಿವನನ್ನರಿಯಬೇಕಾದರೆ ಭಕ್ತಿ ಕ್ರಿಯೆ, ಜ್ಞಾನಗಳೆಲ್ಲ ಬೇಕು. ಇಷ್ಟಲಿಂಗಕ್ಕೆ ಪೂಜೆಯೂ ಪ್ರಾಣಲಿಂಗಕ್ಕೆ ಅನುಸಂಧಾನವೂ ಭಾವ ಲಿಂಗಕ್ಕೆ ಸಾಮರಸ್ಯವು ಬೇಕು. ಈ ರೀತಿಯಾಗಿ ವೀರಶೈವ ತತ್ತ್ವಗಳನ್ನೇ ಅಳವಡಿಸಿಕೊಂಡು ನಡೆದರೆ ಶಿವನು ನಮ್ಮಿಷ್ಟಾರ್ಥಗಳನ್ನು ಪೂರ್ತಿಗೊಳಿಸು-ವನು.

ಶ್ರೀ ಬೂದಿಯೋಗಿಯ ಮಾತುಗಳನ್ನು ಕೇಳಿ, ಈ ನವಜಂಗಮರು ಅರಿಕೆ ಮಾಡಿಕೊಂಡುದೇನಂದರೆ "ಗುರುವೇ, ನಾವಿಂದೇ ಸೇವೆಗೆ ಸಿದ್ಧರಾಗಿ ನಿಂತಿರುವೆವು. ಲೋಕಸೇವೆಯೇ ಲೋಕೇಶನ ಸೇವೆಯೆಂದು ಬೋಧೆಯ ಕಾಯಕವನ್ನು ಕೈಕೊಂಡು ಹೊರಡುವೆವು. ಸನ್ಯಾಸದೊಳಗೇನಿದೆ ?" ಎಂದು ಬೂದೀಶ್ವರನ ಅನುಜ್ಞೆ ಪಡೆದು ತೆರಳಿದರು.

## ಶ್ರೀಶೈಲ

ಶ್ರೀ ಬೂದೀಶ್ವರನು ಉಳುವೆಯನ್ನು ಬಿಟ್ಟು ಶ್ರೀಶೈಲಕ್ಕೆ ಹೋದನು! ಪ್ರಭುದೇವ, ಸಿದ್ಧರಾಮ, ಅಕ್ಕಮಹಾದೇವಿಯರು ಹೋದ ತಾಣವದು. ಅಲ್ಲಿ ಬೂದಿಯೋಗಿಯು ಜಪ, ತಪ, ಅನುಷ್ಠಾನಗಳನ್ನೆಸಗಿದನು. ಶ್ರೀಶೈಲ ಕ್ಷೇತ್ರವು ಘೋರ ಕಾನನದಲ್ಲಿ ನೆಲಸಿದೆ. ಕ್ರೂರ ಮೃಗಗಳು ಅಲ್ಲಿ ವಾಸ

ಮಾಡಿವೆ. ತರುಲತೆಗಳು ದಟ್ಟವಾಗಿ ಬೆಳೆದು ಗಾಢಾಂಧಕಾರವನ್ನುಂಟು ಮಾಡಿವೆ. ಅಲ್ಲಲ್ಲಿ ಕಿರಾತರು ಗುಡಿಸಲೊಳಗೆ ವಾಸವಾಗಿದ್ದಾರೆ. ಕರಡಿ, ಹುಲಿ. ಚಿರತೆ, ಸಿಂಹ ಮೊದಲಾದ ಹಿಂಸ್ರ ಪಶುಗಳು ಅಲ್ಲಲ್ಲಿ ಜೀವಿಸುತ್ತಿವೆ. ಅಲ್ಲಲ್ಲಿ ಬಿದಿರ ಮೆಳೆಗಳು, ಕಮಲದ ಸರೋವರಗಳು, ಉದ್ದವಾಗಿ ಬೆಳೆದ ತೆಂಗಿನ ಬನಗಳು ಒಪ್ಪುತ್ತಿವೆ. ಅಲ್ಲಿ ಶ್ರೀಕೃಷ್ಣೆಯು ಗುಡ್ಡವನ್ನು ಕೊರೆದು ಕೆಳಭಾಗದಲ್ಲಿ ಹರಿದಿರುವುದರಿಂದ ಪಾತಾಳಗಂಗೆಯೆಂದೆನಿಸಿಕೊಂಡಿದೆ. ತರತರದ ಪಶು ಪಕ್ಷಿಗಳಿಂದಲೂ ಹೂವಿನ ತರುಲತೆಗಳಿಂದಲೂ ಕೂಡಿಕೊಂಡು ನಿಸರ್ಗವು ಬಹು ರಮಣೀಯವಾಗಿ ಕಂಗೊಳಿಸುತ್ತದೆ.

ಅಲ್ಲಿ ಶ್ರೀಶೈಲ ಮಲ್ಲಿಕಾರ್ಜುನನ ದೇವಾಲಯದ ಶಿಖರವು ಸುಂದರ ವಾಗಿ ಕಾಣುತ್ತದೆ. ಭ್ರಮರಾಂಬೆಯ ಕಾಂತಿಯುಕ್ತ ಮೂರ್ತಿಯು ಸರ್ವಾಭರಣ ಗಳಿಂದ ಮಿನುಗುತ್ತಿದೆ. ಸಮೀಪದಲ್ಲಿ ಮಾನಂದಿಯ ಸರೋವರವು ಶೋಭಿ ಸುತ್ತಿದೆ. ಅಲ್ಲಿಯೇ ಕದಳಿ ಬನವುಂಟು. ಕದಳಿ ಶಬ್ದದ ರಹಸ್ಯವೇನೆಂದು ತಿಳಿದುಕೊಳ್ಳಲು ಬೂದೀಶ್ವರನು ಒಂದು ಬಿಲ್ವ ವೃಕ್ಷದ ಕೆಳಗೆ ಕುಳಿತು ಆಲೋಚಿಸತೊಡಗಿದನು. ಕದಳಿಯೆಂದರೆ ಬಾಳೆಗಿಡ, ಕಾನನ, ಶ್ರೀಶೈಲ ಸಾಧನ ಕವಚ, ಕೈಲಾಸ, ಸುಕ್ಷೇತ್ರ, ಮೋಕ್ಷಾರ್ಥಿಗಳ ಬೀಡು, ಮಾನವ ಶರೀರ, ಸಂಸಾರ ಸಾಗರ ಈ ಪ್ರಕಾರ ಆತನಿಗೆ ಅನೇಕಾರ್ಥಗಳು ಹೊಳೆದವು, ಕದಳಿ ಬನದಲ್ಲಿ ಸಿದ್ಧರ ಸಂಗದೊಡನೆ ಬೂದೀಶ್ವರನು ಅನೇಕ ವರ್ಷಗಳನ್ನು ಕಳೆ ದನು. ಅಲ್ಲಿರುವ ವಿಭೂತಿ ಮಠವನ್ನು ಕಟ್ಟಿಸಿ ಅಲ್ಲಿಯೇ ವಾಸವಾಗಿದ್ದನು.

ನಂತರ ಒಬ್ಬ ಜಂಗಮನು ಆಕಸ್ಮಾತ್ ಅಲ್ಲಿಗೆ ಬಂದನು. ಆತನು ಪ್ರಭುದೇವನೆಂದೇ ಬೂದೀಶಗೆ ಭಾಸವಾಯಿತು. ಆತನು ಪ್ರಭುವಿದ್ದುದೂ ನಿಜ, ಅನುಮಾನಿಸದೆ ಆ ಜಂಗಮನ ಪಾದಕ್ಕೆ ಅಭಿವಂದಿಸಿದನು, ಆಗ ಪ್ರಭುದೇವರು ಬೂದೀಶನಿಗೆ ಶಿವಯೋಗ ಮಾರ್ಗವನ್ನರುಹಿ, ತ್ಯಾಗ-ಭೋಗಗಳ ಸಮನ್ವಯವನ್ನು ಶ್ರುತಪಡಿಸಿ, ಕಾಯಕಯೋಗವೇ ಸರ್ವೋ-ತ್ತಮವೆಂದುಪದೇಶಿಸಿ, ಷಟ್‌ಸ್ಥಲ ವೈಭವದೊಳ್ ಮೆರೆಯೆಂದನುಗ್ರಹಿಸಿ ಅಂತರ್ಧಾನನಾದನು. ಪರಮಗುರು ಪ್ರಭುದೇವನು ತನಗೆ ಶಿವಯೋಗ ಮಾರ್ಗವನ್ನು ಬೋಧಿಸಿದ ಸ್ಥಳದಲ್ಲಿಯೇ ಬೂದೀಶನು ಪ್ರಭುದೇವರ ಗದ್ದುಗೆ ಯನ್ನು ಸ್ಥಾಪಿಸಿದನು. ಬೂದೀಶನು ಅನುಷ್ಠಾನ ಮಾಡಿದ ವಿಭೂತಿಮಠವು ಈಗಲೂ ಅವರ ಸ್ಮಾರಕವಾಗಿ ಉಳಿದಿದೆ. ಯಾತ್ರಿಕರು ಅದರ ದರ್ಶನ ಹೊಂದಿ ತಮ್ಮ ರೋಗ ರುಜಿನಾದಿಗಳನ್ನು ಕಳೆದುಕೊಳ್ಳುವರು.

# ೪ನೆಯ ಸಂಧಿ

## ಗೊಬ್ಬೂರು

ಶ್ರೀಶೈಲದಿಂದ ಸಂಚಾರ ಬೆಳಸಿ ಶ್ರೀ ಬೂದೀಶಿವಯೋಗಿಗಳು ಗೊಬ್ಬೂರೆಂಬ ಗ್ರಾಮಕ್ಕೆ ಬಂದರು. ಅಲ್ಲಿಯ ಭಕ್ತರು ಅವರ ಇಚ್ಛೆಯ ಮೇರೆಗೆ ಬೂದೀಬಸವನ ದೇವಾಲಯವನ್ನು ಕಟ್ಟಿಸಿ ಅದಕ್ಕಾಗಿ ಒಂದು ತೇರನ್ನು ಸಹ ಸಜ್ಜುಗೊಳಿಸಿದರು. ಆದರ ಮೇಲೆ ಸುವರ್ಣದ ಕಲಶವನ್ನಿರಿಸಿದರು. ಇನ್ನು ಮುಂದೆ ತೇರೆಳೆಯುವ ಸಮಯ ಬಂದಾಗ ಊರ ಸೆಟ್ಟಿ ಗೌಡರ ನಡುವೆ ಅಗ್ರಪೂಜೆಯ ಸಲುವಾಗಿ ಜಗಳ ಹುಟ್ಟಿತು, ಸೆಟ್ಟಿಯು ತೇರಿನ ಪ್ರಥಮ ಪೂಜೆಯು ನನ್ನದೆಂದು ವಾದಿಸಿದನು, ಗೌಡನು ಅದರ ಅಗ್ರಪೂಜೆಯು ತನ್ನದೆಂದು ಹಟ ಹಿಡಿದನು, ಊರು ಇಬ್ಬಣವಾಗಿ ಪರಸ್ಪರ ಹೋರಾಟಕ್ಕೆ ಪ್ರಾರಂಭವಾಯಿತು. ಊರಿಗೆ ಬಂದ ಸ್ವಾಮಿಗಳ ಕಡೆಗೆ ಯಾರೂ ಲಕ್ಷಗೊಡದಾದರು, ಅದರಿಂದ ತೇರು ಎಳೆಯುವುದು ನಿಂತು ಹೋಯಿತು.

ಶ್ರೀ ಬೂದೀಯೋಗಿಗಳಿಗೆ ಈ ವಾರ್ತೆಯು ಕಿವಿಗೆ ಮುಟ್ಟಿತು. ಅವರು ಸಿಟ್ಟಿಂದು ನುಡಿಯದೆ ತೇರಿನ ಬಳಿಗೆ ಬಂದು ಪೂಜಿಸಿ ಕಾಯಿವೊಡೆದರು. ಸುಮಂಗಲೆಯರನ್ನು ಕರೆಯಿಸಿ ತೇರಿಗೆ ಆರತಿ ಮಾಡಿಸಿದರು. ನಂತರ ತೇರಿಗೆ ಸಾಗಲೆಂದರು. ತೇರು ತನ್ನಷ್ಟಕ್ಕೆ ತಾನೆ ಮುಂದೆ ಸಾಗಿತು, ಇದನ್ನು ಕಂಡು ಎಲ್ಲರೂ ಬೆರಗಾದರು. ಆಗ ಸೆಟ್ಟಿ, ಗೌಡರು ಬಂದು ಸ್ವಾಮಿಗೆ ಸಾಷ್ಟಾಂಗವೆರಗಿ, "ಗುರುವೇ ನಮ್ಮದು ತಪ್ಪಾಯಿತು ಕ್ಷಮಿಸಬೇಕು. ವೈಸೊಕ್ಕಿನಿಂದ ವೈಮರೆತ ನಮಗೆ ಚೆನ್ನಾಗಿ ಬುದ್ಧಿಗಲಿಸಿದಿರಿ. ಪೂಜ್ಯರಾದ ತಮ್ಮನ್ನು ಲೆಕ್ಕಿಸದೆ ನಮ್ಮೊಳಗೆ ಸೆಣಸಾಡಿ ಕೆಟ್ಟೆವು." ಎಂದು ದೈನ್ಯದಿಂದ ಬೇಡಿಕೊಳ್ಳಲು ಶಿವಯೋಗಿಯು ಅವರ ತಪ್ಪನ್ನು ಮನ್ನಿಸಿ "ಊರವರೆಲ್ಲ ನೀವು ಪ್ರೇಮೈಕ್ಯದಿಂದ ನಡೆಯಿರಿ. ಮಂದಮತಿಗಳಾಗಬೇಡಿರಿ, ಶಿವನ ಕಾರ್ಯಕ್ಕೆ ತುರುಸು ಏತಕ್ಕೆ ? ಎಲ್ಲರೂ ಕೂಡಿ ಶಿವನ ಕಾರ್ಯವನ್ನು ಭಕ್ತಿಯಿಂದ ನೆರವೇರಿಸಬೇಕು. ಎಲ್ಲ ಭಕ್ತರೂ ಸರಿಸಮಾನರು. ಒಬ್ಬರು ಹೆಚ್ಚು ಇನ್ನೊಬ್ಬರು ಕಡಿಮೆಯೆಂದೇಕೆ ಹೊಡೆದಾಡುವಿರಿ ? ಕಿಂಕರ ಭಾವದಿಂದ ಸೇವೆ ಮಾಡಿರಿ, ಒಂದು ಕ್ಷುದ್ರ ಕಾರಣದಿಂದ ಒಮ್ಮೊಮ್ಮೆ ಮಹದನರ್ಥಗಳು ಸಂಭ

ವಿಸುವದುಂಟು. ಆದುದರಿಂದ ನೀವು ಪರಸ್ಪರ ಪ್ರೇಮ ಸಹಕಾರದಿಂದ ನಡೆದು ನಿಮ್ಮೂರನ್ನು ಕೈಲಾಸ ಮಾಡಬಾರದೇ ? ಎಂದು ಹೇಳಿ ಸಂಚಾರ ಬೆಳೆಸಿದರು.

## ಗೊಣ್ಣಾಗರ

ಮುಂದೆ ಶ್ರೀಗಳು ಗೊಣ್ಣಾಗರ ಎಂಬ ಊರಿಗೆ ದಯಮಾಡಿಸಿದರು. ಅಲ್ಲಿ ಮಹಾಲಿಂಗಸೆಟ್ಟಿಯೆಂಬ ಸಾಹುಕಾರನು ದೊಡ್ಡ ಮನೆಯೊಂದನ್ನು ಕಟ್ಟಿಸಿದ್ದನು. ಅಲ್ಲಿ ಬ್ರಹ್ಮರಾಕ್ಷಸವೊಂದು ವಾಸ ಮಾಡಿತ್ತು. ಸೆಟ್ಟಿಯ ಇಬ್ಬರು ಮಕ್ಕಳನ್ನು ಅದು ಕೊಂದು ತಿಂದುಬಿಟ್ಟಿತ್ತು. ಕಟ್ಟಕಡೆಗೆ ಆತನು ಆ ಮನೆಯನ್ನೇ ಬಿಟ್ಟು ಬೇರೆ ಕಡೆಗೆ ವಾಸವಾಗಿದ್ದನು. ಆ ಬ್ರಹ್ಮರಕ್ಕಸವನ್ನೋಡಿಸಲು ಸಾಹುಕಾರನು ಎಷ್ಟೋ ಮಂತ್ರ ತಂತ್ರ ಮಾಡಿಸಿದನು. ಪ್ರಾಣಿಗಳ ಬಲಿಯನ್ನು ಕೊಟ್ಟನು, ಅದಕ್ಕೆ ಆ ರಾಕ್ಷಸ ಮಣಿಯಲಿಲ್ಲ, ಮಂತ್ರಗಾರನು ಮಂತ್ರೋಚ್ಚಾರ ಮಾಡುವಾಗ ಆತನ ತಲೆಯನ್ನು ಕೊಡಹಿ ಕೇಕೆ ಹಾಕುತ್ತ ವಿನೋದದಿಂದ ಕುಣಿದಾಡಿತು. ರಾತ್ರಿಯಲ್ಲಿ ಯಾರಾದರೂ ಅಪ್ಪಿ ದಪ್ಪಿ ಆ ಮನೆಯಲ್ಲಿ ಮಲಗಿದರೆ ಸಾಕು, ನಡುರಾತ್ರಿಯಲ್ಲಿ ಆ ರಾಕ್ಷಸವು ಅವರನ್ನು ಕೊಂದೇ ಬಿಡುತ್ತಿತು.

ಅಷ್ಟರಲ್ಲಿ ಬೂದೀಯೋಗಿಗಳು ಆ ಊರಿಗೆ ಬಂದದ್ದು ತಿಳಿದು ಕೆಲವು ಕುಚೋದ್ಯಗಾರರು ಅವರನ್ನು ಆ ಮನೆಯಲ್ಲಿಳಿದುಕೊಳ್ಳಲು ಬೇಡಿಕೊಂಡರು. ಸ್ವಾಮಿಗಳು ಜ್ಞಾನದೃಷ್ಟಿಯಿಂದ ಇದನ್ನು ತಿಳಿದು ತಮ್ಮ ಸೇವಕರನ್ನು ಬೇರೆ ಕಡೆಗೆ ಕಳುಹಿಸಿ ತಾವೊಬ್ಬರೇ ಆ ಮನೆಯಲ್ಲಿ ಮಲಗಿದರು. ಒಮ್ಮಿಂದೊಮ್ಮೆ ಮಧ್ಯರಾತ್ರಿಯಲ್ಲಿ ರಾಕ್ಷಸವು ಬಂದು ನಗುತ್ತ ಚೇಷ್ಟೆ ಮಾಡುತ್ತ ನಿಂತಿರುವುದನ್ನು ಕೇಳಿ ಸ್ವಾಮಿಗಳಿಗೆ ಎಚ್ಚರವಾಯಿತು. ಅವರ ದೃಷ್ಟಿಯು ಆ ರಾಕ್ಷಸನ ಮೇಲೆ ಬಿತ್ತು. ತಕ್ಷಣವೇ ಆತನ ರಾಕ್ಷಸ ವೃತ್ತಿಯು ತೊಲಗಿ ಭಯಕಂಪಿತನಾಗಿ ಸ್ವಾಮಿಯ ಪಾದಕ್ಕೆ ಅಡ್ಡಬಿದ್ದು "ಬುದ್ಧಿ, ತಪ್ಪಾಯ್ತು, ಕ್ಷಮಿಸಿರಿ ತಾವಿದ್ದ ಮನೆಯಲ್ಲಿ ನಾನೆಂದಿಗೂ ಇರಲಾರೆನು. ಸದ್ಯ ಹೊರಟೆನು" ಎಂದೆನಲು ಶ್ರೀಗಳು "ಎಲೆ ರಾಕ್ಷಸಾ, ಮಾಯವಾಗಿ ಹೋಗಬೇಡ ಎಲ್ಲ ಜನರೂ ನೋಡುವಂತೆ ಸುಂದರವಾದ ನಿನ್ನ ನಿಜರೂಪವನ್ನು ತೊಟ್ಟು ಹೋಗಬೇಕು." ಎಂದು ಅಜ್ಞಾಪಿಸಿದರು. ಆ ಪ್ರಕಾರ ರಾಕ್ಷಸವು ತಲೆಯಲ್ಲಿ

ಸುವರ್ಣ ಕಿರೀಟ, ಕಿವಿಯಲ್ಲಿ ಕರ್ಣಕುಂಡಲ, ಮೈಮೇಲೆ ಶುಭ್ರವಾದ ನಿಲುವಂಗಿಯನ್ನು ಧರಿಸಿ ಕೈಬೆರಳುಗಳಲ್ಲಿ ರತ್ನಖಚಿತವಾದ ಪೊನ್ನುಂಗುರಗಳನ್ನಿಟ್ಟುಕೊಂಡು ಪೀತಾಂಬರವನ್ನುಟ್ಟುಕೊಂಡು ಹೊರಟುಬಿಟ್ಟಿತು.

ಸ್ವಾಮಿಗಳ ಲೀಲೆಯನ್ನು ಕಂಡು ಜನರು ಅವರನ್ನು ಬಹು ವಿಧವಾಗಿ ಕೊಂಡಾಡಿದರು. ಮಹಾಲಿಂಗಪ್ಪಸೆಟ್ಟಿಯು ಸ್ವಾಮಿಗಳನ್ನು ಕುರಿತು "ಬುದ್ಧೀ ರಾಕ್ಷಸನು ಬಿಟ್ಟು ಹೋದ ಮನೆಯನ್ನು ನಾವು ಇಂದೇ ಪ್ರವೇಶ ಮಾಡುವೆವು. ತಮ್ಮ ಪೂಜಾಪ್ರಸಾದಗಳಲ್ಲಿಯೇ ನಡೆಯಲಿ. ತಮ್ಮ ಶೇಷಪ್ರಸಾದ ನಮ್ಮೆಲ್ಲರಿಗೆ ಪ್ರಾಪ್ತವಾಗಲಿ" ಎಂದು ಪ್ರಾರ್ಥಿಸಿಕೊಂಡನು. ಶ್ರೀಗಳು ಅದಕ್ಕೊಪ್ಪಿ ಆತನಿಚ್ಛೆಯನ್ನು ಈಡೇರಿಸಿ ಮುಂದೆ ಸಂಚಾರವನ್ನು ಬೆಳೆಸಿದರು.

## ಹಿರಿಯಮೂಲಂಗೆ

ಮುಂದೆ ಯೋಗಿಗಳು ಹಿರಿಯಮೂಲಂಗೆಂಬ ಗ್ರಾಮಕ್ಕೆ ಬರಲು ಭಕ್ತರು ಅವರನ್ನು ಭಕ್ತಿಪೂರ್ವಕವಾಗಿ ಇದಿರ್ಗೊಂಡು ಕರೆತಂದು ಒಂದು ಗುರುಮಠದಲ್ಲಿಳಿಸಿ ಅವರಿಗೆ ಯಾವ ಕೊರತೆಯೂ ಆಗದಂತೆ ನೋಡಿಕೊಳ್ಳಹತ್ತಿದರು. ಪ್ರತಿನಿತ್ಯ ಶಿವಾನುಭವ ಹಾಗೂ ಶರಣರ ವಚನಗಳ ಮೇಲೆ ಪ್ರವಚನಗಳು ನಡೆಯುತ್ತಿದ್ದವು. ಭಕ್ತರು ಭಕ್ತಿವಹಿಸಿ ಕೇಳುತ್ತಿದ್ದರು. ಹೀಗಿರಲು ಒಂದು ದಿನ ಊರಲ್ಲಿ ಗಣಾರಾಧನೆ ಮಾಡಬೇಕೆಂದು ಭಕ್ತರ ಮನಸ್ಸಿನಲ್ಲಿ ಬಂದು ಪೂಜ್ಯರಿಗೆ ಅದಕ್ಕಾಗಿ ಅಪ್ಪಣೆ ಕೊಡಬೇಕೆಂದು ಬೇಡಿಕೊಂಡರು. ಅದಕ್ಕೆ ಯೋಗಿಗಳು "ಆಗಲಿ, ನಿಮ್ಮ ಕಾರ್ಯಕ್ಕೆ ಶಿವನು ಮೆಚ್ಚುವನು. ಗಣತೃಪ್ತಿಯೊಂದಿಗೆ ಬಡವರು ದೀನದಲಿತರು, ಅಂಗಹೀನರು ಮೊದಲಾದವರಿಗೆ ಪ್ರಸಾದದಿಂದ ತೃಪ್ತಿ ಪಡಿಸಿರಿ" ಎಂದು ಆಜ್ಞಾಪಿಸಿದರು. ಆ ಪ್ರಕಾರ ವಿವಿಧ ಪಕ್ವಾನ್ನಗಳನ್ನು ಸಿದ್ಧಗೊಳಿಸಿ ಮೊದಲು ಗಣತೃಪ್ತಿ ಮಾಡಿದ ಬಳಿಕ ಬಡಬಗ್ಗರ ಪಂಕ್ತಿ ನಡೆಯಿತು. ಮಧ್ಯದಲ್ಲಿ ತುಪ್ಪವು ತೀರಿ ಹೋಯಿತು. ಆಗ ಊರ ಹಿರಿಯರು ಗಡಿಬಿಡಿಯಿಂದ ತುಪ್ಪ ತೀರಿದ ಸಂಗತಿಯನ್ನು ಯೋಗಿಗಳ ಪಾದಕ್ಕೆ ಅರಿಕೆ ಮಾಡಿಕೊಂಡರು. ಆಗ ಬೂದೀಶನು ಅವರಿಗೆ ಮಲಪ್ರಭಾ ನದಿಯಿಂದ ಮೂರು ಕೊಡ ನೀರನ್ನು ತರಹೇಳಿ, ಇದೇ ತುಪ್ಪವು, ನೀಡಿರೆನಲು ಅದು ನಿಜವಾಗಿಯೂ ತುಪ್ಪವಾಯಿತು. ಎಲ್ಲರೂ ಸಂತೃಪ್ತರಾದರು.

ಅಷ್ಟರಲ್ಲಿ ಪರಊರ ಭಕ್ತರು ಮೂರು ಕೊಡ ಮೀಸಲ ತುಪ್ಪವನ್ನು ಗಣಪರ್ವಕ್ಕೆ ಸಲ್ಲಿಸಬೇಕೆಂದು ತಂದು ಯೋಗಿಗಳ ಮುಂದಿಟ್ಟು ಸಾಷ್ಟಾಂಗ ಹಾಕಿ "ಬುದ್ದೀ, ಗಣಾರಾಧನೆಗೆ ತಂದಿದ್ದೇವೆ ಸ್ವೀಕರಿಸಬೇಕೆಂದು" ಬೇಡಿ ಕೊಂಡರು, ಗುರುಗಳು ಅವನ್ನು ಸ್ವೀಕರಿಸಿ ನೆರೆದ ಭಕ್ತರಿಗೆ, "ನೀವು ಆಗಲೆ ಮಲಪ್ರಭಾ ನದಿಯಿಂದ ೩ ಕೊಡ ತುಪ್ಪವನ್ನು ಕಡತಂದಿದ್ದಿರಿ. ಈಗ ಶಿವನು ಕೊಟ್ಟಿದ್ದಾನೆ, ಈ ಮೂರು ಕೊಡಗಳನ್ನು ಆ ನದಿಯಲ್ಲಿ ಸುರುವಿ ಕಡ ಮುಟ್ಟಿಸಿರೆಂದು" ಅಪ್ಪಣೆ ಕೊಡಿಸಿದರು, ಆ ಪ್ರಕಾರ ಭಕ್ತರು ಆ ತುಪ್ಪ-ವನ್ನು ನದಿಯಲ್ಲಿ ಸುರುವಲು ಅದು ನೀರಾಗಿ ನೀರಿನಲ್ಲಿ ಕೂಡಿಕೊಂಡು ಬಿಟ್ಟಿತು. ಜನರು ಪೂಜ್ಯರ ಲೀಲೆಯನ್ನು ಮನವಾರೆ ಹೊಗಳಿದರು.

## ಗದ್ವಾಲ (ಸತಿಪತಿ ವಿರಸ)

ಬಳಿಕ ಯೋಗಿಗಳು ಗದ್ವಾಲಕ್ಕೆ ದಯಮಾಡಿಸಲು ಭಕ್ತರೆಲ್ಲರೂ ಅವ ರನ್ನು ಒಳ್ಳೆ ಸಂಭ್ರಮದಿಂದ ಬರಮಾಡಿಕೊಂಡರು. ಶ್ರೀಗಳು ಒಂದೆರಡು ದಿನ ಅಲ್ಲಿಯೇ ತಂಗಿದರು. ಯಥಾಪ್ರಕಾರ ನಿತ್ಯಪ್ರವಚನ ಶ್ರವಣವು ನಡೆ ಯುತ್ತಿದ್ದಿತು. ಅವರ ದರ್ಶನ ಶ್ರವಣದಿಂದ ಭಕ್ತರೆಲ್ಲ ಪುನೀತರಾದರು. ಆ ಊರಲ್ಲಿ ಶಿವಪ್ಪನೆಂಬ ಭಕ್ತನು ಸುಶೀಲನೂ ಸದ್ಗುಣಿಯೂ ಆಗಿದ್ದು ಒಂದು ಕಿರಾಣಿ ಅಂಗಡಿಯನ್ನಿಟ್ಟುಕೊಂಡು ಸತ್ಯಶುದ್ಧ ಕಾಯಕದಿಂದ ಜೀವಿಸುತ್ತಿದ್ದನು. ಆದರೆ ಆತನಿಗೂ ಆತನ ಹೆಂಡತಿಗೂ ತಾಳುಮೇಳು ಇರಲಿಲ್ಲ. "ಎತ್ತು ಎರೆಗೆ ಎಳೆದರೆ ಕೋಣ ಕೆರೆಗೆಳೆಯಿತು" ಎಂಬಂತಿತ್ತು ಅವರ ಬಾಳು. ಅವಳು ದುರ್ಗುಣಿ ದುರಾಚಾರಿಯಾಗಿದ್ದಳು. ಅವಳ ಚಂಡಿತನಕ್ಕೂ ನಡೆ ನುಡಿಗೂ ಬೇಸತ್ತು ಶಿವಪ್ಪನು ತನ್ನ ದುರ್ದೈವವನ್ನು ನಿಂದಿಸುತ್ತ ಕಣ್ಣು ಕಿವಿ ಮುಚ್ಚಿಕೊಂಡು ಸುಮ್ಮನೆ ಸಂಸಾರ ಸಾಗಿಸುತ್ತಿದ್ದನು. ಆತನ ಹೆಂಡತಿಯ ಹೆಸರು ಚೆನ್ನಮ್ಮ. ದಿನಾಲು ಆಕೆಯ ದುರ್ನಡತೆಯನ್ನು ನೆನೆಸಿಕೊಂಡು ತನ್ನ ದುರ್ದೈವಕ್ಕೆ ಹಲಬುತ್ತಿದ್ದನು. ತಿಂದ ಕೂಳು ಮೈಗೆ ಹತ್ತುತ್ತಿರಲಿಲ್ಲ. ಮುಂದಿ ಮಕ್ಕಳು ಬಂಧು ಬಳಗವು ಬಂದು ಚೆನ್ನಮ್ಮನಿಗೆ ಎಷ್ಟು ಬುದ್ಧಿ ಹೇಳಿ ದರೂ ಆಕೆಯು ತನ್ನ ಸ್ವಭಾವವನ್ನು ಬಿಡಲಿಲ್ಲ.

ಅಷ್ಟರಲ್ಲಿ ಶ್ರೀ ಬೂದೀಯೋಗಿಯು ಅಲ್ಲಿಗೆ ಬಂದದ್ದನ್ನು ಕೇಳಿ ಭಕ್ತಿ ಭಾವದಿಂದ ಅವರ ಪಾದಕ್ಕೆ ನಮಸ್ಕರಿಸಿ ತನ್ನ ಹೆಂಡತಿಯ ದುರ್ವ್ಯವಹಾರದ

ಬಗ್ಗೆ ವಿವರವಾಗಿ ಹೇಳಿ ಅವಳನ್ನು ಹೇಗಾದರೂ ಮಾಡಿ ತಿದ್ದಿ ನರಕಯಾತನೆಯಿಂದ ಕೂಡಿದ ತನ್ನ ಸಂಸಾರವನ್ನು ಸುಗಮಗೊಳಿಸಬೇಕೆಂದು ಅಂಗಲಾಚಿ ಬೇಡಿಕೊಂಡನು. ಇದನ್ನು ಕೇಳಿ ಬೂದೀಶನು, ಆ ಸೆಟ್ಟಿಗೆ "ನಿನ್ನ ಹೆಂಡತಿಯನ್ನು ಹೇಗಾದರೂ ಮಾಡಿ ನಮ್ಮ ಬಳಿಗೆ ಕರೆದುಕೊಂಡು ಬಾ, ಅವಳ ದುಸ್ವಭಾವವನ್ನು ತಿದ್ದುವೆನು. ಅವಳು ಒಳ್ಳೆ ಮಾರ್ಗ ಹಿಡಿಯುವಳು, ನಿನ್ನ ಸಂಸಾರವು ಸುಗಮವಾಗುವದು." ಎಂದು ಹೇಳಿ ಕಳಿಸಿದರು. ಆ ಪ್ರಕಾರ ಆತನು ಬಂದು ಹೆಂಡತಿಗೆ, "ಕಾಂತೆಯೇ ಕೇಳು. ನಿನಗೊಂದು ಒಳ್ಳೆಯ ಸುದ್ದಿಯನ್ನು ತಂದಿರುವೆ. ಊರಲ್ಲಿ ಒಬ್ಬ ದೊಡ್ಡ ಯೋಗಿಯು ಬಂದಿದ್ದಾನೆ, ಆತನು ಬೇಡಿದವರಿಗೆ ಮಕ್ಕಳನ್ನು ಕೊಡುತ್ತಾನೆ. ಆದುದರಿಂದ ನಾನೂ ನೀನೂ ಕೂಡಿ ಅವರ ದರ್ಶನಕ್ಕೆ ಹೋಗೋಣ ಬಾ," ಎನ್ನಲು ಆಕೆಯು, "ಛೀ ಮೂಳಾ, ನಿನಗೆ ಮಕ್ಕಳು ಬೇಕಾಗಿದ್ದರೆ ಆ ಯೋಗಿಯನ್ನೇ ಕೇಳಿಕೊಂಡು ಬರಬೇಕಿತ್ತು. ಕೇಳದೆ ಹಾಗೆಯೇ ಬಂದೇಕೆ ? ನನಗೆ ಮಕ್ಕಳು ಬೇಡ ನಾನು ಆ ಸನ್ಯಾಸಿಯ ಬಳಿಗೆ ಏತಕ್ಕೆ ಬರಲಿ ? ಬರುವದಿಲ್ಲ" ಎಂದು ಖಂಡತುಂಡವಾಗಿ ಹೇಳಿಬಿಟ್ಟಳು.

ಆಗ ಸೆಟ್ಟಿಯು ಅವಳ ಮನವೊಲಿಸುವದಕ್ಕಾಗಿ, "ಪ್ರಿಯೆ, ಆತನು ಕೋಮಲವಾದ ದೇಹವುಳ್ಳವನು. ಮೈಯು ಬಂಗಾರದಂತೆ ಹೊಳೆಯುತ್ತಿದೆ. ಕಾಮಿನಿಯರು ಕಾಮಿಸತಕ್ಕ ಚೆನ್ನಿಗನು. ಸ್ತ್ರೀಯರು ಒಳ್ಳೆ ವಸ್ತ್ರಭೂಷಣ ತೊಟ್ಟು ಆತನ ಸುತ್ತು ಸುಳಿದಾಡುವರು. ನೀನೂ ಈ ಸುಸಂಧಿಯನ್ನು ಕಳೆದುಕೊಳ್ಳಬೇಡ." ಎಂದು ಸುಳ್ಳು ಕಟ್ಟಿದನು. ಇದನ್ನು ಕೇಳಿ ಆಕೆಯು ಮಂದಹಾಸದಿಂದ ಯೋಗಿಯ ಬಳಿಗೆ ಬರಲು ಸಮ್ಮತಿಸಿದಳು. ಬಳಿಕ ಯೋಗಿಯ ಬಳಿಗೆ ಬಂದು ಆಕೆಯು ಭಯಭಕ್ತಿಯಿಂದ ಅವರ ಪಾದಕ್ಕೆ ನಮಸ್ಕರಿಸಲು ಆಕೆಯ ದುರ್ಗುಣವು ತೊಲಗಿತು. ಪೂರ್ವ ಸುಕೃತದಿಂದ ಅವಳಿಗೆ ಪ್ರಾಯಶ್ಚಿತ್ತ ಪಶ್ಚಾತ್ತಾಪಗಳುಂಟಾಗಿ ಕಂಬನಿಯು ಕೋಡಿಯಾಗಿ ಹರಿಯಿತು. ಆಗ ಶಿವಯೋಗಿಯು, "ತಾಯಿ, ನೀನು ಇನ್ನು ಮುಂದೆ ನಿನ್ನ ದುರ್ನಡತೆಯನ್ನು ಬಿಡು. ಗುಣವಂತಿಯಾಗು. ಶರೀರಭೋಗಕ್ಕೆ ಮೆಚ್ಚಿ ನರಕಕೂಪದಲ್ಲಿ ಬಿದ್ದು ಕೆಡಬೇಡ, ನಾಯಿಬಾಳುವೆ ಸಾಕು. ಪತಿರಾಯನೊಂದಿಗೆ ಸೊಗಸಿನಿಂದ ಸಂಸಾರಮಾಡು ಶಿವನು ರಕ್ಷಿಸುವನು" ಎಂದೊಡನೆ ಅವಳು ಅಲ್ಲಿಯೇ ನಿಂತಿದ್ದ ಪತಿಯ ಪಾದಕ್ಕೆ ಹಣೆಹಚ್ಚಿ ನಮಸ್ಕರಿಸಿದಳು. ಮುಂದೆ ತಾನೆಂದೂ ಪತಿಯಿಂದ ಅಗಲದೆ ಕೂಡಿ ಸಂಸಾರಮಾಡಿ ಮಕ್ಕಳನ್ನು ಪಡೆದು ಸುಖವಾಗಿದ್ದಳು. ಪುರಜನರು ಇದನ್ನು ಕೇಳಿ ಆಶ್ಚರ್ಯಚಕಿತರಾದರು.

ಚರಿತ್ರಹೀನಳು ಮಹಾ ಪತಿವ್ರತೆಯಾದುದನ್ನು ಕಂಡು ಬೆರಗಾಗಿ ಶಿವಯೋಗಿ ಲೀಲೆಯನ್ನು ಹಾಡಿಹರಿಸಿದರು. ಸತಿಪತಿಗಳು ಕೂಡಿ ಶಿವಯೋಗಿಯ ಪಾದಕ್ಕೆ ನಮಸ್ಕರಿಸಲು ಅವರು "ಸತಿಪತಿಗಳೊಂದಾಗಿ ಭಕ್ತಿಯಿಂದ ಗುರುಲಿಂಗಜಂಗಮ ದಾಸೋಹ ಮಾಡಿರಿ, ಹಿಂದಿನ ಶರಣ ಶರಣೆಯರ ನಡೆನುಡಿಗಳನ್ನು ಅನು-ಕರಿಸಿರಿ." ಎಂದು ಅಪ್ಪಣೆ ಕೊಟ್ಟು ಮುಂದೆ ಸಾಗಿದರು.

## ೫ನೆಯ ಸಂಧಿ

### ಕೋವಾನೂರು

ಗದ್ವಾಲದಿಂದ ಮುಂದೆ ಶ್ರೀ ಶಿವಯೋಗಿಗಳು ಕೋವಾನೂರೆಂಬ ಗ್ರಾಮಕ್ಕೆ ಬರುತ್ತಿರುವ ಮಾರ್ಗದಲ್ಲಿ ಒಂದು ಹಿಂಡುವ ಆಕಳು ಸತ್ತು ಬಿದ್ದಿತ್ತು. ಅದರ ಸುತ್ತಲೂ ಜನರು ನೆರೆದು ಆ ಆಕಳಿಗಾಗಿ ಮರಮರ ಮರಗುತ್ತಿದ್ದರು. ಆ ಆಕಳ ಕರುವು ಏನೊಂದನರಿಯದೆ ಮೊಲೆ ತಿನ್ನುವದಕ್ಕಾಗಿ ಅತ್ತಿತ್ತ ಸುತ್ತಾಡುತ್ತಿದ್ದಿತು. ಆ ಆಕಳು ಗುರುಲಿಂಗ ಜಂಗಮ ಪ್ರಾಣಿಯಾದ ಬಸವಪ್ಪನೆಂಬವನದು. ಅದರ ಬಣ್ಣ ಬಿಳಿ, ಕೋಡು ಸರಳ ಸುಂದರವಾದ ಹಾಗೂ ಪುಷ್ಟವಾದ ಮೈ, ಇವುಗಳಿಂದ ಕೂಡಿ ಪ್ರೇಕ್ಷಕರ ಕಣ್ಣುಗಳನ್ನು ಕೋರಯಿಸುತ್ತಿದ್ದಿತು. ದಿನಾಲು ತಪ್ಪದೆ ಗುರುಲಿಂಗ ಜಂಗಮ ಸೇವೆಗಾಗಿ ಹಾಲು ಕರೆಯುತ್ತಿತ್ತು.

ಆ ಬಸವಪ್ಪನ ಸತಿಯು ದಿನಾಲು ಪ್ರೀತಿಯಿಂದ ಭಸ್ಮ, ಕುಂಕುಮ, ಗಂಧ ಪುಷ್ಪಗಳಿಂದ ಆ ಆಕಳನ್ನು ಪೂಜಿಸುತ್ತಿದ್ದಳು. ಈಗ ಅದು ಸತ್ತದ್ದರಿಂದ ಮನೆಯವರೆಲ್ಲರ ಮುಖವು ಬಾಡಿಹೋಗಿತ್ತು, ಅವರು "ಶಿವ ಶಿವಾ! ಆಕಳಿಗೆ ಮರಣವಾಗಲು ಯಾವ ರೋಗವು ಬಂದೆಡೆಗೊಂಡಿತೋ! ಹಿಂದಿನ ಯಾವ ಪಾಪಕರ್ಮದಿಂದ ಕರುವಿಗೆ ಇಂಥ ದುರ್ದೆಶೆ ಬಂದಿತೋ ಪಾಪ! ಆ ತಬ್ಬಲಿ ಕರುವನ್ನು ಯಾರು ರಕ್ಷಿಸಬೇಕು!" ಎನ್ನುತ್ತ ಜನರು ಗೋಳಿಟ್ಟರು. ದೈವಲೀಲೆಯು ವಿಚಿತ್ರವಾದುದು, ಇತ್ತ ಒಬ್ಬನನ್ನು ಎತ್ತಿ ಕಟ್ಟುವದು, ಅತ್ತ ಒಬ್ಬನನ್ನು ಮೆಟ್ಟಿ ತುಳಿಯುವದು, ಕೆಲವರಿಗೆ ಹರ್ಷ ಕೊಡುವದು. ಬೇರೆ ಕೆಲವರಿಗೆ ದುಃಖವೀಯುವದು, ಆ ಕರುವಿನ ಅವಸ್ಥೆಯನ್ನು ಕಂಡು ನಾರಿ

ಯೆರು ಗಳಗಳ ಅತ್ತುಬಿಟ್ಟರು, ಕರುವು 'ಅಂಬಾ' ಯೆಂದು ಒದರುತ್ತ ತಾಯಿಯ ಮೊಲೆಗೆ ಹಂಬಲಿಸುತಿರ್ದುದು. ಈ ಕರುಣಾಜನಕ ದೃಶ್ಯವನ್ನು ಕಂಡು ಎಲ್ಲರ ಹೃದಯವು ಕರಗಿತು.

ದಾರಿಯಲ್ಲಿ ಈ ಘಟನೆ ನಡೆದಾಗ ಶ್ರೀ ಬೂದೀಶ್ವರರು ಅಲ್ಲಿಗೆ ದಯ ಮಾಡಿಸಿದರು. "ಜನರು ಅವರಿಗೆ ಅಭಿವಂದಿಸಿ, "ಬುದ್ಧಿ ಶಿವನ ಕೃಪೆಯೇ ತಪ್ಪಿ ಹೋಗಿದೆ. ಯಾರೇನು ಮಾಡುವುದು ? ಕೋವಾನೂರ ಸಿರಿಯಂತಿದ್ದ ಆಕಳಿಗೆ ಮರಣವಡೆಗೊಂಡಿದೆ. ತಾವೇ ರಕ್ಷಿಸಬೇಕು" ಎಂದು ದೈನ್ಯದಿಂದ ಪ್ರಾರ್ಥಿಸಲು ಶಿವಯೋಗಿಗಳು ತಮ್ಮ ಜೋಳಿಗೆಯಿಂದ ವಿಭೂತಿಯನ್ನು ತೆಗೆದು ಆ ಸತ್ತ ಆಕಳ ಮೈಗೆಲ್ಲ ಲೇಪಿಸಿದರು. ಅದರಿಂದ ಮರಣವು ಹಿಂಗಿ ಜೀವ ತಿರುಗಿ ಆಕಳು ನಿದ್ರೆಯಿಂದ ಎಚ್ಚತ್ತಂತೆ ಎದ್ದುನಿಂತು ಕರುವಿನ ಮೈಯನ್ನು ನೆಕ್ಕಹತ್ತಿತು. ಮೊಲೆ ಹಾಲು ತೊರೆದದ್ದರಿಂದ ಕರುವು ಜುರು-ಜುರುನೆ ಹಾಲು ಹೀರತೊಡಗಿತು. ಆ ಹಳ್ಳಿಯ ಜನರಿಗೆ ಅತ್ಯಾಶ್ಚರ್ಯವಾಗಿ ಯೋಗಿಗಳ ಲೀಲೆಯನ್ನು ಕೊಂಡಾಡಿದರು.

ಆಮೇಲೆ ಪೂಜ್ಯರು ಬಸವಪ್ಪನಿಂದ ಒಂದು ಗಡಿಗೆಯನ್ನು ತರಿಸಿ ತೊರೆದ ಆಕಳ ಮೊಲೆಯಿಂದ ಹಾಲು ಹಿಂಡಿ ಗಡಿಗೆದುಂಬಿದರು, ನಂತರ ಬಸವಪ್ಪನು ಊರ ಹಿರಿಗುರು ಚರಮೂರ್ತಿಗಳಿಗೆ ಬಿನ್ನಹ ಮಾಡಿ ಕರೆಯಿಸಿ ಆ ಕ್ಷೀರದ ಪಾಯಸ ಮಾಡಿ ಅವರಿಗೆ ತೃಪ್ತಿಬಡಿಸಿದನು.

## ನೆರೆಯೂರು

ಮುಂದೆ ಯೋಗಿಗಳು ಕೋವಾನೂರಿನಿಂದ ನೆರೆಯೂರಿಗೆ ಹೊರಟಿರಲು ದಾರಿಯಲ್ಲಿ ನಡೆದ ಒಂದು ದುರ್ಘಟನೆಯನ್ನು ಕಂಡರು. ಊರಿನ ಒಬ್ಬ ಬಡವಿಯು ಹಾದಿಗೆ ಹೊಂದಿ ಹೊರಡಿಯಲ್ಲಿ ಉರುವಲನ್ನು ಆರಿಸುತ್ತಿದ್ದಳು. ಅವಳ ಆರು ವರ್ಷದ ಮಗನು ಸ್ವೇಚ್ಛೆಯಿಂದ ಅತ್ತಿತ್ತ ನೆಗೆದಾಡಿ ಒಂದು ಹುತ್ತಿನ ಬಳಿಗೆ ಬಂದು ಅದರಲ್ಲಿ ಕೈಯಿಟ್ಟನು. ಅದರಲ್ಲಿದ್ದ ನಾಗರಹಾವೊಂದು ಅವನ ಬೆರಳನ್ನು ಕಚ್ಚಿಬಿಟ್ಟಿತು, ಆಗ ಆತನು ಚಿಟ್ಟನೆ ಚೀರಿ, ಅತ್ತು, ಬುರು ಗನ್ನು ಕಾರುತ್ತ ಆ ಹುತ್ತಿನ ಬದಿಯಲ್ಲಿ ಒರಗಿ ಬಿಟ್ಟನು, ಮಗನು ಚೀರಿದ ಶಬ್ದವನ್ನು ಕೇಳಿ ತಾಯಿಯು ಲಗುಬಗೆಯಿಂದ ಅಲ್ಲಿಗೆ ಬಂದು ನೋಡಲು

ಮಗನು ಸತ್ತು ಬಿದ್ದದ್ದು ಕಂಡು, ಹೌಹಾರಿ ಎದೆಯೆದೆ ಹೊಡೆದುಕೊಂಡು ಆಕ್ರೋಶ ಮಾಡಹತ್ತಿದಳು. "ಅಯ್ಯೋ ಮಗನೇ, ನಾನು ಯಾರ ಮೊರೆ ಹೊಗಲಿ ? ನಿನಗೆ ಹಾವು ಕಚ್ಚಿತೇ ? ಶಿವಶಿವಾ ! ನಾನೆಂಥ ದುರ್ದೈವಿಯು! ಇನ್ನು ನಾನು ಯಾರ ಮೊಗನೋಡಿ ಹಿಗ್ಗಲಿ ? ಯಾರ ದೇಹವನ್ನಪ್ಪಿಕೊಂಡು ಸಂತಸಬಡಲಿ ? ಯಾರ ತೊದಲ್ನುಡಿ ಕೇಳಿ ಆನಂದಬಡಲಿ ?"

"ಕಂದಾ, ನೀನು ನನ್ನ ಮನೆಯ ದೀಪವು. ನನ್ನ ಭಾಗ್ಯಮೂರ್ತಿಯು. ನನ್ನ ಒಡಲೆಂಬ ಕಡಲಿಗೆ ನೀನು ಪೂರ್ಣಚಂದ್ರಮನು. ನಾನು ಏನು ಮಾಡಲಿ ಹೇಗ ಮಾಡಲಿ ? ನಾನು ಬಹು ಹತಭಾಗ್ಯಳು. ನನ್ನ ಸಂಸಾರವೆಲ್ಲ ಅಡವಿ ಪಾಲಾಯಿತು ! ಕಂದಾ ನೀನು ನನ್ನನ್ನು ನೋಡಲಾರೆಯಾ ? ಮಾತಾಡಿಸ ಲಾರೆಯಾ ? ಒಡನಾಡಲಾರೆಯಾ ? ನಿನ್ನ ಓರಿಗೆಯ ಗೆಳೆಯರೊಂದಿಗೆ ಕೂಡಿ ಆಡಲಾರೆಯಾ ? ಹಟಮಾಡಿ ನನಗೆ ತಿಂಡಿ ತೀರ್ಥಗಳನ್ನು ಬೇಡಲಾರೆಯಾ? ನಾನೆಂಥ ದುರ್ದೈವಿಯು ನನಗೆ ನೀನೊಬ್ಬನೇ ಮಗ. ನೀನೇ ನನಗೆ ಸರ್ವಸ್ವ. ನೀನು ಒಂದು ವರ್ಷದ ಹಿಂದೆ ನಿನ್ನ ತಂದೆಯನ್ನು ಕಳೆದುಕೊಂಡೆ. ನೀನೇ ನನ್ನ ಭಾಗ್ಯವೆಂದು ತಿಳಿದು ಇಷ್ಟು ದಿನ ಜೀವ ಹಿಡಿದು ಬಾಳಿದೆ. ನೀನು ಅಳಿದಿರಲು ನಾನು ಉಳಿಯುವದೇತು ? ನಿನಗೆ ಸೋದರರಿಲ್ಲ. ಸೋದರಿ ಯರಿಲ್ಲ. ಮನೆಗೆ ನೀನೊಬ್ಬನೇ ಕುಲದೀಪ. ನಿನಗೇಕೆ ಮೃತಿ ಬಂದಿತು ? ನಿನ್ನ ಮುಂದೆ ನಾನೇಕೆ ಸಾಯಬಾರದು ?"

"ನಿನ್ನ ಮುಖ ನೋಡದ ನನ್ನ ಕಣ್ಣುಗಳೇಕೆ ? ನಿನ್ನ ನುಡಿಗೇಳದ ನನ್ನ ಕಿವಿಗಳೇಕೆ ? ನಿನ್ನನಪ್ಪಿಕೊಳ್ಳದ ನನ್ನ ತೋಳುಗಳೇಕೆ ? ನಿನ್ನ ಕೊಂಡಾಡದ ನಾಲಗೆಯೇಕೆ ? ಮಗನೇ, ನನ್ನ ಪ್ರಾಣವು ಏಕೆ ಹಾರಿಹೋಗಲೊಲ್ಲದು ? ನನ್ನದೆಂಥ ಕಲ್ಲೆದೆಯೋ !" ಈ ಪ್ರಕಾರ ರೋಧಿಸುತ್ತಿರುವ ತಾಯಿಯನ್ನು ಶಿವಯೋಗಿಯು ನೋಡಿ ಅಲ್ಲಿ ನಡೆದ ಘಟನೆಯನ್ನು ಕೇಳಿ ತಿಳಿದುಕೊಂಡು "ತಾಯಿ, ಚಿಂತೆಯನ್ನು ಬಿಡು. ನಿನ್ನ ಅಂತರಂಗವನ್ನು ಆನಂದಗೊಳಿಸುವ ಮಗನು ಸಾಯುವನೇ ?" ಎಂದು ಜೋಳಿಗೆಯಿಂದ ಭಸ್ಮವನ್ನು ಹೊರ ತೆಗೆದು ಸತ್ತ ಬಾಲಕನ ಬಾಯಲ್ಲಿ ಸ್ವಲ್ಪ ಉದುರಿಸಿ ಮೈಗೆಲ್ಲ ಅದನ್ನು ತೊಡೆದರು. ಅರೆಕ್ಷಣದಲ್ಲಿ ಬಾಲಕನು ಚೇತರಿಸಿಕೊಂಡು ಎದ್ದು ನಿಂತನು. ತಾಯಿಯು ಮಗನನ್ನು ಬಿಗಿದಪ್ಪಿ ಮುದ್ದಾಡಿದಳು. ಗುರುವರನ ಶ್ರೀಪಾದಕ್ಕೆ ನಮಸ್ಕರಿಸಿ "ಗುರುವೇ. ನನ್ನ ಕಲ್ಪತರುವೇ, ನೀನು ಬಂದು ನನ್ನ ಕೂಸಿನ ಜೀವಾ ಉಳಿಸಿದೆ, ನಿನ್ನುಪಕಾರವನ್ನು ನಾನು ಹೇಗೆ ಮರೆಯಲಿ? ತಂದೆಯೇ

ನನ್ನ ಮನೆಗೆ ಬಂದು ನನ್ನ ಅಳಲಿ ಭಕ್ತಿಯನ್ನು ಕೈಕೊಳ್ಳಬೇಕೆಂದು ದೈನ್ಯದಿಂದ ಬೇಡಿಕೊಂಡಳು. ಅದಕ್ಕೆ ಯೋಗಿಯು. "ಮ ಗ ಳು ಕರೆಯಲು ಬರನೆ ಅಂದೆಯು ? ಇದೆಂಥ ಮಾತಮ್ಮಾ ? ಎಂದು ನುಡಿದರು.

ಆ ಮೇಲೆ ಯೋಗಿಗಳು ಆ ನಾಗರಹಾವು ಎತ್ತ ಹೋಯಿತೆಂದು ಆ ಮಗುವನ್ನು ಕೇಳಲು ಆತನು ಹು ತ್ತಿ ನ ಕಡೆಗೆ ಬೆರಳು ಮಾಡಿ ತೋರಿಸಿದನು. ಆಗ ಯೋಗಿಯು ಶೀಘ್ರವಾಗಿ ಅಲ್ಲಿಗೆ ಬಂದು ಮಂತ್ರವನ್ನುಚ್ಚರಿಸಲು ನಾಗರಹಾವು ಹೊರಬಿದ್ದಿತು. ಯೋಗಿಗಳು ಅದನ್ನು ತಮ್ಮ ಕೈಯಲ್ಲಿ ಎತ್ತಿಕೊಳ್ಳಲು ಅದು ಸುವರ್ಣ ನಾಗವಾಗಿ ಕೈಗೆ ಸುತ್ತಿಕೊಂಡಿತು. ಆಗ ಯೋಗಿಗಳು. "ಮಗಳೇ, ಇನ್ನು ನಿನ್ನ ಬಡತನವು ಹಿಂಗುವದು. ಈ ಸುವರ್ಣ ನಾಗವನ್ನು ನೀನು ಪಡೆದಿರುವೆ. ಇದರಿಂದ ನಿನ್ನ ಮಗನು ಘನ ಶ್ರೀಮಂತನಾಗುವನು. ನಡೆ ತಾಯಿೞ. ನಿನ್ನ ಮನೆಗೆ ಹೋಗೋಣ. ನೀನು ಈವರೆಗೆ ಪಟ್ಟಕಷ್ಟಗಳೆಲ್ಲ ದೂರವಾಗುವವು" ಎಂದು ಹೇಳಿದರು.

ಆಕೆಯು ಆ ನಾಗವನ್ನು ತನ್ನ ಕಟ್ಟಿಗೆಯ ಹೊರೆಯಲ್ಲಿಟ್ಟು ತಲೆಯ ಮೇಲೆ ಹೊತ್ತುಕೊಂಡು ಮಗನನ್ನು ಕಂಕುಳಲ್ಲಿ ಎತ್ತಿಕೊಂಡು ಶಿವಯೋಗಿಗಳೊಡಗೂಡಿ ಮನೆಗೆ ಬಂದು ಆ ನಾಗವನ್ನು ಜಗುಲಿಯ ಮೇಲಿಟ್ಟು ಭಸ್ಮ ಪತ್ರಿ ಪುಷ್ಪಾದಿಗಳಿಂದ ಪೂಜಿಸಿ ಶಿವಯೋಗಿಗಳಿಗೆ ಜಳಕ ಪೂಜೆ ಮಾಡಿಸಿ, ಮಾಡಿದ ಪ್ರಸಾದವನ್ನು ಎಡೆ ಮಾಡಿ ಸಂತೈಸಿದಳು. ಸತ್ತವರನ್ನು ಬದುಕಿಸಿದವರುಂಟೆ ? ಇವರೆಂಥ ಮಹಾತ್ಮರು ! ಎಂದು ಜನರು ಬೂದೀಶನ ಲೀಲೆಯನ್ನು ಹೊಗಳಿದರು.

## ಪೋತನೂರು — ಕಂದಮುಲಾಯಿ

ಅಲ್ಲಿಂದ ಮುಂದೆ ಬೂದೀಶ್ವರನು ಪೋತನೂರೆಂಬ ಗ್ರಾಮಕ್ಕೆ ಆಗಮಿಸಿದನು. ಅಲ್ಲಿ ಕೆರೆಯ ದಂಡೆಯಮೇಲೆ ತಂಗಿ ಲಿಂಗಪೂಜಾನಂದದಲ್ಲಿ ಕಾಲ ಕಳೆಯುತ್ತಿರಲು ಅಲ್ಲಿಗೆ ಅವರ ದರ್ಶನಕ್ಕಾಗಿ ಬಂದ ಜನರ ಬಾಯಿಂದ ಅವತ್ತು ಪೋತನೂರ ಗ್ರಾಮದೇವತೆಯಾದ ದೇವಕಿಯ ಜಾತ್ರೆಯಾಗುವದೆಂದು ತಿಳಿಯಿತು. ಮತ್ತು ಮೂಢ ಜನಗಳು ದೇವಿಗೆ ಕುರಿ, ಕೋಣ, ಕೋಳಿಗಳ ಬಲಿ ಕೊಡುವದು ಗೊತ್ತಾಯಿತು. ಈ ತರದ ಕೀಳು ಸಂಪ್ರ

ದಾಯವು ಬಹುಕಾಲದಿಂದ ಸಮಾಜದಲ್ಲಿ ಬೇರೂರಿದ್ದಿತು. ಆ ಮೇಲೆ ಯೋಗಿಯು ಊರೊಳಗೆ ಬಂದನು.

ಊರಲ್ಲಿ ಕೋಣನ ಮೆರವಣಿಗೆ ಸಾಗಿತ್ತು. ಅದರ ಹಣೆಗೆ ಕುಂಕುಮ ಹಚ್ಚಿ ಕೊರಳಿಗೆ ಬೇವಿನೆಲೆಯ ಹಾರವನ್ನು ಹಾಕಿದ್ದರು. ಕಣೆಯ ಕಣಕಣ ಶಬ್ದವೂ ಡೊಳ್ಳಿನ ಢಮಂ ಢಮಂ ಶಬ್ದವೂ ಕೇಳಿ ಬರುತ್ತಿತ್ತು. ರಣಕಹಳೆಗಳು ಭೋರ್ಗರೆಯುತ್ತಿದ್ದವು. ದೇವಿಯ ಗುಡಿಯಲ್ಲಿ ಜಾಂಗುಟಿಯ ನಾದವು ಎಲ್ಲ ಕಡೆಗೂ ಪಸರಿಸಿದ್ದಿತು. ಗುಡಿಯನ್ನು ಸಾರಿಸಿ ಗೋಡೆಗೆ ಸುಣ್ಣ ಕೆಮ್ಮಣ್ಣು ಬಳಿದಿದ್ದರು. ದೇವಿಗೆ ಹೊಸ ಸೀರೆಯನ್ನುಡಿಸಿ, ಹೊಸಕುಪ್ಪಸ ತೊಡಿಸಿ, ಆಭರಣಗಳನ್ನು ಹಾಕಿ ಸಿಂಗಾರ ಮಾಡಿದ್ದರು. ಅಷ್ಟರಲ್ಲಿ ಗುರುದೇವನು ಅಲ್ಲಿಗೆ ಬಂದು ಏನಿದು ಸಂಭ್ರಮವೆಂದು ಒಬ್ಬನನ್ನು ಕೇಳಿದರು. ಅದಕ್ಕೆ ಆತನು ನಮಸ್ಕರಿಸಿ "ಸ್ವಾಮಿ, ನಾಳೆ ದೇವಿಯ ಜಾತ್ರೆಗೆ ಈ ಕೋಣವನ್ನು ಕಡಿಯು-ವರು. ಇವತ್ತು ಅದರ ಮೆರವಣಿಗೆ ಹೊರಟಿದೆ" ಎಂದು ಹೇಳಿದನು.

ಅದನ್ನು ಕೇಳಿ ಶ್ರೀಗಳು "ಅಯ್ಯಾ ನೀವೆಂಥ ಘಾತಕರು ! ದೇವಿಗೆ ಬಲಿಯನ್ನು ಕೊಡುವರೆ ? ಮೂಕ ಪ್ರಾಣಿಗಳನ್ನು ಕೊಂದು ಏಕೆ ಪಾಪ ಕಟ್ಟಿಕೊಳ್ಳುವಿರಿ ? ನಿಮ್ಮ ಈ ಕೃತಿಯಿಂದ ದೇವಿಯು ತೃಪ್ತಳಾಗುವಳೇ ? ಕೊಲ್ಲದಿರ್ಪುದೇ ಧರ್ಮ. ಕೊಲ್ಲುವವರು ನರಕಕೂಪದಿ ಬಿದ್ದು ಹೊರಳಾ ಡುವರು. ನಿಮಗೆ ಕೊಲ್ಲುವ ಧರ್ಮವನ್ನು ಕಲಿಸಿಕೊಟ್ಟವರಾರು ? ದೇವಿ ಕ್ರೂರಳೇ ? ಆಕೆಯು ಮೂಕಪ್ರಾಣಿಗಳ ಬಲಿ ಬೇಡುವಳೇ ? ಎಂಥ ದುಷ್ಟ ಸಂಪ್ರದಾಯವಿದು ! ಆಕೆಗೆ ಹುಗ್ಗಿ ಹೋಳಿಗೆಗಳ ನೈವೇದ್ಯ ಮಾಡಿ ತೃಪ್ತಿ ಪಡಿಸಿರಿ, ಆಕೆಯು ನಿಮ್ಮ ಇಷ್ಟಾರ್ಥಗಳನ್ನು ಪೂರೈಯಿಸುವಳು. ಪ್ರಾಣಿಗಳಿ-ಗೆಲ್ಲ ದಯೆ ತೋರಿಸಬೇಕು. "ದಯವಿಲ್ಲದ ಧರ್ಮವದಾವುದಯ್ಯಾ ?" ಎಂದು ಶರಣ ಶ್ರೀ ಬಸವೇಶ್ವರರು ಹೇಳಿಲ್ಲವೇ? ನಿಮ್ಮ ಎದೆಯಲ್ಲಿ ದಯೆಯೇ ಇಲ್ಲವೇ? ದಯವೇ ದೇವರೆಂಬುದನ್ನು ಅರಿಯಿರಾ ?" ಹೀಗೆಂದು ನುಡಿದರು.

ಈ ಮಾತುಗಳನ್ನು ಕೇಳಿ ಊರಗೌಡನು ಮುಂದೆ ಬಂದು "ಸ್ವಾಮಿ ಗಳೇ ನಿಮಗೆ ವಿಧಿಗಿದಿ ಕಾಡುತ್ತದೇನು ? ಬಲಿಕೊಡಬೇಡವೆಂದು ಏಕೆ ಹೇಳುವಿರಿ ? ಮೊದಲಿನಿಂದ ಈ ರೂಢಿ ಬಂದಿದೆ. ನಮ್ಮ ಹಿರಿಯರು ಹುಚ್ಚರೇ ? ನೀವು ಮಾತ್ರ ಜಾಣರೇ ? ದೇವಿಯು ನಾವು ಕೊಟ್ಟ ಬಲಿ ಯನ್ನು ಆನಂದದಿಂದ ಕೊಂಬುವಳು. ನಾವು ಬಲಿ ಕೊಡದಿದ್ದರೆ ಆಕೆಯು

ಮಾರಿಕಾ, ಗಾಳಿ ದೇವತೆಗಳನ್ನು ತಂದು ಊರನ್ನೆಲ್ಲ ಧ್ವಂಸ ಮಾಡಿಬಿಡುವಳು. ತಾವು ದೊಡ್ಡವರು, ನಮ್ಮ ಕಾರ್ಯಕ್ಕೆ ಅಡ್ಡ ಬರದೆ ನಮ್ಮನ್ನು ಹುರಿದುಂಬಿಸ ಬೇಕೆಂದು ನುಡಿಯಲು ಊರ ದೈವವೆಲ್ಲ ಸೈ ಸೈಯೆಂದಿತು. ಸ್ವಾಮಿಗಳನ್ನು ಸಿಟ್ಟಿನಿಂದ ನೋಡಿ ಅವುಡುಗಚ್ಚಿ "ಸ್ವಾಮೀ, ನಮ್ಮಗೊಡವೆ ನಿಮಗೇಕೆ ? ನಾವು ಬಲಿಯನ್ನು ಕೊಟ್ಟೇತೀರುವೆವು." ಎಂದು ನುಡಿಯಿತು,

ಈ ಮಾತುಗಳನ್ನು ಯೋಗಿಗಳು "ನೀವು ಮಂದಮತಿಗಳು. ಪೋತನೂರಿಗೆ ಏನೋ ಒಂದು ದುರ್ಭಾಗ್ಯವೊದಗುವಂತೆ ಕಾಣುತ್ತದೆ. ಇಂದು ಮಧ್ಯ ರಾತ್ರಿಯಲ್ಲಿಯೇ ದೇವಿಯು ನಿಮ್ಮ ಕೃತಿಗೆ ಸಿಟ್ಟಾಗಿ ಈ ಊರು ಬಿಟ್ಟು ಹೋಗಿ ಬಿಡುವಳು. ನಿಮ್ಮ ನಾಳಿನ ಬಲಿದಾನವು ನಿಂತು ಹೋಗುವದು." ಎಂದು ಸಿಟ್ಟಿನಿಂದ ನುಡಿದರು. ಇದನ್ನು ಕೇಳಿ ದುರುಳರು, "ಸುಮ್ಮನೇ ಏಕೆ ಬಡಬಡಿಸುತ್ತೀರಿ ? ದೇವಿಯು ಗುಡಿಬಿಟ್ಟು ಹೋಗುವಳೇ ? ಹೇಗೆ ಹೋಗುವಳೋ ನೋಡೋಣ" ಎಂದು ಹೇಳಿ ಯೋಗಿಗೆ ಹೆಡಮುರಿಗೆ ಕಟ್ಟಿ ಒಂದು ಕೋಣೆಯಲ್ಲಿರಿಸಿ ಬೀಗ ಹಾಕಿದರು. ದೇವಿಯ ಗುಡಿಗೆ ಬೀಗ ಜಡಿದು ರಾತ್ರಿ ಪಂಜುಗಳನ್ನು ಹಚ್ಚಿ ಕೆಲವರು ಕಾವಲು ಮಾಡಿದರು.

ಯೋಗಿಯು ಮಧ್ಯ ರಾತ್ರಿಯಲ್ಲಿ ಮಾಯೆಯಿಂದ ದೇವಕಿಯ ಬಳಿ ಹೊಕ್ಕು ಆಕೆಗೆ ಹೀಗೆ ಬೇಡಿಕೊಂಡರು. "ಲೋಕಮಾತೆಯೇ, ನಿನಗೆ ಈ ದುರುಳರ ನೆರೆ ಬೇಡಮ್ಮಾ ಮೂಕ ಪ್ರಾಣಿಗಳಾದ ಕುರಿ, ಕೋಣ, ಕೋಳಿಗಳನ್ನು ನಿನಗೆ ಬಲಿಗೊಡುವರಮ್ಮಾ ! ಎಂಥ ನಿಷ್ಕರುಣಿಗಳಾದ ರಕ್ಕಸರಿವರು ! ತಾಯೀ, ನಿನ್ನ ಸಾತ್ವಿಕ ಕಳೆಯನ್ನು ಲೋಕಕ್ಕೆ ತೋರಿ ಕೃಪೆಯಿಂದ ಶಾಂತಿಯನ್ನು ನೆಲೆಗೊಳಿಸಮ್ಮಾ. ಇಂದು ರಾತ್ರಿಯೇ ಇಲ್ಲಿಂದ ಕಂದಮಲಾಯಿ ಗ್ರಾಮಕ್ಕೆ ತೆರಳು. ರಾತ್ರಿ ಒಂದು ಬೇವಿನಮರದಡಿಯಲ್ಲಿ ವಾಸ ಮಾಡು, ಗ್ರಾಮದ ಜನಗಳು ನಿನಗೆ ಹುಗ್ಗಿ ಹೋಳಿಗೆಗಳ ಎಡೆಗಳನ್ನು ತಂದೊಪ್ಪಿಸುವರು. ಯೋಗಿಯ ಮಾತುಗಳು ಸರಿಯೆಂದೊಪ್ಪಿ ದೇವಕಿಯು ಅಂದು ರಾತ್ರಿ ಪೋತನೂರನ್ನು ಬಿಟ್ಟು ಕಂದಮಲಾಯಿಗೆ ಬಂದು ಒಂದು ಬೇವಿನಮರದಡಿಯಲ್ಲಿ ತಳವೂರಿದಳು.

ಶಿವಯೋಗಿಗಳು ಮಾಯೆಯಿಂದ ತಮ್ಮ ಕೋಣೆಯನ್ನು ಬಿಟ್ಟು ಕಂದಮಲಾಯಿಗೆ ಅದೇ ರಾತ್ರಿ ಬಂದು ಬಸವೇಶ್ವರನ ಗುಡಿಯಲ್ಲಿ ಮಲಗಿ ಮರುದಿನ ನಸುಕಿನಲ್ಲೆದ್ದು ಊರಲ್ಲೆಲ್ಲ ಪೋತನೂರ ದೇವಿಯು ಕಂದಮಲಾಯಿ ಗ್ರಾಮಕ್ಕೆ ಬಂದು ಬೇವಿನಮರದಡಿಯಲ್ಲಿ ನೆಲಸಿರುವಳು ಎಂದು ಸುದ್ದಿ ಹಬ್ಬಿ

ಸಿದರು. ಜನರು ತಂಡತಂಡವಾಗಿ ಅಲ್ಲಿಗೆ ಬಂದರು. ಬಂದವರಿಗೆ ಯೋಗಿಗಳು, "ಇಂದು ನೀವು ಪುಣ್ಯವಂತರು. ನಿಮ್ಮೂರಿಗೆ ದೇವಕಿಯು ಬಂದು ನೆಲಸಿದ್ದಾಳೆ. ಇಂದೇ ಅವಳ ಜಾತ್ರೆಯನ್ನು ನೆರವೇರಿಸಿ ಆಕೆಗೆ ಹೋಳಿಗೆ, ಹುಗ್ಗಿ ಪಾಯಸಗಳನ್ನು ಎಡೆ ಮಾಡಿರಿ. ಹೋತು, ಕುರಿ, ಕೋಣ, ಕೋಳಿಗಳ ಬಲಿ ಕೊಡಬೇಡಿರಿ. ಆಕೆಯು ಪಶುವಧೆಯ ಕ್ರೂರತನಕ್ಕೆ ಹೇಸಿ ಪೋತನೂರ ಬಿಟ್ಟು ನಿಮ್ಮಲ್ಲಿಗೆ ಆಗಮಿಸಿದ್ದಾಳೆ." ಹೀಗೆ ಯೋಗಿಯಾಡಿದ ಮಾತಿಗೆ ಊರವರೆಲ್ಲರೂ ಹಿಗ್ಗಿ ಅವರ ಅಪ್ಪಣೆಯಂತೆ ಅಂದು ಯಾತ್ರೋತ್ಸವಕ್ಕೆ ಅಣಿಯಾದರು.

ಇತ್ತ ಪೋತನೂರ ಗ್ರಾಮದೈವವು ಹೊತ್ತು ಹೊರಟಕೂಡಲೆ ಯೋಗಿಯನ್ನಿರಿಸಿದ ಬಾಗಿಲನ್ನು ತೆರೆಯಲು ಯೋಗಿಯು ಮಾಯವಾದದ್ದನ್ನು ಕಂಡು ಬೆರಗಾದರು. ಪಾಪ! ಸ್ವಾಮಿಗಳೆತ್ತ ಪಾರಾಗಿ ಹೋದರೋ. ನಮಗೆಲ್ಲಿ ಶಾಪಕೊಡುವರೋ! ದೊಡ್ಡವರ ಮಹಿಮೆಯನ್ನು ನಾವೆತ್ತ ಬಲ್ಲೆವು? ನಮ್ಮೂರಿಗೆ ಇನ್ನು ಅಳಿಗಾಲ ಬಂದೊದಗುವದೋ ಏನೋ ಎಂದು ಚಿಂತಿಸುತ್ತಿರುವಷ್ಟರಲ್ಲಿ ಅವರಿಗೆ ದೇವಕಿಯು ಯಾವುದೋ ಮಾಯೆಯಿಂದ ತನ್ನ ಮಂದಿರ ಬಿಟ್ಟು ಹೋಗಿಬಿಟ್ಟದ್ದು ಗೊತ್ತಾಯಿತು. ಆ ಗಲೂರಿನ ಗೌಡರು, ಸೆಟ್ಟರು ಕೂಡಿ ದೇವಕಿ ಮತ್ತು ಸ್ವಾಮಿಗಳು ಎತ್ತ ಹೋಗಿರಬಹುದು" ? ಎಂದು ಯೋಚಿಸುತ್ತಿರುವಷ್ಟರಲ್ಲಿ ಕಂಡಮಲಾಯಿ ಗ್ರಾಮದ ಓಲೇಕಾರನೋರ್ವನು ಒಂದು ಪತ್ರವನ್ನು ತಂದು ಮುಜುರೆ ಮಾಡಿ ಗೌಡರ ಕೈಯಲ್ಲಿ ಕೊಟ್ಟನು. ಗೌಡರು ಅದನ್ನು ಓದಿಕೊಂಡು ನೆರೆದ ಜನರಿಗೆ "ದೇವಿಯು ಕಂದಮಲಾಯಿ ಗ್ರಾಮಕ್ಕೆ ಹೋಗಿರುವಳು. ಗುರುದೇವನೂ ಸಹ ಅಲ್ಲಿಗೇ ಹೋಗಿಬಿಟ್ಟಿದ್ದಾನೆ. ಅವರ ಇಪ್ಪಣೆಯಂತೆ ಇಂದು ಅಲ್ಲಿ ದೇವಿಯಜಾತ್ರೆ ನಡೆಯುವದು. ಅದಕ್ಕಾಗಿ ಪೋತನೂರ ಗ್ರಾಮದ ಪ್ರಮುಖರೆಲ್ಲ ಜಾತ್ರೆಗೆ ಬರಬೇಕೆಂದು ಅಮಂತ್ರಣವಿತ್ತಿರುವರು." ಎಂದು ಹೇಳಲು ಎಲ್ಲರೂ ಅಲ್ಲಿಗೆ ಹೋಗಿ ಸ್ವಾಮಿಯ ಮುಂದೆ ತಮ್ಮ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿ ಅವರ ಕ್ಷಮೆ ಬೇಡಬೇಕೆಂದು ನಿರ್ಧರಿಸಿದರು. ಆ ಪ್ರಕಾರ ಗುರುಸನ್ನಿಧಿಗೆ ಬಂದು "ಬುದ್ಧೀ, ನಮ್ಮದು ತಪ್ಪಾಯ್ತು, ಕ್ಷಮಿಸಬೇಕು." ಎಂದು ಬೇಡಿಕೊಳ್ಳಲು ಅವರು "ಪೋತನೂರವರು ಮತ್ತು ಕಂದಮಲಾಯಿ ಭಕ್ತರು ಕೂಡಿಕೊಂಡು ಸಹಕರಿಸಿ ಜಾತ್ರೆಯನ್ನು ಸಂಭ್ರಮದಿಂದ ಜರುಗಿಸಿರೆಂದು ಆಜ್ಞೆಯಿತ್ತು ತಮ್ಮ ಸಂಚಾರವನ್ನು ಬೆಳೆಸಿದರು.

# ೬ನೆಯ ಸಂಧಿ

## ಪಾಲ್ಕುರಿಕೆ

ಶ್ರೀ ಬೂದೀಶಯೋಗಿಯು ಮುಂದೆ ಪಾಲ್ಕುರಿಕೆ ಸೋಮನಾರಾಧ್ಯರ ವ್ರತಶೀಲಗಳ ಮಹಿಮೆಯನ್ನು ಕೇಳಿ ಅವರ ದರ್ಶನಕ್ಕಾಗಿ ಅಲ್ಲಿಗೆ ಬಂದನು. ಆತನ ಆಗಮನವನ್ನು ಜ್ಞಾನದೃಷ್ಟಿಯಿಂದ ತಿಳಿದು ಸೋಮನಾರಾಧ್ಯರು ಅವರನ್ನು ಇದಿರ್ಗೊಂಡು ಕರೆತಂದು ಉಚ್ಚಪೀಠದಲ್ಲಿ ಕುಳ್ಳಿರಿಸಿದರು. ಸೋಮನಾರ್ಯರು ವರಕವಿಗಳು, ಮಹಾತತ್ತ್ವಜ್ಞಾನಿಗಳು, ಲಿಂಗನಿಷ್ಠರು, ೬೩ ಶೀಲಗಳನ್ನು ದಿನಾಲು ತಪ್ಪದೆ ಆಚರಿಸುವಂಥವರು, ಬಸವೇಶ್ವರನಲ್ಲಿ ಅತ್ಯಂತ ನಿಕಟ ಭಕ್ತಿಯುಳ್ಳವರು, ಕನ್ನಡ, ಸಂಸ್ಕೃತ, ಆಂಧ್ರ ಭಾಷೆಗಳಲ್ಲಿ ಅದ್ವಿತೀಯ ಪಂಡಿತರು, ಬೂದೀಶ್ವರನು ಅವರ ಬಳಿಗೆ ಬಂದಾಕ್ಷಣವೇ ಊರೊಳಗಿನ ಭಕ್ತರು ಚರವರ್ಯರ ದರ್ಶನಕ್ಕೆ ಬಂದರು. ಸುಮಂಗಲೆಯರು ಸುಶ್ರಾವ್ಯವಾಗಿ ಮಂಗಲಗೀತೆಯನ್ನು ಹಾಡಿದರು. ದೀಪಾರತಿಯನ್ನು ಬೆಳಗಿದರು. ಆ ಇಬ್ಬರು ವಿಭೂತಿಗಳ ನಡುವೆ ಪರಸ್ಪರ ಕುಶಲಪ್ರಶ್ನೆಗಳಾದ ಬಳಿಕ ಒಬ್ಬ-ರನ್ನೊಬ್ಬರು ವಿಶೇಷವಾಗಿ ಕೊಂಡಾಡಿದರು. ಭಕ್ತರು ಕಾಯಿ ಕರ್ಪೂರ ಫಲಾದಿಗಳನ್ನು ತಂದು ಯೋಗಿಯಿಂದ ಆಶೀರ್ವಾದ ಪಡೆದರು.

ಹೀಗೆ ಕೆಲವು ದಿನ ಕಳೆಯುತ್ತಿರಲು ಸೋಮನಾರ್ಯರ ಕಟ್ಟುನಿಟ್ಟಾದ ಆಚಾರಗಳನ್ನು ಬೂದೀಶ್ವರರು ನೋಡಿ ಸಂತಸಬಟ್ಟರು. ಅವರ ತನುವೇನೋ ಬಹು ಪರಿಶುದ್ಧವಾಗಿದ್ದುದು ನಿಜ. ಆದರೆ ಅವರ ಅಂತರಂಗವು ಅಷ್ಟು ಪರಿಶುದ್ಧವಾದದ್ದು ಯೋಗಿಗಳಿಗೆ ಕಂಡುಬರಲಿಲ್ಲ. ಆಗ ಅವರು ಸೋಮ-ನಾರ್ಯರಿಗೆ "ಪರಮಪೂಜ್ಯರೇ, ಸರ್ವಶೀಲದ ಹೊನ್ನಮ್ಮನೆಂಬ ಸಾಧ್ವಿಯು ಪಿರಿಪಲ್ಲಿಯೆಂಬೂರಲ್ಲಿ ವಾಸಿಸುವಳು. ಅವಳ ಶೀಲದ ಕೀರ್ತಿಯು ಸುತ್ತೂ ಕಡೆಗೆ ಹಬ್ಬಿರುವದು. ತಾವು ಆಕೆಯ ದರ್ಶನ ಹೊಂದುವುದು ಉತ್ತಮ" ಎಂದು ನುಡಿದರು. ಆ ಮಾತಿಗೆ ಸೋಮನಾರ್ಯರು ಒಪ್ಪಿಕೊಂಡು ಆ ಹೊನ್ನಮ್ಮನ ಶೀಲವನ್ನು ಪರೀಕಿಸಬೇಕೆಂದು ಪಿರಿಪಲ್ಲಿಯಕಡೆಗೆ ತಮ್ಮ ಪೂಜಾ ಸಾಮಗ್ರಿಗಳೊಂದಿಗೆ ತೆರಳಿದರು, ಬೂದೀಶ್ವರರು ಸೋಮನಾರ್ಯರನ್ನು ಬೀಳ್ಕೊಂಡು ತಮ್ಮ ಸಂಚಾರವನ್ನು ಮುಂದೆ ಸಾಗಿದರು.

## ಶಿರಿಪಲ್ಲಿ

ಸರ್ವಶೀಲದ ಹೊನ್ನಮ್ಮನು ಅಪ್ರತಿಮ ಶೀಲವಂತನೆನಿಸಿದ್ದ ನನಗಿಂತಲೂ ಹೆಚ್ಚಿನವಳಿರುವಳೇ ? ಆಗಲಿ ನೋಡೋಣ ಎಂದು ಶಿರಿಪಲ್ಲಿಗೆ ಬರಲು ಅಲ್ಲಿ ಎತ್ತ ನೋಡಿದತ್ತ ಕುರುಬರೇ ಕಾಣಿಸಹತ್ತಿದರು. ಊರ ಸುತ್ತಲೂ ತಿಪ್ಪಿಗಳೇ ತುಂಬಿದ್ದವು. ಹಣೆಗೆ ಮೂರು ಬೆರಳು ವಿಭೂತಿ ಹಚ್ಚಿದ ಮುಖಗಳೇ ಅಲ್ಲಿ ಕಾಣಿಸಲಿಲ್ಲ. ಆಗ ಸೋಮನಾರ್ಯರು ತಮ್ಮ ಶೀಲಗಳಿಗೆಲ್ಲಿ ಭಂಗವುಂಟಾಗುವದೋ ಎಂದು ಹೆದರಿದರು. ಅಷ್ಟರಲ್ಲಿ ಒಬ್ಬ ಕುರುಬನು ಬಂದು ದೂರದಿಂದ ಅವರ ಪಾದಕ್ಕೆ ನಮಸ್ಕರಿಸಿ "ಅಪ್ಪಾ, ಬಸವತಂದೆಯು ನಿಮ್ಮನ್ನು ಕುರುಬರಿದ್ದೂರಿಗೆ ಕಳಿಸಿಕೊಟ್ಟನೇ ? ತಾವು ಬಸವಣ್ಣದೇವರ ಗುಡಿಯಲ್ಲಿ ಇಳದುಕೊಳ್ಳಿರಿ, ತಮಗೆ ಬೇಕಾದ ಎಲ್ಲ ವ್ಯವಸ್ಥೆಗಳನ್ನೂ ನಾವು ಮಾಡುವೆವು" ಅಂದನು. ಅದಕ್ಕೆ ಸೋಮನಾರ್ಯರು "ಏನಯ್ಯಾ, ಇಲ್ಲಿ ಲಿಂಗಾಚಾರ ಸಂಪನ್ನರು ಒಬ್ಬರೂ ಇಲ್ಲವೇ ?" ಎಂದು ಕೇಳಲು ಆ ಕುರುಬನು "ಇದ್ದಾರೆ ಬುದ್ಧೀ ತೀರ ಸ್ವಲ್ಪ ಜನರಿದ್ದಾರೆ, ಅವರಲ್ಲಿ ಹೊನ್ನಮ್ಮನೆಂಬಾಕೆ ಆಚಾರವಂತಳು. ಆಕೆಯು ಮನೆಗೆ ಹೋದರೆ ನಿಮ್ಮ ಲಿಂಗಪೂಜೆಯ ವ್ಯವಸ್ಥೆ ಮಾಡುವಳು" ಎಂದನು. ಆಗ ಸೋಮನಾರ್ಯರಿಗೆ ಜೀವ ಬಂದಂತಾಯಿತು. ಅವರಿಗೂ ಅದೇ ಬೇಕಾಗಿದ್ದಿತು.

ಅಷ್ಟರಲ್ಲಿ ಒಬ್ಬ ಮುದುಕಮ್ಮನು ಕೊರಳಲ್ಲಿ ಲಿಂಗ ಧರಿಸಿ ತ್ರಿಪುಂಡ್ರಧಾರಿಯಾಗಿ ಒಂದು ನೀರಿನ ಕೊಡ ಹೊತ್ತು ಸೋಮನಾರ್ಯರ ಇದುರಿಗೆ ಬರುತ್ತಿದ್ದಳು. ಪೂಜ್ಯರನ್ನು ಕಂಡಾಕ್ಷಣವೇ ಆಕೆಯು ತಿಪ್ಪೆಯಲ್ಲಿ ಕೊಡವನ್ನಿಳುಹಿ ಅವರ ಪಾದಕ್ಕೆ ಶಿರಸಾಷ್ಟಾಂಗ ಹಾಕಿದಳು. ಅದಕ್ಕೆ ಸೋಮನಾರ್ಯರು "ಅರರೆ ಇವಳೆಂಥ ಮರುಳೆಯೋ ! ತಿಪ್ಪೆಯಲ್ಲಿ ಕೊಡವನ್ನಿಳುಹಿ, ಈ ಹೊಲಸು ಜಾಗೆಯಲ್ಲಿ ಸಾಷ್ಟಾಂಗ ಹಾಕಬಹುದೇ ? ಮುದುಕಿಯಾಗಿ ಲಿಂಗಧರಿಸಿ, ಲಿಂಗಾಚಾರಶೀಲವನ್ನು ಅರಿಯದಾದಳೇ ? ಎಂದು ಮನದಲ್ಲಿ ಯೋಚಿಸಿ, ಸಿಟ್ಟಿನಿಂದ "ಏನಮ್ಮಾ, ಮುದುಕಮ್ಮಾ ನೀನೆಂಥ ಮಂದಮತಿಯು ಆಚಾರಭ್ರಷ್ಟಳು. ಲಿಂಗವಂತಳಿದ್ದು ತಿಪ್ಪೆಯಲ್ಲಿ ಕೊಡವನ್ನಿಳುಹಿ ಹೊಲಸು ತಾಣದಲ್ಲಿ ಸಾಷ್ಟಾಂಗ ಹಾಕಬೇಕೇ ? ನಿನ್ನದೆಂಥ ಆಚಾರವಮ್ಮಾ ? ನನಗೆ ಇದೆಷ್ಟು ಮಾತ್ರವೂ ಸೊಗಸದು" ಎಂದು ನುಡಿದರು.



ಎರಡನೆಯ ಪಟ್ಟಾಧಿಕಾರಿಗಳಾದ

ಶ್ರೀ ಮ. ನಿ. ಪ್ರ. ಬಸವಲಿಂಗಸ್ವಾಮಿಗಳ ಗದ್ದುಗೆ

ಅವಕ್ಕೆ ಆ ಮುದುಕಿಯು ಕೈಜೋಡಿಸಿ "ಸ್ವಾಮಿಗಳೇ, ತಾವು ಪಾದವಿಟ್ಟ ಸ್ಥಳವು ಪುಣ್ಯಕ್ಷೇತ್ರವೆಂದು ತಿಳಿದು ನಾನು ಕೊಡವನ್ನಿಳುಹಿ ನಮಸ್ಕರಿಸಿದೆನು. ಇದು ತಿಪ್ಪೆ, ಇದು ಹೊಲಸಾಗಿದೆಯೆಂಬ ಭಾವ ನನಗಿರಲಿಲ್ಲ. ಚರರು ಅಡಿ-ಯಿಟ್ಟ ತಾಣವು ಪರಿಶುದ್ಧವಲ್ಲವೇ ? ಅರಿದವರಾದ ತಾವು ಹೀಗೆ ನುಡಿಯು ಬೇಕೇ ? ಶರಣರಡಿಯಿಟ್ಟ ನೆಲವೇ ಪುಣ್ಯಕ್ಷೇತ್ರವೆಂದು ಮಹಾ ಶರಣ ಬಸವೇಶ್ವರನು ಹೇಳಿದುದನ್ನು ಅರಿಯಿರಾ ? ನನಗೇಕೆ ಮೂದಮತಿಯೆಂದು ಕರೆದಿರಿ? ಚರವರ್ಯರಾದ ತಾವು ಶಾಸ್ತ್ರಾಗಮಗಳನ್ನೆಲ್ಲ ಬಲ್ಲವರು, ಹರನು ಬೇರೆ, ತಾವು ಬೇರೆಯೇ ? ಹರನಿದ್ದ ಸ್ಥಳದಲ್ಲಿ ಕೊಡವಿಟ್ಟು ನಮಿಸಿದರೆ ಯಾವ ಕುಂದು ಬಂತು ? ಆ ಸ್ಥಲವು ಶುಚಿಯಾಗಲಿಲ್ಲವೇ ? ಒಳಗೆ ಭಾವ ಶುದ್ಧವಿಲ್ಲದೆ ಹೊರಗೆ ತನುಶುದ್ಧಿಯ ಕ್ರಿಯೆಗಳನ್ನಾಚರಿಸಿದರೆ ಅವಕ್ಕೆ ಬೆಲೆಯೇನಿದೆ ? ತಂದೆಯೇ ಬರೆ ಮೈತೊಳೆಯುವ ಕ್ರಿಯೆಯೇ ಹೆಚ್ಚೆಂಬ ಭ್ರಾಮಕರ ಶೀಲವು ನನಗೆ ಸೊಗಸದು; ತಾವು ಶಾಂತಚಿತ್ತರು. ತಮಗೆ ಸಿಟ್ಟೇಕೆ ಬಂದಿತು ?" ಎಂದು ಮೂದಲಿಸಿದಳು.

ಈ ಮಾತುಗಳನ್ನು ಕೇಳಿ ಸೋಮನಾರ್ಯರ ಎದೆಯು ಡವಡವ ಹಾರ ಹತ್ತಿತು. ತಮಗೆ ಏನೋ ಪರೀಕ್ಷಾಕಾಲವು ಬಂದೊದಗಿತ್ತೆಂದು ತಿಳಿದು ಆ ಮುದುಕಿಗೆ "ಮುದುಕಮ್ಮಾ, ನೀನು ಜಾಣಳಿರುವೆ ನಿಜ. ಜಾಣರು ಅದ್ವೈತವನ್ನು ಹೊರಗೆ ಆಚರಿಸುವರೇ ? ನಿನ್ನ ಪಾಲಿಗೆ ತಿಪ್ಪೆ ಮನೆಗಳೆರಡೂ ಒಂದೇ ಆದವಲ್ಲ? ನಿನ್ನ ಮನವೂ ಭಾವವೂ ಶುದ್ಧವಾಗಿದ್ದರೆ ನೀನು ನನಗೆ ಮನಸ್ಸಿನಲ್ಲಿಯೇ ವಂದಿಸಬಹುದಿತ್ತು. ಹೊಲಸು ತಿಪ್ಪೆಯೊಳೇಕೆ ಉರುಳಾಡಿದೆ ? ತನುವಿಗೆ ಅಪವಿತ್ರತೆ ತಟ್ಟಲಿಲ್ಲವೇ ? ಮನಸ್ಸಿಗೆ ಹೇಸಿಗೆಯಾಗಲಿಲ್ಲವೇ ? ಮೊದಲು ತನುಶುದ್ಧ ನಂತರ ಮನ ಭಾವಗಳು ಶುದ್ಧವಾಗಿರಬೇಕೆನ್ನುವರು ಲಿಂಗಾಂಗಿಗಳು. ತನುಶುದ್ಧವಾದರೆ ಮನಭಾವಗಳು ತಾವೇ ಶುದ್ಧವಾಗುವವು. ತಿಪ್ಪೆಯಲ್ಲಿ ಕೊಡವನ್ನಿಳುಹಿ ಉರುಳಾಡುವದೆಂಥ ಆಚರಣೆಯಮ್ಮಾ ? ಲಿಂಗವಂತರು ಇದನ್ನು ಮನ್ನಿಸುವರೇ? ಜನರು ಕೇಳಿದರೇನೆಂದಾರು ? ಶರಣರು ತನುವು ಅಶುದ್ಧವಾಗಿರಬೇಕೆನ್ನುವರೇ ? ನಿನ್ನೊಡನೆ ವಾದಿಸುವದೇ ಮೂರ್ಖತನ. ಆಚಾರಬಾಹ್ಯರ ಹಾದಿಯೇ ನನಗೆ ಬೇಡ. ಅದರಿಂದ ನನಗೆ ಭವಿತನ ಮಟಿಕೊಂಡೀತು." ಎಂದು ಹೇಳಿ ಕಂಟಲಿಯನ್ನು ಹೊತ್ತುಕೊಂಡು ಮುಂದೆ ಸಾಗಿದರು. ಹೊನ್ನಮ್ಮನು ಕೊಡವನ್ನು ಹೊತ್ತುಕೊಂಡುಬಂದು ಹಾಗೆಯೇ ಮನೆಯಲ್ಲಿ ಅಡಿಗೆ ಮಾಡಿದಳು.

ಅಷ್ಟರಲ್ಲಿ ಶ್ರೀ ಸೋಮನಾರ್ಯರು ಆ ಮನೆಯ ಹೊರ ಅಂಗಳದಲ್ಲಿ ನಿಂತು "ಸರ್ವಶೀಲದ ಹೊನ್ನಮ್ಮನ ಮನೆಯು ಇದೇ ಏನಮ್ಮಾ ?" ಎಂಬ ಧ್ವನಿಯು ಕೇಳಿದಕೂಡಲೆ ಆ ಸಾಧ್ವಿಯು ಅವಸರದಿಂದ ಬಂದು ಸ್ವಾಮಿಯ ಪಾದಕ್ಕೆ ನಮಸ್ಕರಿಸಿ, "ಪೂಜ್ಯರೇ, ನನ್ನ ಮನೆಗೆ ತಾವು ಪಾದ ಹಾಕಿದ್ದರಿಂದ ನಾನು ಕೃತಾರ್ಥಳಾದೆನು. ಲಿಂಗಾರ್ಚನೆಯನ್ನು ಮಾಡಿಕೊಳ್ಳಬೇಕೆ"ಂದು ಬಿನ್ನವಿಸಿಕೊಂಡಳು. ಆಗ ಅವರಿಗೆ ಹಾದಿಯಲ್ಲಿ ನಮಸ್ಕರಿಸಿದ ಮುದುಕಿಯೆ ಅವಳಾಗಿದ್ದಳು. ಆಗ ಅವರು "ಅಯ್ಯೋ, ಸರ್ವಶೀಲದ ಹೊನ್ನಮ್ಮನೆಂದರೆ ನೀನೇ ಏನು ? ದಾರಿಯಲ್ಲಿ ನನ್ನೊಡನೆ ವಾದಿಸಿದವಳು ನೀನೇ ಅಲ್ಲವೇ ?" ಎಂದು ಪ್ರಶ್ನಿಸಲು ಅವಳು "ಅಹುದು ಗುರುವೇ, ಅವಳೇ ನಾನು. ನನ್ನ ತಪ್ಪನ್ನು ಕ್ಷಮಿಸಿ ಲಿಂಗಾರ್ಚನೆ ಮಾಡಿಕೊಳ್ಳಿರಿ. ಪೂಜೆಗೆ ಎಲ್ಲ ಸಾಹಿತ್ಯಗಳನ್ನೂ ಸಜ್ಜು ಮಾಡಿಡುವೆನು." ಎಂದು ನುಡಿದಳು.

ಸೋಮನಾರ್ಯರಿಗೆ ಪೂಜೆ ಮಾಡಬೇಕೋ ಬಿಡಬೇಕೋ ಎಂಬ ಬಗ್ಗೆ ದಿಗಿಲು ಬಿತ್ತು. ಬೂದೀಯೋಗಿಯು ಹೇಳಿದ ಮಾತುಗಳು ನೆನಪಿಗೆ ಬಂದವು. ಊರಲ್ಲಿ ನೋಡಿದರೆ ಎಲ್ಲರೂ ಕುರುಬರೇ. ಲಿಂಗಪೂಜೆಯನ್ನು ಬಿಡುವಂತಿಲ್ಲ ಬೇರೆಕಡೆಗೆ ಹೋಗುವಂತಿಲ್ಲ. ಅವರ ಮೇಲೆ ಮುಗಿಲೇ ಹರಿದು ಬಿದ್ದಂತಾಯಿತು. ಹೊನ್ನಮ್ಮನು ಅವರ ಮನದಳಲನ್ನು ಭಾವಿಸಿ "ಪೂಜ್ಯರೇ, ಚಿಂತಿಸಬೇಡಿರಿ. ದಯವಿಟ್ಟು ಒಳಗೆ ನಡೆಯಿರಿ" ಎಂದು ಒಳಗೆ ಕರೆದೊಯ್ದಳು. ಸೋಮನಾರ್ಯರು ಮನೆಯೊಳಗಿನ ಸ್ವಚ್ಛತೆ ಅಚ್ಚುಕಟ್ಟುತನಗಳನ್ನು ಕಂಡು ಬೆರಗಾದರು. ಮನೆಗೆ ಸಾರಣೆ, ಕಾರಣೆ ಮಾಡಲಾಗಿದ್ದಿತು. ಪತ್ರ-ಪುಷ್ಪಗಳು ತಬಕದಲ್ಲಿ ತುಂಬಿದ್ದವು. ಧೂಪ-ದಶಾಂಗ ಮೊದಲಾದ ಸುವಾಸಿಕ ದ್ರವ್ಯಗಳ ಗಮಗಮ ವಾಸನೆ ಬರುತ್ತಿದ್ದಿತು. ಮನೆಯ ಸಂಸ್ಕೃತಿಯನ್ನು ಕಂಡರೆ ಎಂಥವರಿಗಾದರೂ ಅಲ್ಲಿ ಶಿವಪೂಜೆ ಮಾಡೇತೀರಬೇಕೆಂದೆನಿಸದಿರಲಾರದು. ಆದರೆ ಸೋಮನಾರ್ಯರಿಗೆ ತಿಪ್ಪೆಯಲ್ಲಿ ಕೊಡವಿಳುಹಿ ನಮಸ್ಕರಿಸಿ ಬಂದು ಹಾಗೆಯೇ ಅಡಿಗೆ ಮಾಡಿದುದನ್ನು ತಿಳಿದು ಮೊಸಲನ್ನವನ್ನು ನಾಯಿ ಮುಟ್ಟಿದಂತಾಗಿ ಮನಸ್ಸು ಹುದುಗಿನಿಂದ ಕಸಿವಿಸಿಗೊಳ್ಳಹತ್ತಿತು.

ಆದರೂ ಅನಿವಾರ್ಯವಾಗಿ ಸ್ನಾನ ತೀರಿಸಿ, ಲಿಂಗಪೂಜೆಯನ್ನು ಮುಗಿಸಿ ಪಾಯಸಮಾಡಿದೆಡೆಯನ್ನುನೋಡಿ ಹಲ್ಲುಗುಟಗರಿಸಿ ಲಿಂಗಕ್ಕೆ ನೈವೇದ್ಯವಮಾಡಿ ಉಣ್ಣಬೇಕೆನ್ನುವಷ್ಟರಲ್ಲಿ ಒಬ್ಬ ಕುರುಬನು ಒಂದು ಮಗಿ ಹಾಲನ್ನು ಕಾಸಿ

ನೆಂದು ಹೊನ್ನಮ್ಮನ ಕೈಯಲ್ಲಿ ಕೊಟ್ಟನು. ಅವಳು ಬಂದವಳೇ ಆ ಮಗಿಯ ಹಾಲನ್ನು ಸೋಮನಾರ್ಯರ ಪಾಯಸದಲ್ಲಿ ಭಕ್ತಿಯಿಂದ ಸುರುವಿದಳು. ಆಗ ಮುಗಿಲೇ ತಮ್ಮ ಮೇಲೆ ಹರಕೊಂಡು ಬಿದ್ದಂತಾಗಿ ಸ್ವಾಮಿಗಳು ಕರಕರನೆ ಹಲ್ಲು ಕಡಿಯುತ್ತ ದುರುದುರನೆ ಹೊನ್ನಮ್ಮನ ಮುಖ ನೋಡುತ್ತ "ಇದೇನು ಅನರ್ಥವ ಮಾಡಿದೆಯಮ್ಮಾ ? ಕುರುಬನು ಮಗಿಯಲ್ಲಿ ತಂದು ಕೈಮುಟ್ಟಿ ಕೊಟ್ಟ ಕುರಿಯ ಹಾಲನ್ನು ನನಗೆ ಎಡೆ ಮಾಡುವರೇ ? ಅದು ಲಿಂಗಕ್ಕೆ ನೈವೇದ್ಯವಾಗಬಲ್ಲುದೇ ? ನನ್ನ ಮಾನ ಕಳೆದು ಆಚಾರಭ್ರಷ್ಟನನ್ನು ಮಾಡ-ಬೇಕೆಂದು ಹೀಗೆ ಮಾಡಿದೆಯಾ ? ರೋಗಿಗೆ ಔಷಧ ಕೊಡುವ ಬದಲು ವಿಷ ಕೊಟ್ಟಂತಾಯಿತಲ್ಲ!" ಎಂದು ನುಡಿದರು.

ಅವರ ಮನಸ್ಸು ಹೀಗೆ ಕಲುಷಿತವಾಗಿರಲು ಎಡೆಮಾಡಿದ ಪಾಯಸದಲ್ಲಿ ಬಾಲಹುಳುಗಳು ಗುಬುಗುಬು ಜಿನುಗಹತ್ತಿದವು. ಆಗ ಹೊನ್ನಮ್ಮನು ಸ್ವಾಮಿಗಳಿಗೆ "ಬುದ್ಧೀ, ಭಕ್ತಿಯಿಂದ ಕುರಿಗಾರನು ತಂದ ಹಾಲನ್ನು ಬಿಡಿಸುವರೇ ? ಭಕ್ತಿಯಿಂದ ನಾನು ನೀಡಿದ್ದು ಪ್ರಸಾದವಾಗಲಿಲ್ಲವೇ ? ಕೊಡಿ ಮನಸ್ಸಿಗೆ ಅದು ಹೇಯವೆನಿಸಿದ್ದರಿಂದ ಬಾಲಹುಳುಗಳ ರೂಪದಿಂದ ಮಾಯೆ ನಿಮಗೆ ಕಾಡಹತ್ತಿದೆ, ನಿಮ್ಮ ಎದೆಯಲ್ಲಿ ಹುದುಗು ಹುಟ್ಟಿದ್ದರಿಂದ ನೀವು ಗಡಗಡ ನಡುಗುತ್ತಿರುವಿರಿ. ಚರವರೇಣ್ಯರು ತಾವು ನಿಜವಾಗಿದ್ದರೆ ತಮ್ಮ ಹಸ್ತ ಮುಟ್ಟಲು ಆ ಹಾಲು ಅಮೃತವಾಗಲಾರದೆ ? ಅಮೃತಕ್ಕೆ ನೀವು ವಿಷವೆಂದಂತಾಯಿತಲ್ಲ ! ತಾವು ಒಳಗೂ ಹೊರಗೂ ಶುದ್ಧವಾಗಿದ್ದರೆ ಬಾಲ ಹುಳುಗಳು ಏಕಾಗುತ್ತಿದ್ದವು ?" ಎಂದು ಮೂದಲಿಸಿ ನುಡಿದಳು. ಆಕೆಯ ಮಾತಿಗೆ ಸೋಮನಾರ್ಯರು "ಮೂಢೆ, ಭವಿಯು ತಂದ ಕುರಿಯ ಹಾಲನ್ನು ಮಗಿಯಲ್ಲಿ ತಂದು ನೀನು ನೀಡಿದ್ದರಿಂದ ಬಾಲಹುಳಗಳಾಗಿವೆ. ಅದು ನಿನ್ನ ಕೀಳುಗೈಯ ಫಲ. ನೀನು ಶರಣೆಯೆಂಬ ಜಂಭ ಕೊಚ್ಚಿಕೊಳ್ಳುವೆಯಲ್ಲ ! ನೀನು ಎಡೆಯನ್ನು ಮುಟ್ಟಿ ಬಾಲಹುಳಗಳು ಇಲ್ಲದಂತೆ ಮಾಡುವೆಯಾ ?" ಎನ್ನಲು ಆಕೆಯು ತಕ್ಷಣವೇ ಪಾಯಸವನ್ನು ಮುಟ್ಟಲು ಅದು ಸುವರ್ಣದಂತೆ ಹೊಳೆಯಹತ್ತಿತು. ಹಾಲು ಅಮೃತವಾಯಿತು. ಸೋಮನಾರ್ಯರಿಗೆ ನಾಚಿಕೆಯಾಗಿ ಅವಳ ಘನತೆಗೆ ತಲೆದೂಗಿ ಅವಳ ಪಾದಕ್ಕೆ ಅಭಿವಂದಿಸಿದರು.

ಅಷ್ಟರಲ್ಲಿ ಬೂದೀಯೋಗಿಗಳು ಇದೆಲ್ಲವನ್ನು ಯೋಗ ಬಲದಿಂದ ಅರಿತು ಅಲ್ಲಿಗೆ ಬಂದರು. ಸೋಮನಾರ್ಯರೂ ಸಹ ತಮ್ಮ ಪ್ರಸಾದ ತೀರಿಸಿ ಹೊರಬಂದು ಬೂದೀಶನನ್ನು ಕಂಡು ನಮಸ್ಕರಿಸಿದರು. ಹೊನ್ನಮ್ಮನೂ

ಬಂದು ಬೂದೀಶ್ವರನ ಪಾದಕ್ಕೆ ಪೊಡಮಟ್ಟಳು. ಬೂದೀಶ್ವರರು ಸೋಮ ನಾರ್ಯರನ್ನು ತಬ್ಬುತ್ತ "ಪೂಜ್ಯರೇ, ನೀವು ನಿತ್ಯಾಚಾರ ಶೀಲ ತತ್ತ್ವ ಗಳನ್ನು ಪರೀಕ್ಷಿಸಬೇಕೆಂದು ಸರ್ವಶೀಲದ ಹೊನ್ನಮ್ಮನ ಬಳಿಗೆ ಬಂದಿರಲ್ಲವೇ! ಆ ಹೆಣ್ಮಗಳಲ್ಲಿ ಏನಾದರೂ ಕಸರುಂಟೇ? ಹೇಳಿರಯ್ಯಾ" ಎನ್ನಲು ಸೋಮನಾರ್ಯರು ಬೂದೀಶ್ವರರಿಗೆ ಚರವರರೇ, ನನ್ನಂತರಂಗದ ಮಡಿಯನ್ನು ತಿದ್ದಲಿಕ್ಕೆ ನೀವು ಒಳ್ಳೆಯ ನಾಟಕವನ್ನು ಹೂಡಿದಿರಿ. ಅದನ್ನು ನಾನು ತಿಳಿಯ ಲಾರೆನೇ? ಆಕೆಯ ಶೀಲದ ಮುಂದೆ ನನ್ನ ಶೀಲವೇನು ಮಹಾ? ಆ ಶಿವ ಶರಣೆಯು ನನಗಿಂತ ಬಹಳೇ ಹೆಚ್ಚಿನವಳೆಂದು ಪ್ರಾಂಜಲ ಮನಸ್ಸಿನಿಂದ ಒಪ್ಪಿ ಕೊಳ್ಳುತ್ತೇನೆ. ಅವಳಿಂದ ನಾನು ಕೃತಕೃತ್ಯನಾದೆನು" ಎಂದರು. ಬೂದೀ ಯೋಗಿಗಳು ಕೆಲಹೊತ್ತು ಅಲ್ಲಿ ನಿಂತು ಅವರ ಯೋಗಕ್ಷೇಮವನ್ನು ವಿಚಾರಿಸಿ ಶರಣೆಗೆ ಆಶೀರ್ವದಿಸಿ ಸಂಚಾರವನ್ನು ಬೆಳೆಸಿದರು.

ಆಗ ಹೊನ್ನಮ್ಮ ಶರಣೆಯು ಸೋಮನಾರ್ಯರಿಗೆ ಕೈಮುಗಿದು ಹೀಗೆ ಬಿನ್ನವಿಸಿದಳು. "ಬುದ್ಧೀ, ಮುಗ್ಧಭಾವದ ಭಕ್ತರನ್ನುದ್ಧರಿಸುವ ಹೊಣೆ ಗುರು ಗಳಾದ ತಮ್ಮ ಮೇಲಿದೆ. ನಮ್ಮ ನಾಡಿನಲ್ಲಿ ಜಾತಿಭೂತದ ಹೊಲಸು ತುಂಬಿರುವುದರಿಂದ ಹೊಲೆ ಮೊದಲಾದ ಹದಿನೆಂಟು ಜಾತಿಯ ಕೀಳು ಕುಲ ದವರನ್ನು ಕುಲವಂತರೆನಿಸಿಕೊಳ್ಳುವವರು ದೂರವಿರಿಸಿದ್ದಾರೆ. ಆ ಕೀಳು ಕುಲ ದವರೆಲ್ಲ ಶಿವನ ಮಕ್ಕಳಲ್ಲವೇ? ಅವರಿಗೆ ಭವಿಗಳೆನಬಹುದೇ? ಅವರಿಗೆ ಲಿಂಗಧರಿಸಿ ಭಸ್ಮ ರುದ್ರಾಕ್ಷಿಗಳನ್ನಿತ್ತು ಪಾವನಗೊಳಿಸಿರಿ. ಹೊಲಸು ಕಂಡರೆ ದೂರ ಜಿಗಿಯುವಿರಿ. ಆದರೆ ಹೊಲಸನ್ನು ಶುದ್ಧ ಮಾಡಲರಿಯಿರಿ. ಹೊಲ ಸಿನಿಂದೇ ದೇಹ ತುಂಬಿ ಕೊಂಡಿದೆಯೆಂಬುದನ್ನು ಅರಿಯಲಾರಿರಾ? ದೇಹದ ಒಳಗೂ ಹೊರಗೂ ಹೊಲಸು ತುಂಬಿದೆ. ಒಳಗೆ ಕಾಮ ಕ್ರೋಧಾದಿಗಳ ಹೊಲಸನ್ನು ತುಂಬಿಕೊಂಡು ಹೊರಗೆ ಚರ್ಮವನ್ನು ತೊಳೆದರೆ ಅದಕ್ಕೆ ಯಾವ ಬೆಲೆಯುಂಟು? ಈ ಊರ ಕುರುಬರೆಲ್ಲರೂ ಶರಣ ಬಸವನ ಭಕ್ತರಿರುವರು. ಒಳ್ಳೆ ಭಾವಿಕರು. ಮಡಿ ಹುಡಿ, ಮುಟ್ಟೀ ತಟ್ಟೀ ಎಂಬ ಭ್ರಾಮಕ ಕಲ್ಪನೆಯು ಅವರಿಗಿಲ್ಲ. ಅವರಿಗೆ ಲಿಂಗಧರಿಸಿ ಧರ್ಮಾಚಾರವನ್ನೂ, ನೈತಿಕ ತತ್ತ್ವಗಳನ್ನೂ ತಿಳಿಸಿ ಅವರ ಮಟ್ಟವನ್ನು ತಾವು ಏಕೆ ಏರಿಸಬಾರದು?" ಹೀಗೆಂದು ನುಡಿ- ಯಲು ಸೋಮನಾರ್ಯರಿಗೆ ಎಚ್ಚರ ಹುಟ್ಟಿ ಆ ಕುರುಬರನ್ನೆಲ್ಲ ಲಿಂಗಧಾರ ದಿಂದ ಮುಂದ್ಧಗೊಳಿಸಿ ಸ್ವರ್ಗಕ್ಕೆ ಹಚ್ಚಿ ಹೊನ್ನಮ್ಮನ ಅಪ್ಪಣೆ ಪಡೆದು ತುರಿವೆ? ತೆರಳಿದರು.

# ೭ನೆಯ ಸಂಧಿ

## ಸಿಂಗರಪಲ್ಲಿ

ಮುಂದೆ ಬೂದೀಯೋಗಿಗಳು ಪಿರಿಪಲ್ಲಿಯಿಂದ ಹೊರಟು ಸಿಂಗರಪಲ್ಲಿ ಯೆಂಬ ಗ್ರಾಮಕ್ಕೆ ದಯಮಾಡಿಸಿದರು. ಆ ಊರಲ್ಲಿ ಶಿವ-ಪಾರ್ವತಿಯೆಂಬ ಶುದ್ಧ ಚಾರಿತ್ರರಾದ ದಂಪತಿಗಳಿದ್ದರು. ಅವರು ಬಸವೇಶನು ಹೇಳಿದಂತೆ ಸತ್ಯ ಶುದ್ಧ ಕಾಯಕದಿಂದ ಜೀವಿಸುತ್ತಿದ್ದರು ಆ ದಂಪತಿಗಳು. ಬೂದೀಶ್ವರರು ಆ ಊರಿಗೆ ಬಂದ ಸುದ್ದಿ ಕೇಳಿ ಅವರ ದರ್ಶನಕ್ಕಾಗಿ ಬಂದು, "ಬುದ್ಧೀ ನಮ್ಮೆಲ್ಲರ ಪುಣ್ಯದಿಂದ ತಾವು ಈ ಊರಿಗೆ ಪಾದ ಹಾಕಿದಿರಿ. ಇಂದು ದಯ ವಿಟ್ಟು ತಾವು ನಮ್ಮ ಮನೆಗೆ ಲಿಂಗಾರ್ಚನೆಗೆ ಬರಬೇಕೆಂದು ಭಕ್ತಿಯಿಂದ ಬೇಡಿ ಕೊಂಡರು. ಬೂದೀಶನು ಅವರ ಭಕ್ತಿಗೆ ಮೆಚ್ಚಿ ಅವರ ಮನೆಗೆ ಬಂದನು. ಯೋಗಿಯು ಶಿವಪೂಜೆಗೆ ಕುಳಿತಾಗ ನಂದಾದೀಪ ಹಚ್ಚದೆ ಮರೆತುಬಿಟ್ಟಿದ್ದರು. ಆಗ ಶಿವಯೋಗಿಗಳು "ಶಿವ ಶಿವಾ ! ದೀಪ ಹಚ್ಚುವದನ್ನೇಕೆ ಬಿಟ್ಟರೋ. ಇವರ ದೈವದಲ್ಲಿ ಮನೆಗೆ ದೀಪ ಹಚ್ಚುವ ಮಗನನ್ನು ಶಿವನು ಕೊಟ್ಟಂತೆ ಕಾಣುವದಿಲ್ಲ" ಎಂದು ಭಾವಿಸಿ ಪಾರ್ವತಿಯನ್ನು ಕುರಿತು "ದೀಪ ಹಚ್ಚಲು ಏಕೆ ಮರೆತಿರಮ್ಮಾ ? ಪಣತಿಗೆ ಎಣ್ಣೆ ಹಾಕಮ್ಮಾ" ಎಂದಾಕ್ಷಣವೇ ಆಕೆಯು ಮನೆಯೊಳಗೆ ಹೊಕ್ಕು ನೋಡಲು ಎಣ್ಣೆ ತೀರಿಹೋಗಿತ್ತು. ತಡಮಾಡದೆ ಎಣ್ಣೆ ತರಬೇಕೆಂದು ಗಂಡ ನಿಗೆ ಹೇಳಲು ಆತನು ಲಗುಬಗೆಯಿಂದ ಅಂಗಡಿಗೆ ಹೋಗಿ ಕೇಳಲು "ಎಣ್ಣೆಯು ಮುಗಿದಿದೆ" ಎಂದು ಅಂಗಡಿಕಾರನು ಉತ್ತರಕೊಟ್ಟನು.

ಆಗ ಶಿವಪ್ಪನು ತಲೆ ತಗ್ಗಿಸಿಕೊಂಡು ಬಂದು ಹುಚ್ಚನಂತೆ ತಲೆ ಕೆದರುತ್ತ ಶಿವಯೋಗಿಗಳ ಮುಂದೆ ನಿಂತನು. ಶಿವಯೋಗಿಯು ಇದನ್ನು ತಿಳಿದು ಪಣತಿಗೆ ನೀರು ಹಾಕಿ ದೀಪಹಚ್ಚಿ ಪೂಜೆ ಮಾಡಿ ಪ್ರಸಾದ ಸೇವಿಸಿದರು. ಬಳಿಕ ಅವರು ದಂಪತಿಗಳಿಗೆ "ನೀವು ಗುರುಲಿಂಗ ಜಂಗಮ ಪ್ರಾಣಿಗಳೇನೋ ನಿಜ. ಆದರೆ ನೀವು ಲಿಂಗದೇವನಲ್ಲಿ ಮಕ್ಕಳನ್ನು ಬೇಡಿ ಬಂದಿಲ್ಲ. ಶಿವನ ನಿಯತಿಯನ್ನು ಮೀರಲು ಯಾರು ಸಮರ್ಥರು? ನೀವು ಗಂಡಹೆಂಡಿರು ಪ್ರತಿನಿತ್ಯ ನಿಮ್ಮ ದಾಸೋಹ ಸೇವೆಯನ್ನು ಹಾಗೆಯೇ ಸಾಗಿಸಿರಿ. ನಮಗೆ ಒಬ್ಬನಾದರೂ ಮಗ ನಿಲ್ಲವಲ್ಲ ! ಎಂದು ಚಿಂತಿಸಬೇಡಿರಿ. ಜಗತ್ತಿನಲ್ಲಿ ಅನಾಥ ಬಡಮಕ್ಕಳುಗಳೆಷ್ಟೋ ಇದ್ದಾರೆ ಅವರನ್ನು ಹೊಟ್ಟೆಯ ಮಕ್ಕಳಂತೆ ಕಾಪಾಡಿರಿ, ಶಿವನು ಮೆಚ್ಚುವನು.

ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲವೆಂಬ ಮಾತು ಹುಸಿ. ನೀವು ಬಡಮಕ್ಕಳಿಗೆ ಅನ್ನ, ವಸ್ತ್ರ, ಪಾಟಿ, ಪುಸ್ತಕ, ಔಷಧಗಳನ್ನು ಕೊಟ್ಟು ಸಲಹಿದರೆ ನಿಜವಾಗಿಯೂ ನಿಮಗೆ ಸದ್ಗತಿಯಾಗುವದು. ಮಕ್ಕಳಿಲ್ಲದಿದ್ದರೆ ಲಿಂಗಯ್ಯನು ಮಗನಲ್ಲವೇ ? ಅವನನ್ನು ಪುತ್ರವಾತ್ಸಲ್ಯದಿಂದ ಪೂಜಿಸಿರಿ. ನೀವು ಗಳಿಸಿದ ಹಣವನ್ನು ಪರೋಪಕಾರಕ್ಕಾಗಿ ವೆಚ್ಚ ಮಾಡಿರಿ." ಎಂದು ಬೋಧಿಸಿ ಹೊರಟು ಹೋದರು. ಆ ದಂಪತಿಗಳು ಅದೇ ಪ್ರಕಾರ ನಡೆದು ಸದ್ಗತಿ ಹೊಂದಿದರು.

## ಸಿರಾಳಕೊಪ್ಪ

ಸಿಂಗರಪಲ್ಲಿಯಿಂದ ಮುಂದೆ ಯೋಗಿಗಳು ಸಿರಾಳಕೊಪ್ಪಕ್ಕೆ ಬಂದು ಒಂದು ಮರದ ನೆರಳಿನಲ್ಲಿ ಕುಳಿತುಕೊಂಡರು. ಈ ಸುದ್ದಿಯನ್ನು ಕೇಳಿ ಊರಿನ ಪ್ರಮುಖರೆಲ್ಲರೂ ಬಂದು ಸಾಷ್ಟಾಂಗವೆಸಗಿದರು. ಶ್ರೀಗಳು ಅವರ ಯೋಗ ಕ್ಷೇಮವನ್ನು ವಿಚಾರಿಸಿದರು. "ಗೌಡನು ಬುದ್ಧೀ, ತಮ್ಮ ಪಾದ ಕೃಪೆಯಿಂದ ಎಲ್ಲವೂ ಚೆನ್ನಾಗಿ ನಡೆದಿದೆ. ಊರೊಳಗೆ ಬಂದು ನಮ್ಮೆಲ್ಲರನುದ್ಧರಿಸಬೇಕೆಂದು ಬೇಡಿಕೊಂಡು ಅವರನ್ನು ಮನೆಗೆ ಕರೆದೊಯ್ದು ಗಣಪರ್ವವನ್ನು ಹೂಡಿ ತರ ತರದ ಪಕ್ವಾನ್ನಗಳಿಂದ ಯೋಗಿಯ ಆಜ್ಞೆಯಂತೆ ಸಂತೃಪ್ತಿಪಡಿಸಿದನು. ಶ್ರೀಗಳು ರಾತ್ರಿ ಗೌಡನ ಮನೆಯಲ್ಲಿಯೇ ಪವಡಿಸಿದರು. ರಾತ್ರಿ ಒಮ್ಮಿಂದೊಮ್ಮಲೇ ಎಚ್ಚರವಾಗಿ ಅವರು ಗೌಡನಿಗೆ "ಗೌಡನೇ, ನಿನ್ನ ಹೊಲದಲ್ಲಿ ತುಡುಗರು ಅಂಜನ ದಿಂದ ಶೋಧಿಸಿ ನಿಧಿಯನ್ನು ಹೊರತೆಗೆದಿರುವರು. ನೀನು ತಡಮಾಡದೆ ಆಳುಗಳನ್ನು ಕರೆದುಕೊಂಡು ಹೋಗಿ ಅವರನ್ನೋಡಿಸಿ ನಿಕ್ಷೇಪವನ್ನು ತೆಗೆದು ಕೊಂಡು ಬಾ" ಎಂದು ಆಜ್ಞಾಪಿಸಿದರು.

ಆ ಪ್ರಕಾರ ಗೌಡನು ಆಳುಗಳನ್ನು ಕರೆದುಕೊಂಡು ಕೊಡ್ಲಿ, ಕುಡು ಗೋಲು, ಕೋಲು, ಗುದಿಗೆಗಳನ್ನು ಸಜ್ಜುಮಾಡಿಕೊಂಡು ಹೊಲಕ್ಕೆ ಧಾವಿಸಿ ಬಂದರು. ಅವರ ಹೆಜ್ಜೆಯ ಸಪ್ಪಳವನ್ನೂ ಕೂಗಾಟವನ್ನೂ ಕೇಳಿ ತಮ್ಮನು ಹಿಡಿಯಲಿಕ್ಕೆ ಬಹಳ ಜನರು ಬಂದರೆಂದು ಹೆದರಿ ಆ ನಿಧಿಯನ್ನು ಅಲ್ಲಿಯೇ ಬಿಟ್ಟು ಕಳ್ಳರು ಓಡಿಹೋದರು. ಗೌಡನು ಆಳುಗಳೊಂದಿಗೆ ಅಲ್ಲಿ ಬಂದು ನೋಡಲು ಒಂದು ಬನ್ನಿಮರದ ಕೆಳಗೆ ಒಂದು ಕೊಡವನ್ನಿಟ್ಟಿದ್ದರು. ಅದರಲ್ಲಿ ಚಿನ್ನದ ನಾಣ್ಯಗಳು ತುಂಬಿದ್ದವು. ಆ ಕಳ್ಳರು ಏನೇನೋ ಮಂಡಲ ಬರೆದು ಕುಂಕುಮ, ಬಂಡಾರ, ಕೆಂಪು ಹೂಗಳನ್ನಿರಿಸಿ ಪೂಜೆ ಮಾಡಿದ್ದರು, ಬನ್ನಿಮಹಾ

ಕಾಳಿಗೆ ಒಂದು ಹೋತಿನ ಬಲಿ ಕೊಟ್ಟಿದ್ದರು. ಕವಡಿ ಊದಿನ ನಾತವು ಸುತ್ತ ಲೆಲ್ಲ ಹರಡಿತ್ತು, ಈ ತರದ ಕೃತ್ಯಗಳಿಗೆ ದೇವಿಯು ಒಲೆಯದೆ ಗೌಡರಿಗೆ ಒಲೆ ದದ್ದರಿಂದ ಆ ಸುವರ್ಣ ನಾಣ್ಯದ ಕೊಡವು ಅವರಿಗೆ ಲಭಿಸಿತು.

ಗೌಡರು ಆ ಕೊಡವನ್ನು ತಂದು ಯೋಗಿಯ ಮುಂದಿರಿಸಿ ಭಕ್ತಿಯಿಂದ "ತಂದೆಯೇ, ತಮ್ಮ ಪಾದಮಹಿಮೆಯಿಂದ ಈ ಕೊಡವು ದೊರೆತದ್ದರಿಂದ ಅದು ತಮ್ಮ ಪಾದಕ್ಕೆ ಸಲ್ಲಲಿ" ಎಂದು ಕೈ ಜೋಡಿಸಿ ಬೇಡಿಕೊಂಡನು. ಅದಕ್ಕೆ ಪೂಜ್ಯರು ಗೌಡಾ, ನೀನು ಹುಚ್ಚನು, ವಿರಕ್ತನಾದ ನಾನು ಹೊನ್ನು, ಹೆಣ್ಣು, ಮಣ್ಣುಗಳನ್ನು ಕೈಯಿಂದ ಮುಟ್ಟಲಾರೆನು. ನಿನಗೆ ದೊರೆತ ಹಣದಿಂದ ಗುರುಲಿಂಗಜಂಗಮ ದಾಸೋಹ ಮಾಡು." ಎಂದು ಹೇಳಿ ಹೊರಟರು. ಗೌಡರು ಪೂಜ್ಯರ ಹೇಳಿಕೆಯಂತೆ ನಡೆದುಕೊಂಡನು.

## ಬೆಳವಾಣಿಮುರಡಿ

ಮುಂದೆ ಯೋಗಿಗಳು ಹಿರೇಕೆರೂರ ತಾಲೂಕಿನಲ್ಲಿರುವ ಅನಿಮಿಷಕೊಪ್ಪ, ಕಂಪಲಿ ಮೊದಲಾದ ಗ್ರಾಮಗಳಲ್ಲಿ ಕೆಲ ದಿನ ತಂಗಿ ಲಿಂಗಾನಂದದಲ್ಲಿದ್ದು ಮುಂದೆ ಬೆಳವಾಣಿಮುರಡಿಗೆ ಬಂದು ಅಲ್ಲಿ ಒಂದು ಪತ್ರಪುಷ್ಪ ಸಂಪನ್ನವಾದ ಉಪವನದಲ್ಲಿ ವಾಸಮಾಡಿ ದಿನಾಲು ಅಲ್ಲಿದ್ದ ಬಾವಿಯಲ್ಲಿ ಸ್ನಾನ ಮಾಡಿ ಶಿವ ಪೂಜೆ ತೀರಿಸಿ ಮಜ್ಜನದ ನೀರನ್ನು ಒಂದು ಗಿಡದಡಿಯಲ್ಲಿ ಹಾಕುತ್ತಿದ್ದರು, ಭಕ್ತರು ತಂದುಕೊಟ್ಟ ಹಣ್ಣು ಕಾಯಿಗಳಲ್ಲಿ ಕೆಲವನ್ನು ಅಲ್ಲಿರಿಸುತ್ತಿದ್ದರು. ಅವರು ಕುಳಿತುಕೊಳ್ಳುವ ಗಿಡದ ಮೇಲೆ ಎರಡು ಮಂಗಗಳು ವಾಸವಾಗಿದ್ದವು. ಅವು ಗಿಡದಿಂದಿಳಿದು ಶಿವಯೋಗಿಗಳಿಟ್ಟ ಹಣ್ಣು ಹಂಪಲಗಳನ್ನು ತಿಂದು ಮಜ್ಜನದ ನೀರನ್ನು ಕುಡಿಯುತ್ತಿದ್ದವು.

ಹೀಗಿರಲು ಒಂದು ದಿನ ಭಕ್ತರು ಬಂದು ಶಿವಯೋಗಿಗಳನ್ನು ಕೇಳಿ ಕೊಂಡು ಒಂದು ಗಣಪರ್ವವನ್ನೇರ್ಪಡಿಸಿದರು. ಆಗ ಯೋಗಿಗಳು ಮರದ ಮೇಲಿನ ಎರಡು ಮಂಗಗಳಿಗೆ ಎರಡು ಎಡೆಗಳನ್ನು ಮಾಡಿಡಬೇಕೆಂದು ಆಜ್ಞಾ ಪಿಸಿದರು. ಆ ಪ್ರಕಾರ ಭಕ್ತರು ಎಡೆಗಳನ್ನು ಮಾಡಿ ಗಿಡದ ಕೆಳಗಿಟ್ಟರು. ಆ ಕಪಿಗಳು ಬಂದು ಎಡೆಯನ್ನುಂಡು ಮಜ್ಜನದ ನೀರನ್ನು ಕುಡಿದವು. ಗಣಪರ್ವ ಮುಗಿದಬಳಿಕ ಶಿವಯೋಗಿಗಳು ಹೊರಡಲಿಕ್ಕೆ ಸಿದ್ಧರಾದರು. ಅಷ್ಟರಲ್ಲಿ ಆ

ಕಪಿಗಳು ಕೆಳಗೆ ಬಂದು ಯೋಗಿಯ ಸುತ್ತಲೂ ಚೀತ್ಕಾರ ಮಾಡುತ್ತ ಸುಳಿದಾಡ ಹತ್ತಿದವು. ಯೋಗಿಗಳು ಅವುಗಳ ಮಸ್ತಕದ ಮೇಲೆ ತಮ್ಮ ಹಸ್ತವನ್ನಿರಿಸಲು ಅವು ತಕ್ಷಣವೇ ಪ್ರಾಣ ಬಿಟ್ಟವು. ಅವಕ್ಕೆ ಏನೋ ಪೂರ್ವಜನ್ಮ ಕರ್ಮದಿಂದ ಕಪಿಜನ್ಮ ಬಂದಿತ್ತು. ಶಿವಯೋಗಿಗಳ ಕೃಪೆಯಿಂದ ಆ ಜನ್ಮವನ್ನು ನೀಗಿ ಉತ್ತಮವಾದ ನರಜನ್ಮ ತಾಳಿ ಬಹುದಿನ ಬಾಳಿದವು. ಈ ರಹಸ್ಯವನ್ನು ಭಕ್ತರು ಯೋಗಿಯ ಬಾಯಿಯಿಂದ ತಿಳಿದು ಅವರ ಲೀಲೆಯನ್ನು ಕೊಂಡಾಡಿದರು.

## ಸಾಗರದಡವಿ

ಬೆಳವಾಣಿಮರಡಿಯಿಂದ ಶ್ರೀಗಳು ಸಾಗರದಡವಿಯ ಮಾರ್ಗ ಹಿಡಿದು ಹೋಗುತ್ತಿರುವಾಗ ಅವರ ವಿಚಿತ್ರ ವೇಷವನ್ನು ನೋಡಿ ಅಲ್ಲಿದ್ದ ಚಿಕ್ಕ ಕಿರಾತ ಬಾಲಕರು ಹೆದರಿ ಓಡಿಹೋದರು. ಬಳಿಕ ಶ್ರೀಗಳು ಕಪ್ಪು ಮೈಬಣ್ಣದ, ಕೆಂಗಣ್ಣಿನ, ಕೋರೆ ಮೀಸೆಯ ಕಬ್ಬಿಣದಂಥ ದೇಹದ ಕಿರಾತರನ್ನು ಕಂಡರು. ಆ ಕಿರಾತರು ಯೋಗಿಗಳನ್ನು ಕುರಿತು "ನೀವಾರೆಂಬುವದನ್ನು ನಾವು ಅರಿಯೆವು ನೀವು ಏನೇನೋ ಧರಿಸಿರುವಿರಲ್ಲ? ಯಾಕೆ ಧರಿಸಿರುವಿರಿ ? ಹೇಳಬಲ್ಲಿರಾ ? ಎಂದು ಕೇಳಿದರು. ಆಗ ಅವರು ತಾವು ಧರಿಸಿದ್ದ ವಿಭೂತಿ, ರುದ್ರಾಕ್ಷಿ, ಲಿಂಗ, ಯೋಗದಂಡ, ಕಮಂಡಲಗಳನ್ನು ಒಂದೊಂದಾಗಿ ಅವರಿಗೆ ವಿವರಿಸಿದರು. ಇವುಗಳನ್ನು ಯಾತಕ್ಕೆ ಧರಿಸುವಿರಿ? ಎಂದು ಕಿರಾತರು ಕೇಳಲು ಅವರು "ಇವುಗಳನ್ನು ಯಾರು ಗುರುವಿನಿಂದ ಪಡೆಯುವರೋ ಅವರು ನರಕದಿಂದ ಮುಕ್ತರಾಗುವರು" ಎಂದು ಹೇಳಿದರು. ಆಗ ಕಿರಾತರು ನರಕವೇನೆಂದು ಕೇಳಿದರು. ಅದಕ್ಕೆ ಯೋಗಿಗಳು "ನರಕವೆಂಬುದು ಮಲದ ತಾಣವು, ಅಗ್ನಿಯ ಕುಂಡವು, ಹಾವು ಚೇಳು ಕ್ರಿಮಿಗಳ ಬೀಡು. ಯಾರು ತಮ್ಮ ಜನ್ಮದಲ್ಲಿ ಹಿಂಸಾಚಾರಾದಿ ಪಾಪ ಕೃತ್ಯಾದಿಗಳನ್ನು ಮಾಡುವರೋ ಮದ್ಯ ಮಾಂಸ ಸೇವಿಸುವರೋ ಅವರು ಸತ್ತಮೇಲೆ ನರಕದಲ್ಲಿ ದುಃಖವನ್ನು ಅನುಭವಿಸುವರು.

ಇದನ್ನು ಕೇಳಿದ ಬಳಿಕ ಯೋಗಿಗಳ ಪರುಷದೃಷ್ಟಿಯಿಂದ ಆ ಬೇಡರಿಗೆ ಜ್ಞಾನೋದಯವಾಗಿ ಅವರು "ಸ್ವಾಮಿಗಳೇ, ನಾವು ಅಂಥ ನರಕ ಕುಂಡದಲ್ಲಿ ಬಿದ್ದು ಹೊರಳಾಡಲಾರೆವು, ನಮಗೆ ಲಿಂಗ, ವಿಭೂತಿ, ರುದ್ರಾಕ್ಷಿಗಳನ್ನು ಕೊಟ್ಟು ರಕ್ಷಿಸಬೇಕೆಂದು" ಬೇಡಿಕೊಂಡರು. ಆಗ ಸ್ವಾಮಿಗಳು ಅವರ ಮೇಲೆ

ಕೃಪೆಮೋರಿ ದೀಕ್ಷೆಮಾಡಲು ಅವರು ಗುಡಿಸಲೊಳಗೆ ಅಡಿಯಿಟ್ಟರು. ಕೂಡಲೇ ಅಲ್ಲಿಯ ದೃಶ್ಯವನ್ನು ಕಂಡು ಜುಗುಪ್ಸೆಗೊಂಡರು. ಅಲ್ಲಿ ಒತ್ತಟ್ಟಿಗೆ ಸಿಂಹ, ಹುಲಿ, ಸಾರಂಗ, ಚಿರತೆಗಳ ಚರ್ಮಗಳು ಬಿದ್ದಿದ್ದವು. ಮತ್ತೊಂದುಕಡೆ ಕಾಡುಮೃಗಗಳ ಮಾಂಸದ ಕರಣೆಗಳು ಬಿದ್ದಿದ್ದವು. ಇದನ್ನು ನೋಡಿ ಅವರ ಹೃದಯವು ತಲ್ಲಣಗೊಂಡಿತು. ಒತ್ತಟ್ಟಿಗೆ ಅವರ ಬಿಲ್ಲು ಬಾಣ ಬತ್ತಳಿಕೆಗಳಿದ್ದವು. ಮಲಿನ ದೇಹದ ಹೊಲಸು ಬಟ್ಟೆಯ ಬೇಡರ ಹೆಂಡರು ಅಲ್ಲಿ ಸುಳಿದಾಡುತ್ತಿದ್ದರು. ಕಪ್ಪುವರ್ಣದ ಶುಭ್ರದಂತದ ಅವರ ಮಕ್ಕಳು ಓಡಾಡುತ್ತಿದ್ದರು. ಈ ದೃಶ್ಯವನ್ನು ನೋಡಿ ಆ ಬೇಡರ ಮೇಲೆ ತಮ್ಮ ಕೃಪಾದೃಷ್ಟಿಯನ್ನು ಬೀರಲು ಅವರ ಹೃದಯವು ಮೆತ್ತಗಾಯಿತು. ಹೃದಯದಲ್ಲಿ ಕರುಣೆಯು ಹೊರಹೊಮ್ಮಿತು. ಆಗ ಅವರು ಯೋಗಿಗೆ ಕೈಮುಗಿದು "ನೀವು ಒಳ್ಳೆಯ ಮನುಷ್ಯರಿದ್ದೀರಿ. ಯಾವ ಕಾರಣದಿಂದ ಹಾದಿ ತಪ್ಪಿ ನಮ್ಮಲ್ಲಿಗೆ ಬಂದಿರೋ! ಈ ವನವು ಕ್ರೂರ ಮೃಗಗಳಿಂದ ತುಂಬಿದೆ. ಈ ರಾತ್ರಿಯಲ್ಲಿ ಇಲ್ಲಿಯೇ ಇದ್ದು ನಾಳೆ ಹೋಗುವಿರಂತೆ" ಎಂದು ಬೇಡಿಕೊಂಡರು. ಈ ಸುಸಂಧಿಯನ್ನು ಕಳೆದುಕೊಳ್ಳಬಾರದೆಂದು ಯೋಚಿಸಿ ಪೂಜ್ಯರು ಅವರಿಗೆಲ್ಲ ದೀಕ್ಷೆ ಮಾಡಿ ಲಿಂಗಕಟ್ಟಿ ಪಾವನಮಾಡಿ "ಪ್ರಾಣಿಗಳನ್ನು ಕೊಲ್ಲಬೇಡಿರಿ. ಮಾಂಸವನ್ನು ತಿನ್ನಬೇಡಿರಿ. ಸೆರೆ ಕುಡಿಯಬೇಡಿರಿ. ದೇವತೆಗಳಿಗೆ ಬಲಿ ಕೊಡಬೇಡಿರಿ. ದಿನಾಲು ಒಂದು ಸಲ ಜಳಕಮಾಡಿ ಲಿಂಗವನ್ನು ಪತ್ರಪುಷ್ಪಗಳಿಂದ ಪೂಜಿಸಿರಿ" ಎಂದು ಹೇಳಿ ಪೂಜಾ ವಿಧಾನವನ್ನು ಹೇಳಿಕೊಟ್ಟರು. ಆ ಕಿರಾತರು ಮುಂದೆ ತಮ್ಮ ಕ್ರೂರ ಕುಲಾಚಾರ ಶೀಲಗಳನ್ನು ಬಿಟ್ಟು ಶಿಷ್ಟವಾದ ಲಿಂಗಸಂಸ್ಕೃತಿಯನ್ನು ಬಿಟ್ಟು ಪುರಾತರಾದರು.

## ೮ನೆಯ ಸಂಧಿ

### ಶಿವಯೋಗ ಸಾಧನೆ

ಬೂದೀಶನು ದಕ್ಷಿಣ ದಿಕ್ಕಿನ ಕಡೆಗೆ ಸಂಚಾರವನ್ನು ಸಾಗಿಸಿದರು. ಅನಂತಪುರವೆಂಬ ಪಟ್ಟಣದಲ್ಲಿ ತಿರುವಾಂಕನೆಂಬ ಯೋಗಸಾಧಕನು ಬೊಮ್ಮವನವೆಂಬ ಆಶ್ರಮವ ರಚಿಸಿ ಗುರುವಿಲ್ಲದೆ ಸ್ವಂತ ಪ್ರಯತ್ನದಿಂದ ಹಠಯೋಗ ಸಾಧನವನ್ನು ನಡೆಯಿಸಿದ್ದನು. ಆತನ ಪ್ರಯತ್ನಗಳೆಲ್ಲ ನಿಷ್ಫಲವಾಗಿ ಆತನು

ಒಬ್ಬ ಗುರುವಿನ ಮಾರ್ಗನಿರೀಕ್ಷಣೆಯಲ್ಲಿದ್ದನು. ಬೂದಿಯೋಗಿಯು ಅಲ್ಲಿಗೆ ಬಂದು ತಿರುವಾಂಕನನ್ನು ನೋಡಿ ಆತನ ಮನದ ಇಂಗಿತವನ್ನು ತಿಳಿದು ಅವನಿಗೆ ಯೋಗಮಾರ್ಗವನ್ನರುಹಬೇಕೆಂದು ಸದಿಚ್ಛೆಯುಂಟಾಯಿತು. ತಿರುವಾಂಕನು ಇವರನ್ನು ಕಂಡಾಕ್ಷಣವೇ ಯೋಗಿ ಲಕ್ಷಣಗಳನ್ನರಿತ ಆತನು ಅವರಿಗೆ ಸಾಷ್ಟಾಂಗ ವೆರಗಿ ಮುಂದಭಾಗ್ಯನಿಗೆ ಹೊಂಗೊಡವು ಸಿಕ್ಕಂತೆ ಹಿಗ್ಗಾಡಿದನು. "ಗುರುವೇ, ತಮ್ಮ ದರ್ಶನದಿಂದ ನಾನು ಧನ್ಯನಾದೆನು." ನನಗೆ ಯೋಗದ ಹಿರಿಮೆಯನ್ನು ಕಾರ್ಯಗತವಾಗುವಂತೆ ತಿಳಿಸಿ ಅನುಗ್ರಹಿಸಬೇಕೆಂದು ಬೇಡಿಕೊಂಡನು. ಅದಕ್ಕೆ ಯೋಗಿಗಳು, "ತಮ್ಮಾ, ನೀನು ನಿಜವಾಗಿಯೂ ಪುಣ್ಯಶಾಲಿಯು." ಇಂದಿನ ವರೆಗೆ ನಾನಾರಿಗೂ ಯೋಗದ ಮಹಿಮೆಯನ್ನು ತಿಳಿಸಿಕೊಟ್ಟಿಲ್ಲ. ನಿನ್ನ ಇಂಗಿತವನ್ನರಿದು ನಿನಗೆ ಅದನ್ನು ಅರುಹಬೇಕೆಂದಿರುವೆ.

ಯೋಗವೆಂಬುದು ಆಧ್ಯಾತ್ಮವಿದ್ಯೆಯು. ಅದು ನಮಗೆ ಆವರಿಸಿದ್ದ ಮಾಯೆಯನ್ನು ಹೋಗಲಾಡಿಸಿ ಪರಿಪೂರ್ಣವಾದ ಶಾಶ್ವತ ಸುಖವನ್ನೀಯುವದು. ಯೋಗವೆಂದರೆ ಶಿವ–ಜೀವರೈಕ್ಯ. ಸಾಧನ ಭೇದದಿಂದ ಯೋಗವು ಹಠಯೋಗ, ಲಯಯೋಗ, ಮಂತ್ರಯೋಗ, ರಾಜಯೋಗ ಎಂದು ನಾಲ್ಕು ತೆರನಾಗಿರುವದು. ಯೋಗಿಗಳು ಇವನ್ನು ಸಾಧಿಸಿ ದೊಡ್ಡ ಸಿದ್ಧಿಗಳನ್ನು ಪಡೆದು ಲೀಲೆಯಾಡುವರು. ಯೋಗ ಸಾಧನದಿಂದ ಮಿಗಿಲಾದ ಶಕ್ತಿಯುಂಟಾಗುವದು. ಶರೀರ, ಮನ, ಪ್ರಾಣ, ಬುದ್ಧಿಗಳು ಬಲಗೊಳ್ಳುವವು. ಆದಾಗ್ಯೂ ಈ ಯೋಗಗಳು ಪರಿಪೂರ್ಣ ಯೋಗಗಳಲ್ಲ. ಆದರೆ ಶಿವಯೋಗವೊಂದೇ ಪರಿಪೂರ್ಣ ಯೋಗವೆನಿಸಿದೆ. ಮಾಯಾವೃತನಾದ ಅಜ್ಞ ಜೀವನು ಸ್ವಸ್ವರೂಪವನ್ನು ಮರೆತು ವಿಷಯಾದಿಗಳನ್ನು ಮೋಹಿಸಿ, ಸ್ವಾರ್ಥದ ಮೂಲಕ ನಿಜ ಸುಖಕ್ಕೆ ಎರವಾಗಿಬಿಟ್ಟಿದ್ದಾನೆ. ಆತನ ಮನಸ್ಸಿಗೆ ಶಾಂತಿಯಿಲ್ಲ. ಅಶನ, ವಸನ, ಇಂದ್ರಿಯಸೌಖ್ಯಕ್ಕಾಗಿ ಹೋರಾಟ ನಡೆಸುವನು. ಈ ಕ್ಷಣಭಂಗುರವಾದ ಸುಖವನ್ನು ಧಿಕ್ಕರಿಸಿ ಶಾಶ್ವತ ಸುಖ ಪಡೆಯಲಿಕ್ಕೆ ಯೋಗಿಗಳು ಶಿವ-ಯೋಗವನ್ನು ಸಾಧಿಸುವರು.

ಶಿವಯೋಗವನ್ನು ಅರಿದು ಆಚರಿಸಿದ ಯೋಗಿಗಳು ಶಿವಯೋಗವೊಂದೇ ಪರಿಪೂರ್ಣಯೋಗವೆಂದು ಮಾನಗುಂಡಿರುವರು. ಕರದಲ್ಲಿ ಇಷ್ಟಲಿಂಗವನ್ನಿರಿಸಿ ಏಕಾಗ್ರತೆಯಿಂದ ನಿರೀಕ್ಷಿಸಿ ದೃಷ್ಟಿ. ಮನ, ಭಾವಗಳೊಡಗೂಡಿ ವ್ಯವಹರಿಸುವುದೇ ಶಿವಯೋಗವು. ಶಿವಯೋಗಕ್ಕೆ ಇಷ್ಟಲಿಂಗವು ಅವಶ್ಯವಾಗಿ ಬೇಕು. ಕಣ್ಣು, ಮನ, ಭಾವಶುದ್ಧಿಗೆ ಚಿತ್ತ ವೃತ್ತಿ ನಿರೋಧಕ್ಕೂ ಇಷ್ಟಲಿಂಗವು

ಅವಶ್ಯಕ. ಶಿವಯೋಗದಲ್ಲಿ ಉಳಿದ ನಾಲ್ಕು ಯೋಗಗಳ ರಹಸ್ಯವೆಲ್ಲ ಕೂಡಿ ಕೊಂಡಿದೆ. ಆದುದರಿಂದ ಶಿವಯೋಗದಲ್ಲಿ ಅಪಾರವಾದ ಶಕ್ತಿಯುಂಟು. ಶಿವಯೋಗಕ್ಕೆ ಲಿಂಗಭಕ್ತಿ, ಲಿಂಗಜ್ಞಾನ, ಲಿಂಗಧ್ಯಾನ, ಲಿಂಗವ್ರತ, ಲಿಂಗಾರ್ಚನೆ ಇವು ಅವಶ್ಯವಾಗಿ ಬೇಕು. ಇವು ಲಿಂಗದ ಅಂಗಗಳಾಗಿವೆ. ಲಿಂಗಾಂಗ ಸಾಮರಸ್ಯವನ್ನು ಹೊಂದುವುದಕ್ಕೆ ಈ ಐದು ಸಾಧನಗಳು ಅವಶ್ಯವಾಗಿವೆ.

ಶಿವಯೋಗಕ್ಕಿಂತ ಅಧಿಕವಾದುದು ಬೇರಾವುದೂ ಇಲ್ಲ. ಶಿವಯೋಗಿಗಳು ಇತರ ಯೋಗಿಗಳಂತೆ ಸಂಸಾರ ಸಂಬಂಧವನ್ನು ತಪ್ಪಿಸಿಕೊಳ್ಳುವದಿಲ್ಲ. ಇಂದ್ರಿಯಗಳನ್ನು ಪರಿವರ್ತನಗೊಳಿಸಿ ನಾನಾ ಸಂಸಾರ ಭೋಗಗಳನ್ನು ಲಿಂಗಮುಖವಾಗಿ ಭೋಗಿಸುವರು. ಅದಕ್ಕಾಗಿಯೇ ಅವರಿಗೆ ಲಿಂಗಭೋಗೋಪಭೋಗಿಗಳೆನ್ನುವರು. ಶಿವಯೋಗ ಸಾಧನದಿಂದ ಜಡಶರೀರದ ಪ್ರಕೃತಿಭಾವವಡಗಿ ಚಿತ್ಕಳೆಯು ಬೆಳಗಲಾರಂಭಿಸುವದು. ಆದರಿಂದ ಅವರು ಲಿಂಗದೇಹಿಗಳಾಗುವರು. ಶರಣರು ಸುಲಭವಾದ ಈ ಶಿವಯೋಗ ಸಾಧನವನ್ನು ಸಾಮಾನ್ಯ ಜನರಿಗೂ ತಿಳಿಯಪಡಿಸಿ ಅವರ ಸಂಸಾರವನ್ನು ಸುಗಮಗೊಳಿಸಿದರು. ಆದರಿಂದ ಲಿಂಗಾಂಗಿಗಳು ಅಂಗಭೋಗಿಗಳಾಗದೆ ಲಿಂಗಭೋಗಿಗಳಾಗುವರು.

ಮೊದಲು ಹಠಯೋಗ ಸಾಧಿಸಿದವರಿಗೆ ಶಿವಯೋಗವು ಬಹು ಸುಲಭವಾಗುವದು. ಆದುದರಿಂದ ಶಿವಯೋಗಕ್ಕೆ ಹಠಯೋಗವು ಬಾಧಕವಲ್ಲ, ಪೋಷಕವಾಗಿರುವದು. ಶಿವಯೋಗದಲ್ಲಿರುವಂತೆ ಹಠಯೋಗದಲ್ಲಿಯೂಕೂಡ ದೃಷ್ಟಿ, ಮನ, ವಾಯುಗಳನ್ನು ಬಂಧಿಸಿ ಏಕಾಗ್ರಗೊಳಿಸುವ ಯುಕ್ತಿಯಿದೆ. ಹಠಯೋಗಿಗಳು ಶಿವಯೋಗವನ್ನಾಚರಿಸುವದೆಂದರೆ ಪಳಗಿದ ಕುದುರೆಯನ್ನು ಸವಾರಿ ಮಾಡಿದಂತಾಗುವದು. ಸುವರ್ಣಕ್ಕೆ ಸುಗಂಧವನ್ನು ಬೆರೆಸಿದಂತಾಗುವದು. ಆದುದರಿಂದ ಹಠಯೋಗ ಶಿವಯೋಗಗಳ ತತ್ತ್ವಗಳು ಪರಸ್ಪರ ವಿರೋಧವಾಗಿರದೆ ಹಾಸುಹೊಕ್ಕಾಗಿ ಬೆರತುಕೊಂಡಿವೆ.

ಶರಣರ ವಚನಗಳಲ್ಲಿ ಯೋಗಾಂಗಗಳ ವರ್ಣನೆಯು ಬರುತ್ತದೆ. ಪ್ರಾಣಲಿಂಗಿಸ್ಥಲದಲ್ಲಂತೂ ವಿಶೇಷವಾಗಿ ಹಠಯೋಗ ತತ್ತ್ವಗಳ ಸಾಧನೆಯು ಕಂಡುಬರುತ್ತಿದೆ. ಪ್ರಾಣಲಿಂಗಿಸ್ಥಲದಲ್ಲಿ ಹಠಯೋಗವನ್ನು ಸಾಧಿಸಿಯೆ ಮುಂದಿನ ಶರಣ ಐಕ್ಯಸ್ಥಲಗಳ ಮೆಟ್ಟಿಲುಗಳನ್ನೇರಿರುವರು. ಕರ್ನಾಟಕವು ಯೋಗಸಿದ್ಧರ ನಾಡೆನಿಸಿದೆ. ರೇವಣಸಿದ್ಧ, ಅಲ್ಲಮಪ್ರಭು, ಸಕಲೇಶ. ಮಾದ

ಗಿಡ ಮರಗಳು ಚಿಗಿತವು. ಬತ್ತಿದ ಕೆರೆ ಬಾವಿಗಳಿಗೆ ನೀರಿನ ಸೆಲೆಯೊಡೆಯಿತು. ಜನರ ಬಾಡಿದ ಮುಖಗಳು ಕಳೆಯೇರಿದವು. ಈ ಮಹಿಮೆಯನ್ನು ಸ್ಮರಿಸಿ ಜನರು ಆತನ ಹೆಸರಿನಿಂದ ಒಂದು ಲಿಂಗವನ್ನು ಪ್ರತಿಷ್ಠೆಗೊಳಿಸಿ ಅದಕ್ಕೆ ಬೂದಿ ಲಿಂಗೇಶ್ವರನೆಂದು ಹೆಸರಿಟ್ಟರು. ಈ ಪ್ರಕಾರ ಯೋಗದ ಮಹಿಮೆಯನ್ನು ತಿರುವಾಂಕನಿಗೆ ಅರುಹಿ ಪ್ರತ್ಯಕ್ಷ ಅದರ ಲೀಲೆಯನ್ನು ತೋರಿ ಶಿವಯೋಗಿಯು ಸಂಚಾರವನ್ನು ಮುಂದುವರಿಸಿದನು.

## ೯ನೆಯ ಸಂಧಿ

### ಹಳ್ಯಾಳ

ಕಡಪಟ್ಟಿಯೆಂಬ ಗ್ರಾಮದ ನೆರೆಯಲ್ಲಿ ಹಳ್ಯಾಳೆಂಬ ಚಿಕ್ಕ ಊರಿದೆ. ಅಲ್ಲಿ ಆಡಿವೆಯ್ಯನೆಂಬ ಸಜ್ಜನ ಮನುಷ್ಯನು ಕಾಲವಶದಿಂದ ಲಿಂಗೈಕ್ಯನಾಗಿದ್ದನು. ಆತನ ಮಡದಿ ಮಕ್ಕಳು ಅವನಿಗಾಗಿ ಶೋಕ ಮಾಡುತ್ತಿದ್ದರು. ಆತನು ಬಡವರಿಗೆ ಭಾಗ್ಯ ದೇವತೆಯಾಗಿದ್ದನು. ಊರಿಗೆಲ್ಲಾ ಬೇಕಾಗಿದ್ದನು. ಗುರು-ಲಿಂಗ ಜಂಗಮರ ಮೇಲಂತೂ ಪಂಚಪ್ರಾಣ. ನಡೆ ನುಡಿಗಳಲ್ಲಿ ಪರಿಶುದ್ಧನಾಗಿದ್ದನು. ಆತನು ಸತ್ತದ್ದಕ್ಕಾಗಿ ಊರಿಗೆ ಊರೇ ಮರಗುತ್ತಿತ್ತು. ಗುಮ್ಮಗೋಳೆಂಬ ಹಳ್ಳಿಯಲ್ಲಿ ಆತನ ಆಪ್ತೇಷ್ಟರಿದ್ದರು. ಅವರಿಗೆ ಈ ನಿಧನ ವಾರ್ತೆಯನ್ನು ಮುಟ್ಟಿಸಿದರು, ಆ ಆಪ್ತರ ಮನೆಯಲ್ಲಿ ಅವತ್ತಿನ ದಿವಸ ಬೂದೀಶಯೋಗಿಯು ಶಿವಪೂಜೆ ಮಾಡಹತ್ತಿದ್ದನು. ನಿಧನವಾರ್ತೆಯನ್ನು ಕೇಳಿ ಮನೆಯವರೆಲ್ಲ ಆಕ್ರೋಶ ಮಾಡತೊಡಗಿದರು. ಅವರು ಹಳ್ಯಾಳಿಗೆ ಹೊರಟು ನಿಂತಾಗ ಬೂದೀಶನು "ನಾನೂ ನಿಮ್ಮೊಡನೆ ಹಳ್ಯಾಳಿಗೆ ಬರುತ್ತೇನೆ ನಡೆಯಿರಯ್ಯಾ" ಎಂದು ಹೇಳಿ ಹೊರಟೇ ಬಿಟ್ಟನು.

ಆಡಿವೆಯ್ಯನ ಶವವನ್ನು ಗೂಟಕ್ಕೆ ಬಡಿದು ಕುಳ್ಳಿರಿಸಿದ್ದರು. ಸುತ್ತಲೂ ಜನರು ನೆರೆದು ರೋದಿಸುತ್ತಿದ್ದರು. ಶಿವಯೋಗಿಗಳು ತಡಮಾಡದೆ ಆ ಮನೆಯಲ್ಲಿ ಜಳಕ ಮಾಡಿ ಪೂಜೆಯನ್ನು ತೀರಿಸಿ ಆ ಶವದ ಮೈಗೆಲ್ಲ ಭಸ್ಮವನ್ನು ಲೇಪಿಸಿ "ಆಡಿವೆಯ್ಯಾ, ಏಳು ಏಳು" ಎಂದೆನ್ನಲು ಸತ್ತ ಆಡಿವೆಯ್ಯನು ಜೀವ ತಿರುಗಿ ಕಣ್ಣು ತೆರೆದು ನೋಡಿ ಶ್ರೀ ಶಿವಯೋಗಿಗಳ ಪಾದಕ್ಕೆ ಅಭಿವಂದಿಸಿದನು. ಅಂದಿನ ದಿನವೇ ಆಡಿವೆಯ್ಯನು ಶಿವಯೋಗಿಯ ನೇತೃತ್ವದಲ್ಲಿ

ಗಣಪರ್ವವನ್ನೇರ್ಪಡಿಸಿದನು. ಶಿವಯೋಗಿಗಳು ಸಂತೃಪ್ತರಾಗಿ ಅಡಿವೆಯ್ಯನಿಗೆ ಆಶೀರ್ವದಿಸಿ ತೆರಳಿದರು. ಬೂದಿಯೋಗಿಯು ಮಹಾ ಮಹಿಮನೆಂದು ಜನರು ಹೊಗಳಿದರು. ಮುಂದೆ ಅಡಿವೆಯ್ಯನಿಗೆ ಮೂರು ಗಂಡು ಮಕ್ಕಳಾದರು. ಅವನ ಮನೆತನದ ಭಾಗ್ಯವು ಬೆಳೆಯಿತು.

## ಎಡ್ರಾವಿ

ಒಂದು ದಿನ ಎಡ್ರಾವಿಯೊಂಬೂರಿನ ಭಕ್ತರು ಬೂದೀಶನೆಡೆಗೆ ಬಂದು ನಮ್ಮೂರಿಗೆ ದಯಮಾಡಿಸಿ ನಮ್ಮ ಅಳಲಿ ಸೇವೆಯನ್ನು ಕೈಕೊಳ್ಳಬೇಕೆಂದು ಪ್ರಾರ್ಥಿಸಿದರು. ಅವರ ಬಿನ್ನಣವನ್ನು ಮನ್ನಿಸಿ ಯೋಗಿವರ್ಯರು ಎಡ್ರಾವಿಗೆ ದಯಮಾಡಿಸಿದರು. ಭಕ್ತರಿಗೆ ಅವರು ಅಪ್ಪಣೆಕೊಡಿಸಿದ್ದೇನಂದರೆ "ಇಂದು ನೀವು ಗಣಪರ್ವವನೇರ್ಪಡಿಸಿ ಹೋಳಿಗೆ ಸೀಕರಣೆಯನ್ನು ಮಾಡಿ ಬಂದ ಜನಗಳಿಗೆಲ್ಲ ಎಡೆ ಮಾಡಿ ತೃಪ್ತಿಬಡಿಸಿರಿ" ಎಂದೆನಲು ಎಲ್ಲರಿಗೂ ದಂಗು ಬಡಿದಂತಾಯಿತು. ಅಕಾಲದಲ್ಲಿ ಮಾವಿನ ಹಣ್ಣುಗಳನ್ನೆಲ್ಲಿಂದ ತರಬೇಕು ? ಏನೋ ಶಿವಯೋಗಿಯು ನಮ್ಮ ಭಕ್ತಿಯನ್ನು ಪರೀಕ್ಷಿಸುವಂತೆ ಕಾಣುತ್ತದೆ. ದೊಡ್ಡವರು ಹೇಳಿರುವರೆಂದ ಬಳಿಕ ಎಲ್ಲಿಂದಾದರೂ ಹಣ್ಣುಗಳು ಬರಬಾರದೇಕೆ ? ಆ ಬಗ್ಗೆ ನಾವು ವಿಚಾರಮಾಡಿ ಫಲವಿಲ್ಲ. ಅದರ ಹೊಣೆಯನ್ನು ಅವರ ಪಾಲಿಗೇ ಬಿಟ್ಟು ಬಿಡೋಣಎಂದು" ವಿಚಾರಿಸಿ ಸುಮ್ಮನಾದರು.

ಹೋಳಿಗೆ ಶಾಕಪಾಕಗಳೆಲ್ಲ ಸಿದ್ಧವಾದವು. ಸೀಕರಣೆಯೊಂದು ಉಳಿಯಿತು. ಅಷ್ಟರಲ್ಲಿ ಹೊಸಪಳ್ಳಿಯಿಂದ ಬಸವಪ್ಪನೆಂಬ ಭಕ್ತನು ಒಂದು ಆಳಿನ ಮೇಲೆ ಒಂದು ನೂರು ಕರೆ ಮಾವಿನ ಹಣ್ಣುಗಳನ್ನು ಹೊರಸಿಕೊಂಡು ಎಡ್ರಾವಿಗೆ ಬಂದು ಶಿವಯೋಗಿಗಳ ಮುಂದಿರಿಸಿ ಸ್ವೀಕರಿಸಬೇಕೆಂದು ಸಾಷ್ಟಾಂಗ ಹಾಕಿದನು. ಜನರೆಲ್ಲರಿಗೆ ಆಶ್ಚರ್ಯವಾಯಿತು. ಅಕಾಲದಲ್ಲಿ ಫಲಕೊಡುವ ಗಿಡದಿಂದ ಹಣ್ಣುಗಳೇನೋ ಬಂದವು. ಆದರೆ ಕೇವಲ ನೂರು ಹಣ್ಣುಗಳು ದೊಡ್ಡ ಗಣಾರಾಧನೆಗೆ ಹೇಗೆ ಸಾಲಬೇಕು ? ಬೂದೀಶ್ವರನೇ ನಡಯಿಸಿ ಕೊಡಲೆಂದು ಮನದಲ್ಲಿ ಧ್ಯಾನಿಸಿ ಸುಮ್ಮನಾದರು. ಶಿವಯೋಗಿಗಳು ಅವರ ಮುಖಚರ್ಯೆಯಿಂದ ಅವರ ಇಂಗಿತವನ್ನರಿತು "ಭಕ್ತರೇ, ಚಿಂತಿಸಬೇಡಿರಿ. ಹಣ್ಣುಕೊಟ್ಟ ಶಿವನು ಗಣತೃಪ್ತಿಯನ್ನು ಮಾಡಿಸಲಾರನೇ ?" ಎಂದು ಹೇಳಿ ತಾವೇ ಸ್ವತಃ ಹಣ್ಣು ಹಿಂಡಿ ಸೀಕರಣೆ ಮಾಡಿದರು, ಅವರ ಪರುಷ ಹಸ್ತ

ದಿಂದ ಪ್ರಸಾದವು ಸೂರ್ಯಾಡಿ ಬೆಳೆದು ಗಣಪರ್ವಕ್ಕೆಲ್ಲಾ ಸಾಕಾಗಿ ಊರ ಬಡಬಗ್ಗರೆಲ್ಲ ಉಂಡು ಹೆಚ್ಚಾಗಿ ನೆರೆಹೊರೆಯ ಊರುಗಳ ಜನರನ್ನು ಕರೆಯಿಸಿ ಉಣಿಸಿ ಕಳಿಸಿದರು. ಭಕ್ತರು ಶಿವಯೋಗಿಗಳ ಲೀಲೆಯನ್ನು ಸ್ಮರಿಸಿ ಅವರನ್ನು ಹಾಡಿಹರಿಸಿದರು.

## ಗುರ್ಲಹೊಸೂರ

ಮುಂದೆ ಯೋಗಿಗಳು ಬೈಲವಾಡವರ್ತಿಯೆಂಬೂರಿಗೆ ಹೋಗಿ ಲೀಲೆಯಿಂದ ಭಕ್ತರನ್ನುದ್ಧರಿಸಿ ಗುರ್ಲಹೊಸೂರಿಗೆ ಅಡಿಯಿಟ್ಟರು. ಅಲ್ಲಿ ಚಿದಂಬರ ದೀಕ್ಷಿತರೆಂಬ ಮಹಿಮಾ ಪುರುಷರು ವಾಸವಾಗಿದ್ದರು. ಅವರು ಮಹಾ ಜ್ಞಾನಿಗಳೂ ಶಿವಭಕ್ತರೂ ಆಗಿದ್ದರು. ಅವರು ಜ್ಞಾನ ದೃಷ್ಟಿಯಿಂದ ಬೂದೀಯೋಗಿಯು ತಮ್ಮ ದರ್ಶನಕ್ಕೆ ಬರುತ್ತಿರುವುದನ್ನು ತಿಳಿದು ಭಕ್ತರೊಡಗೂಡಿ ಇದಿರ್ಗೊಂಡು ಸ್ವಾಗತ ಮಾಡಿ ಕರೆದುಕೊಂಡು ಬಂದು ಉಚ್ಚಾಸನದಲ್ಲಿ ಕುಳ್ಳಿರಿಸಿ ಸತ್ಕರಿಸಿದರು. ಇದನ್ನು ನೋಡಿದ ಕೆಲವು ಕರ್ಮಠರಿಗೆ ಸಹನವಾಗಲಿಲ್ಲ, "ಪರಜಾತಿಯ ವಿರಕ್ತ ಸ್ವಾಮಿಯನ್ನು ಬ್ರಾಹ್ಮಣೋತ್ತಮರಾದ ಚಿದಂಬರ ದೀಕ್ಷಿತರು ವಿನಯದಿಂದುಪಚರಿಸಬಹುದೇ"? ಎಂದು ಅಪಸ್ವರ ತೆಗೆದರು. ಆಗ ದೀಕ್ಷಿತರು ಅವರಿಗೆ "ಎಲಾ ನೀವೆಂಥ ಮೂರ್ಖರು? ಅಜ್ಞಾನಿಗಳು ? ಕುಲಕ್ಕಾಗಿ ನೀವು ಕಚ್ಚಾಡುತ್ತಿರುವಿರಲ್ಲಾ! ಶಿವನೇ ತಾನಾದ ಶಿವಯೋಗಿಯ ಕುಲವನ್ನೆಣಿಸುವರೇ ? ಭೇದಭಾವ ತಾಳುವವರು ಪಾಪಿಗಳೆಂದು ಛೀ ಹಾಕಲು ಅವರೆಲ್ಲ ಪೂಜ್ಯರಾದ ಬೂದೀಶ್ವರರ ಅಡಿದಾವರೆಗೆ ಅಭಿವಂದಿಸಿದರು. ಬಳಿಕ ದೀಕ್ಷಿತರು "ಊರ ಹಾದಿಯನ್ನು ತೋರಿಸುವ ಮನುಷ್ಯನು ಯಾರಾದರೇನು ? ಅದರಂತೆ ಪಾರಮಾರ್ಥದ ಹಾದಿಯನ್ನು ಹಿಡಿಸುವ ವಿಭೂತಿಯು ಯಾವನಾದರೇನು ? ಆತನು ನಮಗೆಲ್ಲ ಪೂಜ್ಯನು" ಎಂದು ಹೇಳಿದರು.

ಆಗ ಬೂದಿಯೋಗಿಯು ವಿಪ್ರರಿಗೆಲ್ಲ ಒಂದು ಪವಾಡ ಮಾಡಿ ತೋರಿಸಿದನು. ಆ ಪ್ರಸಂಗದಲ್ಲಿ ತಾವು ಅವರಿಗೆ ಚಿದಂಬರ ದೀಕ್ಷಿತರಾಗಿ ಕಂಡರು. ದೀಕ್ಷಿತರು ಬೂದೀಶರಾಗಿ ಕಂಡರು. ಅರೆ ನಿಮಿಷದಲ್ಲಿ ಬೂದೀಶನು ದೀಕ್ಷಿತರ ಗುರುವಿನ ರೂಪ ಧರಿಸಿ ಕುಳಿತನು. ಪುನಃ ತಾನೇ ತಾನಾದನು. ಇದನ್ನೆಲ್ಲ ನೋಡಿ ಅವರು ಗಲ್ಲಗಲ್ಲ ಬಡಿದುಕೊಂಡು ತಪ್ಪಾಯ್ತೆಂದು ಪಶ್ಚಾತ್ತಾಪ

ವ್ಯಕ್ತಪಡಿಸಿದರು ರತ್ನದ ಬೆಲೆಯನ್ನು ರತ್ನ ಪರೀಕ್ಷಕನೇ ಬಲ್ಲ. ಮಹಾತ್ಮರಾದ ಬೂದೀಶನ ಪ್ರಭಾವವನ್ನು ಮಹನೀಯರಾದ ದೀಕ್ಷಿತರೇ ಬಲ್ಲರು. ನಾವೆಷ್ಟರವರು ?" ಎಂದು ಆಶ್ಚರ್ಯಬಟ್ಟು ಸುಮ್ಮನಾದರು. ದೀಕ್ಷಿತರಿಂದ ಬೀಳ್ಕೊಂಡು ಬೂದೀಶ್ವರರು ಅಲ್ಲಿಂದ ತಮ್ಮ ಪಯಣವನ್ನು ಬೆಳೆಸಿದರು.

## ಉಪ್ಪಿನಬೆಟಗೇರಿ

ಮುಂದೆ ಯೋಗಿಗಳು ಉಪ್ಪಿನಬೆಟಗೇರಿಯೆಂಬ ಗ್ರಾಮಕ್ಕೆ ಬರಲು ಅಲ್ಲಿ ಮಾರಿಕಾ ಉಪದ್ರವದಿಂದ ದಿನಾಲು ಹತ್ತೆಂಟು ಜನಗಳು ಆ ರೋಗಕ್ಕೆ ಬಲಿಯಾಗುತ್ತಿದ್ದರು. ಹಾಗೆಯೇ ಬಿಟ್ಟರೆ ಊರಿಗೆ ಊರೇ ಕದಕಟ್ಟಬಹುದೆಂಬ ಭೀತಿಯುಂಟಾಗಿದ್ದಿತು. ಅಷ್ಟರಲ್ಲಿ ಶಿವಯೋಗಿಯು ತಮ್ಮ ಊರಿಗೆ ಪಾದವಿಟ್ಟಿರಲು ಊರ ಪ್ರಮುಖರು ಅವರ ಬಳಿಗೆ ಬಂದು ವಂದಿಸಿ, "ಬುದ್ಧೀ, ಊರಿಗೆ ಮಾರಿಕಾ ಬೇನೆ ಬಾದಿಸೆ. ಕಳೆಯಬೇಕೆ"ಂದು ಪಾದಕ್ಕೆ ಬೇಡಿಕೊಂಡರು. ಅದಕ್ಕೆ ಯೋಗಿಗಳು "ಭಕ್ತರೇ ನೀವು ನಿಮ್ಮೂರ ವೀರಭದ್ರ ದೇವರಿಗೆ ರುದ್ರಾಭಿಷೇಕ ಮಾಡಿಸಿ, ಶ್ರೀ ರುದ್ರವನ್ನೋದಿಸಿ, ಗಣಾರಾಧನೆ ಮಾಡಿರಿ. ಮಾರಿಕಾ ಉಪದ್ರವವು ನಿಲ್ಲುವದು. ನಿಮ್ಮ ಆಧಿ-ವ್ಯಾಧಿಗಳೂ ಭೂತ ಪ್ರೇತಗಳ ಬಾಧೆಯೂ, ಅರಿಷ್ಟ ಕಂಟಕಗಳೂ ನಾಶವಾಗುವವು." ಎಂದು ನುಡಿಯಲು, ಜನರು ಹಾಗೆಯೇ ಮಾಡಿದರು. ಮಾರಿಕಾ ಬೇನೆಯು ನಿಂತು ಹೋಯಿತು. ಇಷ್ಟೇ ಅಲ್ಲ, ಮಾರಿಕಾ ಬೇನೆಯು ಪುನಃ ಆ ಊರಿಗೆ ಎಂದೂ ಬರಲಿಲ್ಲ

## ಗರಗ

ಬೂದೀಶನು ಮುಂದೆ ಗರಗದ ಮಡಿವಾಳಯೋಗಿಯ ದರ್ಶನಕ್ಕೆ ಬರುತ್ತಿರುವದನ್ನು ಕಂಡು ಜನಗಳು ಅವರನ್ನು ಒಳ್ಳೆ ಭಕ್ತಿಗೌರವಗಳಿಂದ ಕರೆದುಕೊಂಡು ಹೋಗಿ ಮಡಿವಾಳಸ್ವಾಮಿಗಳ ಭೆಟ್ಟಿ ಮಾಡಿಸಿದರು. ಇಬ್ಬರು ಶಿವಯೋಗಿಗಳು ಒಬ್ಬರನ್ನೊಬ್ಬರು ಅಪ್ಪಿ ಆನಂದಾಶ್ರುಗಳನ್ನು ಸುರಿಸಿದರು. ಇಬ್ಬರೂ ಒಂದೇ ಆಸನದಲ್ಲಿ ಕುಳಿತು ಶಿವಾನುಭವ ಗೋಷ್ಠಿಯಲ್ಲಿ ನಿರತರಾದರು. ಆಗ ಕೆಲವು ಕುಹಕರು "ಗರಗದ ಮಡಿವಾಳಪ್ಪನವರಿಗೆ ಲಿಂಗ

ವಿಲ್ಲೆಂದು ಬೂದೀಶ್ವರರ ಮುಂದೆ ಆಕ್ಷೇಪವೆತ್ತಿದರು. ತಾವು ಎಷ್ಟೇ ಬಲವಂತರಿದ್ದರೂ ಲಿಂಗ ಬಿಡಬಹುದೇ ?" ಎಂದು ತಮ್ಮ ಬುದ್ಧಿವಂತಿಕೆಯನ್ನು ತೋರ್ಪಡಿಸಿದರು. ಅವರ ಮಾತು ಕೇಳಿ ಬೂದೀಶನು, "ಭಕ್ತರೆ, ಮೃಡನ ಶರಣರು ಸ್ವತಂತ್ರ ಧೀರರು. ಅವರ ನಡೆ ನುಡಿ, ರೀತಿ ನೀತಿಗಳೇ ಬೇರೆ, ಅವರನ್ನಾಡಿಕೊಳ್ಳುವದು ಉಚಿತವಲ್ಲ. ಕಾಲ, ಕರ್ಮ, ಮಾಯೆಗಳನ್ನು ಮೀರಿದ ಮಹಾತ್ಮರವರು. ಬಹು ವಿಧ ಲೀಲೆಗಳನ್ನಾಡಿ ತಮ್ಮ ಉಚ್ಚ ಮಟ್ಟವನ್ನು ವ್ಯಕ್ತಪಡಿಸಿದವರು. ಇಂಥವರಿಗೆ ನಿಂದೆ ಮಾಡಿದರೆ ಸೂರ್ಯನಿಗೆ ಮಣ್ಣು ತೂರಿದಂತಾಗುತ್ತದೆ." ಎಂದುಪದೇಶಿಸಲು ಎಲ್ಲರೂ ಸ್ತಬ್ಧರಾದರು.

ಆಗ ಬೂದೀಶನು ಜನರಿಗೆ ತಾನು ಮಡಿವಾಳರಂತೆ, ಮಡಿವಾಳರು ತನ್ನಂತೆ ಕಾಣುವ ಹಾಗೆ ಲೀಲೆಯನ್ನಾಡಿ ತೋರಿಸಿದನು. ಒಮ್ಮೆ ಇಬ್ಬರೂ ಬೂದೀಯೋಗಿಗಳೂ, ಒಮ್ಮೆ ಇಬ್ಬರೂ ಮಡಿವಾಳ ಯತಿಗಳೂ ಮತ್ತೊಮ್ಮೆ ಒಂದೇ ದೇಹದಲ್ಲಿ ತಾವಿಬ್ಬರೂ ಕಾಣಿಸುವಂತೆ ಲೀಲೆಯಾಡಿದರು. ಅವರ ಈ ಘನತರವಾದ ಪವಾಡವನ್ನು ನೋಡಿ ಜನರು ಚಪ್ಪಾಳೆಯಿಟ್ಟು ಹರ್ಷದೋರಿ ಅವರ ಲೀಲೆಗೆ ತಲೆದೂಗಿದರು. ಮಡಿವಾಳ ಯೋಗಿಗೆ ಗೌಪ್ಯವಾದ ಅಮಳೈಕ್ಯಲಿಂಗವಿತ್ತೆಂದು ಜನರು ತಿಳಿದು ಸುಮ್ಮನಾದರು. ಬೂದೀಶ ಮಡಿವಾಳರಿಬ್ಬರೂ ಹಠಯೋಗಿಗಳು, ಶಿವಯೋಗನಿಷ್ಠರು, ಸರ್ವಸಿದ್ಧಿಗಳನ್ನು ಪಡೆದವರು. ಬಹಳ ಲೀಲೆಗಳನ್ನಾಡಿ ತೋರಿಸಿದವರು. ಯೋಗದಲ್ಲಿ ಇಬ್ಬರೂ ಸಮಬಲರು. ಅವರಿಬ್ಬರ ಸಂತೋಷಕೂಟವು ಭಕ್ತರಿಗೆ ಭಾಗದೂಟವಾಯಿತ್ತು.

## ೧೦ನೆಯ ಸಂಧಿ

### ರೇಣುಕಾದ್ರಿ (ಎಲ್ಲಮ್ಮನ ಗುಡ್ಡ)

ಬೂದೀಶ್ವರನು ಅನುಷ್ಠಾನಕ್ಕೆ ಯೋಗ್ಯವಾದ ಏಕಾಂತ ಸ್ಥಲವನ್ನರಸುತ್ತ ರೇಣುಕಾದ್ರಿಗೆ ಬಂದನು. ಒಂದು ಗಿಡದ ಜುಡುಪಿನಲ್ಲಿ ಒಂದು ಗವಿಯು ಕಾಣಿಸಿತು. ಅವರಿಗೆ ಸಂತೋಷವಾಗಿ ಒಳ ಹೊಕ್ಕು ನೋಡಲು ಎರಡು ಚಿಕ್ಕ ಹುಲಿಯ ಮರಿಗಳು ಕಣ್ಣಿಗೆ ಬಿದ್ದವು. ಅವುಗಳ ತಾಯಿಯು ಬೇಟೆ

ಯಾಡಿಕೊಂಡು ಬರಲಿಕ್ಕೆ ಹೊರಗೆಹೋಗಿತ್ತು. ಋದೀಶನು ಆ ಎರಡೂ ಹುಲಿ ಮರಿಗಳನ್ನು ಕುರಿಮರಿಗಳಂತೆ ಎತ್ತಿಕೊಂಡು ಮುದ್ದಾಡಹತ್ತಿದನು. ಆ ಮರಿಗಳು ಶಿವಯೋಗಿಯ ಮಹಿಮೆಯನ್ನು ತಿಳಿದವೋ ಏನೋ ಎಂಬಂತೆ ತಮ್ಮ ಕ್ರೂರ ಸ್ವಭಾವವನ್ನು ಬಿಟ್ಟು ಆತನ ಮೈಮೆಲೆ ನೆಗೆದಾಡಲಾರಂಭಿಸಿದವು. ಆತನ ಹೊಳಪುಳ್ಳ ಕಂಗಳನ್ನೂ ಶಾಂತ ಮುಖಮುದ್ರೆಯನ್ನೂ ಕಂಡು ಆತನು ತಮ್ಮ ಅಜ್ಜನೆಂದೇ ಅವು ಭಾವಿಸಿದವು. ಹಸಿವು ತೃಷೆಗಳನ್ನು ಮರೆತವು. ತಮ್ಮನ್ನು ಪ್ರೇಮದಿಂದ ಸಾಕಿದ ತಾಯಿಯನ್ನೂ ಮರೆತಂತೆ ತೋರಿತು.

ಅಷ್ಟರಲ್ಲಿ ಮರಿಗಳಿಗೆ ಮೊಲೆಯುಣಿಸಬೇಕೆಂದು ಅವುಗಳ ತಾಯಿಯು ಅಲ್ಲಿಗೆ ಬಂದು ಮಕ್ಕಳು ಅಜ್ಜನೊಡನೆ ಚಕ್ಕಂದದಿಂದ ಆಡುತ್ತಿರುವದನ್ನು ಕಂಡು ತನ್ನ ಕ್ರೂರ ಸ್ವಭಾವವನ್ನು ತೊರೆದು ಬಾಲ ಗುಂಡಾಡಿಸುತ್ತ ತನ್ನ ತಂದೆಯೇ ಬಂದಿರುವನೋ ಏನೋ ಎಂಬಂತೆ ಶಿವಯೋಗಿಯ ಮುಂದೆ ಬಂದು ತಲೆಬಾಗಿ ನಿಂತಿತು. ಶಿವಯೋಗಿಯು ತಾಯಿಯ ತೊರೆದ ಮೊಲೆಗಳನ್ನು ಹಿಡಿದು ಮರಿಗಳಿಗೆ ಕುಡಿಸಿದನು. ಹುಲಿಯ ಬೆನ್ನಮೇಲೆ ಕೈಯಾಡಿಸಿ ಪಿತೃಸ್ನೇಹವನ್ನು ತೋರಿಸಿದನು. ಅದು "ನಾನು ನಿಮ್ಮ ಮಗಳೆಂಬ ಭಾವವನ್ನು ತಲೆದೂಗುತ್ತ ತನ್ನ ಮುಖಭಂಗಿಯಿಂದ ತೋರಿಸಿತು. ಆಗ ಯೋಗಿಗಳು, "ಮಗಳೇ, ನಾನು ಇನ್ನು ಹೋಗಿ ಬರುವೆನಮ್ಮಾ" ಎಂದು ಹೇಳಿ ಅನುಷ್ಠಾನಕ್ಕೆ ಬೇರೆ ಕಡೆಗೆ ಸಾಗಿದರು. ಆಗ ಹುಲಿದಾಯಿಯ ಕಣ್ಣುಗಳಲ್ಲಿ ನೀರು ಸುರಿಯಿತು. ತಾಯಿಯುಳುವದನ್ನು ನೋಡಿ ಮರಿಗಳು ಸಪ್ಪಗೆ ಮೋರೆ ಮಾಡಿ ನಿಂತುಕೊಂಡವು.

ಯೋಗಿಯು ಆ ಗುಡ್ಡದ ಬೇರೊಂದು ಸ್ಥಳದಲ್ಲಿ ಕೆಲಕಾಲ ಅನುಷ್ಠಾನ ಮಾಡಿದನು. ಆ ಗುಡ್ಡಕ್ಕೆ ರೇಣುಕಾದ್ರಿಯೆಂಬ ಹೆಸರು ಏಕೆ ಬಂದಿತೆಂಬುದನ್ನು ತಿಳಿದುಕೊಳ್ಳಲು ನಾವು ರೇಣುಕೆಯ (ಎಲ್ಲಮ್ಮನ) ಕಥೆಯನ್ನು ಇಲ್ಲಿ ತಿಳಿದುಕೊಳ್ಳಬೇಕಾಗುತ್ತದೆ. ಕೇಳಿರಿ. ಅಲ್ಲಿ ಜಮದಗ್ನಿ ಎಂಬ ಋಷಿಯು ತನ್ನ ತಾರುಣ್ಯದಲ್ಲಿ ತಪಸ್ಸನ್ನಾಚರಿಸುತ್ತ ಕೆಲ ದಿನ ವಾಸವಾಗಿದ್ದನು. ಆತನ ಕುಡಿಮೀಸೆ, ಸುಂದರ ವದನ, ನಗೆಮೊಗ, ನಿಡುಜಡೆ, ಯೋಗದಂಡಗಳು ತಾರುಣ್ಯಕ್ಕೆ ಒದು ತರದ ಬೆಡಗನ್ನುಂಟು ಮಾಡಿದ್ದವು. ಆತನು ಒಂದು ದಿನ ಸ್ನಾನಕ್ಕೆಂದು ಹೋದಾಗ ಅಲ್ಲಿಗೆ ಸೊಕ್ಕು ಜವ್ವನದ ಒಬ್ಬ ಸುಂದರಾಂಗನೆಯು ಕೊಡ ತೆಗೆದುಕೊಂಡು ನೀರು ತರಲಿಕ್ಕೆ ಆ ಸರೋವರಕ್ಕೆ ಬಂದಳು. ಆ ತರುಣಿ ಋಷಿಕುಮಾರನ ಚೆಲುವನ್ನು ನೋಡಿ ಮೋಹಪಾಶದಲ್ಲಿ ಬಿದ್ದಳು. ಋಷಿಯು ಇವಳ ಮನಸ್ಸಿನ ಸ್ಥಿತಿಯನ್ನರಿತು ತಾನೂ ಕಾಮಪೀಡಿತನಾದನು.

ಆಗ ಆತನು ಮನಸ್ಸಿನಲ್ಲಿ ಸ್ಥೈರ್ಯವನ್ನು ತಂದು ಕೊಂಡು "ವೀರ ರಮಣಿಯೇ, ನೀನಾರು ? ನೀರು ತರಲಿಕ್ಕೆ ಬಂದು ನನ್ನ ಕಡೆಗೆ ನಿನ್ನ ಪ್ರೇಮ ಕಟಾಕ್ಷವನ್ನು ಬೀರುತ್ತಿರುವೆಯಲ್ಲ ? ಕಾಂತೆಯೇ, ನಮ್ಮ ಗೊಡವೆ ಬೇಡ. ನಾವು ಋಷಿಗಳು. ಅರಣ್ಯವಾಸಿಗಳು. ನಿನ್ನ ಜೀವನವು ಅರಣ್ಯವಾಸಕ್ಕೆ ಒಗ್ಗದು. ಇರಲಿ ನೀನಾರು ?" ಎನ್ನಲು ಆಕೆಯು "ಮುನಿವರ ನಾನು ಶ್ರುತಕೀರ್ತಿವರ್ಮ ರಾಜನ ಮಗಳಾದ ರೇಣುಕೆಯು. ಏನು ದೈವದ ಘಟನೆಯಿದ್ದಿತೋ ತಿಳಿಯದು. ನಾವಿಬ್ಬರೂ ಇಲ್ಲಿ ಕೂಡಿದ್ದೇವೆ. ಜಲದೇವಿ ಸಾಕ್ಷಿಯಾಗಿ ನನ್ನ ಲಗ್ನವಾಗು." ಎಂದು ಬೇಡಿಕೊಂಡಳು.

ಅದಕ್ಕೆ ಋಷಿಕುಮಾರನು, "ನೀನು ರಾಜಕುಮಾರಿ. ನಾನು ಮುನಿಕುಮಾರ. ನೀನು ಅರಮನೆಯಲ್ಲಿರತಕ್ಕವಳು, ನಾನು ಪರ್ಣಕುಟೀರದಲ್ಲಿರತಕ್ಕವನು, ನೀನು ಜಗನ್ಮೋಹಿನಿ, ನಾನು ಜಪ ಮಾಡುವ ಸನ್ಯಾಸಿ. ನೀನು ಲಗ್ನವಾದರೆ ಮಂದಿ ನಗದಿರುವರೇ ?" ಎಂದನು. ಅದಕ್ಕೆ ಅವಳು "ಮುನಿವರ, ನಾನು ಕಾಮತಾಪವನ್ನು ತಾಳಲಾರೆನು. ನನಗೆ ಅರಮನೆಯ ಸುಖ ಬೇಡ, ನಿನ್ನೊಡನೆ ಸುಖವಾಗಿ ಬಾಳುವೆನು. ನಿನ್ನನ್ನು ನೆರಳಿನಂತೆ ಅನುಸರಿಸುವೆನು, ಆದುದರಿಂದ ನನ್ನ ಪಾಣಿಗ್ರಹಣ ಮಾಡೆಂದು ಬಹು ದೈನ್ಯದಿಂದ ಬೇಡಿಕೊಳ್ಳಲು ಮುನಿಯು ಅವಳಿಗೆ "ಒಳ್ಳೇದು, ನೀನು ಒಂದು ವ್ರತವನ್ನು ಪಾಲಿಸಲು ಒಪ್ಪುವುದಾದರೆ ನಿನ್ನ ಪಾಣಿಗ್ರಹಣ ಮಾಡುವೆನು. ಕೇಳು, ನೀನು ಪತಿಭಕ್ತಿ ಪರಾಯಣೆಯಾಗಿ ಈ ಉಸುಕಿನ ಕೊಡದಲ್ಲಿ ನೀರು ಹೊತ್ತು ದಿನಾಲು ನನ್ನ ಆಶ್ರಮಕ್ಕೆ ತರಬೇಕು. ನಿನ್ನ ಮನಸ್ಸಿನಲ್ಲಿ ಅನ್ಯ ಪುರುಷನ ಬಗ್ಗೆ ಕಾಮುಕ ಭಾವನೆಯು ಒಡಮೂಡಿವರೆ ಅಥವಾ ನೀನು ನಿನ್ನ ಸತಿ ಧರ್ಮಕ್ಕೆ ಕುಂದು ತಂದುಕೊಂಡರೆ ಅಂದೇ ಆ ಕೊಡವು ಒಡೆದು ಹೋಗುವದು. ಅದೇ ನಿನ್ನ ದುರ್ನಡತೆಗೆ ಸಾಕ್ಷಿಯಾಗುವದು. ಅಂದೇ ನಿನ್ನ ಶಿರಚ್ಛೇದವೂ ಆಗುವದು. ಇದಕ್ಕೆ ನಿನ್ನ ಒಪ್ಪಿಗೆಯೇ ?" ಎಂದು ಕೇಳಿದನು.

ಈ ಕರಾರನ್ನು ಕೇಳಿ ಅವಳೆದೆಯು ಝಲ್ಲೆಂದಿತಾದರೂ ಪ್ರೇಮದ ನಲ್ಲನಾದ ಆ ಋಷಿಕುಮಾರನನ್ನು ಬಿಡಲಿಕ್ಕೆ ಮನಸ್ಸೊಪ್ಪದೆ ಆ ಕರಾರಿಗೆ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡಳು. ಗಂಧರ್ವ ವಿಧಿಯಿಂದ ಅವರೀರ್ವರ ಲಗ್ನವಾಯಿತು. ಮುಂದೆ ಅವರ ಸಂಸಾರವು ಸೊಗಸಾಗಿ ನಡೆದು ರೇಣುಕೆಗೆ ಮೂರು ಗಂಡುಮಕ್ಕಳು ಹುಟ್ಟಿದರು.

ಎಂದಿನಂತೆ ಅವಳು ತನ್ನ ಉಸುಕಿನ ಕೊಡ ತೆಗೆದುಕೊಂಡು ನೀರು ತರಲು ಸರೋವರಕ್ಕೆ ಹೋದಾಗ ಒಬ್ಬ ಗಂಧರ್ವರಾಜನು ತನ್ನ ವಿಲಾಸಿನಿಯರೊಂದಿಗೆ ಜಲಕ್ರೀಡೆಯಾಡುವದನ್ನು ಕಂಡು ಅವಳ ಮನಸ್ಸು ಚಂಚಲವಾಗಿ ತಾನೂ ಅವನೊಡನೆ ಜಲಕ್ರೀಡೆಯಾಡಿದರೆ ಚೆನ್ನಾಗಿಯಾಗುತ್ತಿತ್ತಲ್ಲ! ಎಂಬ ಭಾವನೆಯು ಒಡಮೂಡಿತು. ಆಗ ಅವಳ ಎದೆಯು ಡವಡವ ಹಾರಹತ್ತಿತು. ನೀರು ತುಂಬಿ ಕೊಡವನ್ನು ಹೊತ್ತುಕೊಳ್ಳಲು ನೀರೆಲ್ಲ ಸೋರಿಹೋಯಿತು. ಒಡಕ ಕೊಡವನ್ನು ಹಿಡಿದುಕೊಂಡು ಮುಖ ಕಳೆಗುಂದಿ ಬರುವ ಮಡದಿಯನ್ನು ಜಮದಗ್ನಿಯು ನೋಡಿದನು. ಆಕೆಯು ತಲೆತಗ್ಗಿಸಿಕೊಂಡು ಆತನ ಮುಂದೆ ನಿಂತಳು. ಆ ಮುನಿಯು "ರೇಣುಕೆ, ನಿನ್ನ ಚಂಚಲೆ ಸ್ವಭಾವವನ್ನು ನಾನು ಮೊದಲೇ ಜ್ಞಾನ ದೃಷ್ಟಿಯಿಂದ ಅರಿತಿದ್ದೆ. ನಿನ್ನ ನೆಮ್ಮದಿಗಾಗಿ ನಿನ್ನ ಲಗ್ನವಾದೆ. ನಡತೆಹೀನಳೇ, ವ್ರತಭಂಗ ಮಾಡಿದ್ದಕ್ಕೆ ನಾಚಿಕೆ ಬರಲಿಲ್ಲವೇ ? ಎಂದು ಹೀಯಾಳಿಸಿದನು.

ಆಮೇಲೆ ಜಮದಗ್ನಿಯು ರೇಣುಕೆಗೆ "ನಿನ್ನ ಕೊನೆಯ ಬಯಕೆ ಏನಿದೆ ಹೇಳು. ಈಗ ನಿನ್ನ ಶಿರಚ್ಛೇದವಾಗಲೇ ಬೇಕಾಗಿದೆ" ಎನ್ನಲು ಆಕೆಯು ಮುನಿವರ, ನನಗೆ ಬೇರಾವ ಬಯಕೆಯೂ ಇಲ್ಲ. ತಮ್ಮ ಪಾದತಳದಲ್ಲಿ ಸಾಯುವುದೊಂದೇ ನನ್ನಿಚ್ಛೆ" ಎಂದಳು. ಆಗ ಋಷಿಯು ತನ್ನ ಹಿರಿಯ ಮಗನಿಗೆ ಶಿರಚ್ಛೇದ ಮಾಡೆಂದು ಆಜ್ಞಾಪಿಸಲು ಆತನು "ನನಗೆ ಮಾತೃಹತ್ಯಾ ದೋಷವು ತಟ್ಟುವುದರಿಂದ ಆ ಕಾರ್ಯವು ನನ್ನಿಂದ ಸರ್ವಥಾ ಆಗದೆಂದನು. ಆಗ ಋಷಿಯು ಎರಡನೆಯ ಮಗನಿಗೆ ಆಜ್ಞಾಪಿಸಲು ಆತನು "ನನ್ನವ್ವನಿಗೆ ಕರುಣೆ ತೋರಿಸಿ ಕ್ಷಮಿಸಬೇಕೆಂದು" ಅಂಗಲಾಚಿ ಬೇಡಿಕೊಳ್ಳಹತ್ತಿದನು. ಈತನು ಹೇಡಿಯೆಂದು ತಿಳಿದು ತನ್ನ ಕಡೆಯ ಮಗನಾದ ಪರಶುರಾಮನಿಗೆ ಆಜ್ಞಾಪಿಸಲು ಆತನು ವಿಲಂಬ ಮಾಡದೆ ತನ್ನ ಕೊಡಲಿಯಿಂದ ತಾಯಿಯ ಕತ್ತನ್ನು ಕತ್ತರಿಸಿದನು.

ಕಡೆಯಮಗನು ತನ್ನ ಆಜ್ಞೆಯನ್ನು ಪಾಲಿಸಿದನೆಂದು ಋಷಿಗೆ ಸಂತೋಷವಾಯಿತು. ಆತನು ಪರಶುರಾಮನನ್ನು ಕುರಿತು "ಮಗನೇ, ನೀನು ನನ್ನ ಆಜ್ಞೆಯನ್ನು ಪಾಲಿಸಲೋಸುಗ ನಿನ್ನ ಹಡೆದತಾಯಿಯ ಕೊರಳನ್ನು ಕತ್ತರಿಸಿದೆ. ನಿನ್ನ ಆಜ್ಞಾಧಾರಕ ಗುಣಕ್ಕೆ ಮೆಚ್ಚಿದ್ದೇನೆ. ನೀನು ಬೇಕಾದದ್ದೊಂದು ವರವನ್ನು ಕೇಳಿಕೋ. ದಯಪಾಲಿಸುವೆನೆಂ"ದನು. ಅದಕ್ಕೆ ಪರಶುರಾಮನು ತನ್ನ ತಾಯಿ ರೇಣುಕೆಯು ಪುನಃ ಬದುಕುವಂತೆ ಮಾಡೆಂದು ಬೇಡಿಕೊಂಡನು.

ವಚನಕೊಟ್ಟಂತೆ ಜಮದಗ್ನಿಯು ಕಮಂಡಲಿನಿಂದ ನೀರು ಸಿಂಪಡಿಸಲು ರೇಣುಕೆಯು ಜೀವ ತಿರುಗಿತು. ಆಕೆಯು ತಲೆ ತಗ್ಗಿಸಿಕೊಂಡು ಗಂಡನ ಮುಂದೆ ನಿಂತಳು. ಆಗ ಆತನು "ರೇಣುಕೆ, ಕರ್ಮಫಲವನ್ನು ಭೋಗಿಸಿಯೇ ತೀರ ಬೇಕಾಗುತ್ತದೆ. ನಿನಗೆ ಕುಷ್ಟ ರೋಗವು ಪ್ರಾಪ್ತವಾಗುವದು. ನೀನು ಈ ಸ್ಥಳವನ್ನು ಬಿಟ್ಟು ಬೇರೆಯೆಲ್ಲಿಯಾದರೂ ಹೋಗಿಬಿಡು." ಎಂದು ಆಜ್ಞಾಪಿಸಿದನು. ಅವಳ ಕೈಕಾಲು ಬೆರಳುಗಳು ಮೊಂಡವಾದವು. ಕೀವು ರಕ್ತಗಳ ದುರ್ಗಂಧವು ಇಡಗಿ ಬಿಟ್ಟಿತು. ಇಂಥ ಸ್ಥಿತಿಯಲ್ಲಿ ಅವಳು ದೂರದಿಂದಲೇ ಋಷಿ ಪಾದಕ್ಕೆ ವಂದನೆ ಮಾಡಿ ತನ್ನ ಕುಟಿರವನ್ನು ಬಿಟ್ಟು ಬೇರೆ ಕಡೆಗೆ ಹೊರಟು ಹೋದಳು. ಅವಳು ಕಷ್ಟಬಡುತ್ತ ಹಳ್ಳಕೊಳ್ಳಗಳನ್ನು ದಾಟುತ್ತ ಕಲ್ಲು ಮುಳ್ಳುಗಳನ್ನು ತುಳಿಯುತ್ತ, ಹಸಿವು, ನಿದ್ರೆ, ನೀರಡಿಕೆಗಳ ಪರಿವೆಯಿಲ್ಲದೆ ಕೊನೆಗೆ ಏಕಲಿಂಗಯ್ಯನೆಂಬ ಯೋಗಿಯು ವಾಸಿಸುತ್ತಿದ್ದ ಆಶ್ರಮದ ಬಳಿಗೆ ಬಂದು ತನ್ನ ತಂದೆಯಂತಿದ್ದ ಆ ಮುನಿಗೆ ಸಾಷ್ಟಾಂಗವೆರಗಿ ತನ್ನ ಸಾದ್ಯಂತ ವೃತ್ತಾಂತವನ್ನು ಅವನಿಗೆ ನಿವೇದಿಸಿದಳು.

ಆಗ ಏಕಲಿಂಗಯೋಗಿಯು, "ಮಗಳೇ ನೀನು ನನ್ನನ್ನು ತಂದೆಯೆಂದು ನಂಬಿರುವೆ. ನಾನು ನಿನ್ನನ್ನು ಮಗಳೆಂದು ತಿಳಿದು ರಕ್ಷಿಸುವೆನು. ಚಿಂತೆಯನ್ನು ಬಿಡಮ್ಮಾ. ಹಿಂದಾದುದನ್ನೆಲ್ಲ ಮರೆತು ಬಿಡು. ಮುಂದೆ ನಿನ್ನ ಭವಿಷ್ಯವು ಶಿವನ ಕೃಪೆಯಿಂದ ಉಜ್ವಲವಾಗುವದು, ನಂಬಿ ಬಂದ ಮಗಳನ್ನು ತಂದೆಯು ಸಲಹಲಾರನೇ ?" ಎಂದು ಹೇಳಿ ಆಕೆಗೆ "ಓಂ ನಮಶ್ಶಿವಾಯ" ಎಂಬ ಷಡಕ್ಷರ ಮಂತ್ರವನ್ನು ಸದಾ ಜಪಿಸ ಹೇಳಿದನು. ಅದನ್ನು ಸಾಧಿಸಿದರೆ ನೀನು ಶಾಂಭವಿಯಂತೆ ಲೋಕಪೂಜ್ಯಳಾಗುವೆಯೆಂದು ಹರಸಿದನು. ಆಕೆಯು ಪದ್ಮಾಸನ ಹಾಕಿ ದೃಢ ಭಕ್ತಿಯಿಂದ ಆ ಮಂತ್ರವನ್ನು ಜಪಿಸಲು ಶಿವನು ಪ್ರತ್ಯಕ್ಷನಾದನು. ಆಗ ಅವಳ ಹುಣ್ಣುಗಳೆಲ್ಲ ಮಾಯವಾದವು. ಮುಖ ಕಾಂತಿಯು ಲಕಲಕ ಹೊಳೆಯ ಹತ್ತಿತು. ಋಷಿಯ ಶಾಪವು ಮುಕ್ತವಾಯಿತು. ಶಿವನು ಆಕೆಗೆ "ಷಡಕ್ಷರ ಮಂತ್ರ ಜಪದ ಮಹಿಮೆಯಿಂದ ನಿನ್ನ ಕೀರ್ತಿಯು ಆಚಂದ್ರಾರ್ಕವಾಗಿ ಮೊಳಗುವದು. ಎಲ್ಲಮ್ಮನೆಂಬ ಹೆಸರಿನಿಂದ ನಿನ್ನ ಯಶೋದುಂದುಭಿಯು ಮೊಳಗುವದು. ನಿನ್ನ ಜಾತ್ರೆಯು ಪ್ರತಿದಿನ ನಡೆಯುವದು." ಎಂದು ಅನುಗ್ರಹಿಸಿ ಅಂತರ್ಧಾನನಾದನು.

ಮುಂದೆ ಎಲ್ಲಮ್ಮನು ಸಾಯಲು ಅವಳ ಭಕ್ತರು ಏಳು ಕೊಳ್ಳದ ಮಧ್ಯದಲ್ಲಿ ಅವಳಿಗೆ ಒಂದು ದೇವಾಲಯವನ್ನು ಕಟ್ಟಿಸಿ ಅದರಲ್ಲಿ ಅವಳ ಮೂರ್ತಿಯನ್ನು ಸ್ಥಾಪಿಸಿದರು. ಅವಳ ಭಕ್ತರು "ಏಳು ಕೊಳ್ಳದ

ಎಲ್ಲಮ್ಮಾ, ನಿನಗೆ ಉಧೋ ಉಧೋ" ಎಂದು ಉದ್ಘೋಷಿಸುತ್ತ ಅವಳ ಯಾತ್ರೆಯನ್ನು ಮಾಡುವರು. ವಿಶೇಷವಾಗಿ ಅವಳ ಜಾತ್ರೆಗೆ ಕೀಳು ತರ ಗತಿಯ ಜನಗಳೇ ವಿಶೇಷವಾಗಿ ಹೋಗುತ್ತಿರುತ್ತಾರೆ.

ಬೂದಿಯೋಗಿಯು ರೇಣುಕಾದ್ರಿಯಲ್ಲಿ ಒಂದು ವರ್ಷ ಕಳೆದ ಬಳಿಕ ನಾಡಿಗೆಲ್ಲ ಬರಗಾಲ ಬಿದ್ದಿತು. ಹೊಳೆ, ಹಳ್ಳ, ಕೆರೆ, ಭಾವಿಗಳೆಲ್ಲ ಬತ್ತಿದವು. ನೀರು ಸಿಗದೆ ಎಷ್ಟೋ ದನಕರುಗಳೂ ಮೃಗಪಕ್ಷಿಗಳೂ ಸತ್ತು ಹೋದವು. ಎಲ್ಲಮ್ಮನ ಜಾತ್ರೆಗೆ ಬಂದ ಅನೇಕ ಜನರು ಕೊಳಚೆ ನೀರು ಕುಡಿದು ಮಾರಿಕಾ ಬಂದು ದಾರಿಯಲ್ಲಿ ಬಿದ್ದು ಸತ್ತರು. ಎತ್ತ ನೋಡಿದತ್ತ ಹಾಹಾಕಾರವು ಪ್ರಾರಂಭವಾಯಿತು. ಅಷ್ಟರಲ್ಲಿ ಕೆಲವು ಜನಗಳು ಆಕಸ್ಮಾತ್ ಬಂದು ಗವಿಯ ಹೊರಬದಿಯಲ್ಲಿ ಕುಳಿತ ಬೂದಿಯೋಗಿಯನ್ನು ಕಂಡು ಸಾಷ್ಟಾಂಗ ಹಾಕಿ, ತಂದೆಯೇ, ನಾವು ಯಾವ ಪಾಪ ಮಾಡಿರುವೆವೋ ತಿಳಿಯದು. ಮಳೆಯಂತೂ ಬರಲೊಲ್ಲದು. ನಿತ್ಯ ಪ್ರಾಣಹಾನಿಯು ಮಿತಿಮೀರಹತ್ತಿದೆ. ಮಳೆಯನ್ನು ಕರುಣಿಸಬೇಕೆಂ"ದು ಬೇಡಿಕೊಳ್ಳಲು ಆವರು ಬಂದ ಜನರಿಗೆ "ಶಿವನು ನಾಳೆಗೇ ನಿಮಗೆ ಸಾಕುಸಾಕಾಗುವಷ್ಟು ಮಳೆ ಕೊಡುವನೆಂದು ಹೇಳಿದರು. ಆ ಪ್ರಕಾರ ಮಳೆಯಾಗಿ ಬತ್ತಿದ ಹೊಳೆ ಹಳ್ಳಗಳು ನೀರಿನಿಂದ ಹೊರಸೂಸಿ ಹರಿಯ ಹತ್ತಿದವು. ಎಲ್ಲಮ್ಮನ ಜಾತ್ರೆಯು ವೈಭವದಿಂದ ನೆರವೇರಿತು. ಜನರೆಲ್ಲರೂ ಶಿವಯೋಗಿಯ ಲೀಲೆಯನ್ನು ಹಾಡಿಹರಿಸಿದರು.

ಎಲ್ಲಮ್ಮನ ಗುಡ್ಡದ ಸಮೀಪದಲ್ಲಿರುವ ಸಿದ್ಧೇಶ್ವರ ಕೊಳ್ಳದಲ್ಲಿ ಬೂದೀಶ್ವರನು ಶಿವರಾತ್ರಿಯನ್ನು ಕಳೆಯಬೇಕೆಂದು ನಿರ್ಧರಿಸಿದನು. ಅನೇಕ ಭಕ್ತ ಜನರು ಅವರೆಡೆಗೆ ಜಾಗರಣೆ ಮಾಡಲು ಬಂದರು. ಜನರು ಭಕ್ತಿಯಿಂದ ಮಲ್ಲಿಕಾರ್ಜುನ ಸ್ವಾಮಿಯ ಭಜನೆ ಮಾಡಿದರು. ಯೋಗಿಗಳು ಒಮ್ಮಿಂದೊಮ್ಮೆಲೇ, "ಭಕ್ತರೇ, ಮಲ್ಲಿಕಾರ್ಜುನನ ದರ್ಶನಕ್ಕಾಗಿ ಶ್ರೀಗಿರಿಗೆ ಹೋಗೋಣ ನಡೆಯಿರೆ"ಂದರು. ಎಲ್ಲಿಯ ಶ್ರೀಗಿರಿ! ಎಲ್ಲಿಯ ಸಿದ್ಧನಕೊಳ್ಳ! ಜನರು ಆಶ್ಚರ್ಯಬಟ್ಟರು. ಅಷ್ಟರಲ್ಲಿ ಶ್ರೀಗಿರಿಯ ಎಲ್ಲ ದೃಶ್ಯಗಳು ಏಕಾಏಕಿ ಅವರ ಕಣ್ಮುಂದೆ ಕಟ್ಟಿದಂತಾದವು. ಮುಂದೆ ಕೆಲ ನಿಮಿಷಗಳಲ್ಲಿ ಆ ದೃಶ್ಯಗಳೆಲ್ಲ ಅದೃಶ್ಯವಾದವು. ಈ ಲೀಲೆಯನ್ನು ಜನಗಳು ಮನವಾರೆ ಕೊಂಡಾಡಿದರು.

# ೧೧ನೆಯ ಸಂಧಿ

## ಬೆಂಗಳೂರು

ಶ್ರೀ ಬೂದಿಯೋಗಿಯು ಸಂಚಾರ ಮಾಡುತ್ತ ಬೆಂಗಳೂರಿಗೆ ದಯ ಮಾಡಿಸಿದನು. ಬೆಂಗಳೂರ ನಗರವನ್ನು ಕಟ್ಟಿಸಿದ ಕೆಂಪೇಗೌಡನು ಮಹಾ ಯೋಗಿಗಳು ತನ್ನೂರಿಗೆ ಬಂದ ಸುದ್ದಿ ಕೇಳಿ ಅವರನ್ನು ಒಳ್ಳೇ ಸಂಭ್ರಮದಿಂದ ಸ್ವಾಗತಪೂರ್ವಕವಾಗಿ ಬರಮಾಡಿಕೊಂಡು ಬಹುಭಕ್ತಿಭಾವದಿಂದ ಅವರ ಆದರ ಸತ್ಕಾರಗಳನ್ನು ಮಾಡಿದನು. ಯೋಗಿಯ ಇಚ್ಛೆಯಂತೆ ಕೆಂಪೇಗೌಡನು ಗಣ ಪರ್ವವನ್ನೇರ್ಪಡಿಸಿ ಜಂಗಮರಿಂದ ಹಿಡಿದು ತಿರುಕರವರೆಗೂ ಸರ್ವಜನರಿಗೆ ಪ್ರಸಾದ ತೃಪ್ತಿಪಡಿಸಿದನು. ಅಲ್ಲಿ ಶ್ರೀಗಳು ಕೆಲ ದಿನ ಪೂಜಾನಂದದಲ್ಲಿ ಕಳೆದು ನಿನ್ನ ನಗರವು ಶೀಘ್ರವಾಗಿ ಬೆಳೆದು ಸೌಂದರ್ಯ ಹಾಗೂ ವೈಭವ ಶಾಲಿಯಾಗಲೆಂದೂ ಅದರೊಡನೆ ನಿನ್ನ ಕೀರ್ತಿಯೂ ಘನತೆಯೂ ಅಭಿವೃದ್ಧಿ ಹೊಂದಲೆಂದೂ ಆಶೀರ್ವದಿಸಿ ಹೊರಟು ಹೋದರು.

ಬೆಂಗಳೂರಿನಲ್ಲಿ ಸಂಗಪ್ಪಸೆಟ್ಟಿಯೆಂಬ ಜಂಗಮಭಕ್ತಿಯುಳ್ಳ ಸದ್ಭಕ್ತ ನಿದ್ದನು. ಆದರೆ ದುರ್ದೈವದಿಂದ ಆತನ ಕೀರ್ತಿಗೆ ಕಲಂಕ ಹಚ್ಚುವ ಬಸವಸೆಟ್ಟಿ ಯೆಂಬ ಕುಪುತ್ರನಿದ್ದುದರಿಂದ ಸಂಗಪ್ಪನು ಬಹಳೇ ನೊಂದುಕೊಂಡಿದ್ದನು. ಮಗನು ಮನಬಲ್ಲಂತೆ ಆಚರಿಸಿ ತನ್ನ ತಂದೆಯ ಆಸ್ತಿಯ ಬಹುಭಾಗವನ್ನೆಲ್ಲ ದುರ್ವ್ಯಸನಗಳಿಗಾಗಿ ಹಾಳು ಮಾಡಿದ್ದನು. ತನ್ನ ಹೆಂಡತಿಯ ವಸ್ತ್ರ ಒಡವೆ ಗಳನ್ನೆಲ್ಲ ಮಾರಿಬಿಟ್ಟಿದ್ದನು. ಆದರಿಂದ ಸಂಗಪ್ಪನ ಮನಸ್ಸಿನ ಶಾಂತಿಯು ಕದಡಿ ಹೋಗಿತ್ತು. ಏನು ಮಾಡಬೇಕೆಂಬುದು ತಿಳಿಯದಂತಾಯಿತ್ತು. ಅಷ್ಟ ರಲ್ಲಿ ಶ್ರೀ ಬೂದಿಯೋಗಿಗಳು ಬೆಂಗಳೂರಿಗೆ ಬಂದ ಸುದ್ದಿ ಕೇಳಿ ಆತನು ಧಾವಿಸಿ ಬಂದು ಅವರಡಿಗೆ ಪೊಡಮಟ್ಟು, "ಬುದ್ಧೀ, ನನ್ನ ಮಗನಾದ ಬಸೆಟ್ಟಿಯು ದುರ್ವ್ಯಸನಿಯೂ ನೀತಿಭ್ರಷ್ಟನೂ ಆಗಿ ಮನೆತನದ ಮುಕ್ಕಾಲು ಪಾಲು ಹಣ ಕಳೆದು ಬಿಟ್ಟಿದ್ದಾನೆ. ಇನ್ನು ಸ್ವಲ್ಪ ದಿನ ಬಿಟ್ಟರೆ ನನ್ನ ಸರ್ವಸ್ವವೆಲ್ಲ ಹಾಳಾಗುವದು. ತಾವು ದಯವಿಟ್ಟು ಆತನಿಗೆ ಬುದ್ಧಿ ಹೇಳಿ ದಾರಿಗೆ ಹಚ್ಚ ಬೇಕೆಂದು" ಬಲು ಅಂಗಲಾಚಿ ಬೇಡಿಕೊಂಡನು.

ಯೋಗಿಗಳು ಆ ಸದ್ಭಕ್ತನ ಗೋಳನ್ನು ಕೇಳಿ ಆ ಬಸವಸೆಟ್ಟಿಯನ್ನು ಕರೆ ಯಿಸಿಕೊಂಡು ಅವನನ್ನು ದಿಟ್ಟಿಸಿ ನೋಡಲಾಗಿ ಅವನ ದುರ್ಗುಣಗಳೆಷ್ಟೋ



ಮೂರನೆಯ ಪಟ್ಟಾಧಿಕಾರಿಗಳಾದ

ಶ್ರೀ ಮ. ನಿ. ಪ್ರ. ಪಟ್ಟದಾರ್ಯಸ್ವಾಮಿಗಳು

ಅವರ ದೃಷ್ಟಿಪರುಷದಿಂದ ದೂರಾದವು. ಪೂಜ್ಯರು ಅವನ ಮೈದಡವಿ ತಲೆಯ ಮೇಲೆ ಕೈಯಿಟ್ಟು "ತರುಳಾ, ದುಷ್ಟರ ಸಂಗದಿಂದ ನೀನು ಕೆಟ್ಟಿರುವೆ. ನಿಜ ವಾಗಿ ನೀನು ಸರಳ ಹೃದಯನಿರುವೆ. ತಂದೆ ಗಳಿಸಿದ ಹಣವನ್ನೆಲ್ಲ ಹಾಳು ಮಾಡಿ ಮುಪ್ಪಿನ ತಾಯ್ತಂದೆಗಳನ್ನು ದುಃಖಕ್ಕೀಡು ಮಾಡಬೇಕೆಂದಿರುವೆಯಾ? ಶಿವನು ಕೊಟ್ಟ ತನುವನ್ನು ಗುರು ಲಿಂಗ ಜಂಗಮ ಸೇವೆಗರ್ಪಿಸದೆ ದುರ್ವ್ಯಸನ ಗಳಿಗೆ ಒಪ್ಪಿಸಿ ಬಿಟ್ಟಿರುವೆ. ಲಿಂಗಧಾರಿಯಾದ ನಿನಗೆ ಇದು ಶೋಭೆಯೇ ? ಆದದ್ದಾಯಿತು ಇನ್ನುಮೇಲಾದರೂ ನೀನು ದುಷ್ಟರ ಸಂಗ ಬಿಡು. ಸತ್ಯ ಶರಣರ ಸಂಗ ಹಿಡಿ. ನಿನ್ನ ಮನೆತನಕ್ಕೆ ಕೀರ್ತಿ ತಂದು ತಾಯ್ತಂದೆಗಳನ್ನು ಸಂತೋಷಗೊಳಿಸು" ಎನ್ನಲು ಅವರ ಪ್ರಸಾದವಾಣಿಯು ಅವನ ಮನಸ್ಸಿನ ಮೇಲೆ ಚೆನ್ನಾಗಿ ಬಿಂಬಿಸಿ ಪಶ್ಚಾತ್ತಾಪದಿಂದ ಬೆಂದು ಅಲ್ಲಿಂದ ಕಾಯಕ ದಾಸೋಹಿಯಾಗಿ ಕಾಲ ಕಳೆದು ತಾಯ್ತಂದೆಗಳ ಪ್ರೇಮಕ್ಕೆ ಪಾತ್ರನಾದನು.

## ಸಿದ್ಧಗಂಗಾ

ಮುಂದೆ ಬೆಂಗಳೂರಿನಿಂದ ಶಿವಯೋಗಿಯು ಸಿದ್ಧಗಂಗಾ ಕ್ಷೇತ್ರಕ್ಕೆ ದಯ ಮಾಡಿಸಿ ಅಲ್ಲಿ ಕೆಲದಿನವಿದ್ದು ಒಂದು ದಿನ ಭಕ್ತರನ್ನು ಕುರಿತು "ನಾವು ಶಿವ ಗಂಗಾ ಕ್ಷೇತ್ರಕ್ಕೆ ಹೋಗೋಣ" ಎಂದು ಸೂಚಿಸಿದರು. ಅದಕ್ಕೆ ಭಕ್ತರೆಲ್ಲರೂ ಸಂತೋಷದಿಂದ ಒಪ್ಪಿದರು. ಆದರೆ ಬಹಳವೃದ್ಧನಾದ ನಂಜುಂಡಾರ್ಯ ನೆಂಬವನು ಬುದ್ಧೀ ನಾನು ಬಹಳ ಮುದುಕನಾಗಿರುವೆ ನನಗೂ ಶಿವಗಂಗಾ ಕ್ಷೇತ್ರವನ್ನು ನೋಡಬೇಕೆಂಬ ಹೆಬ್ಬಯಕೆಯುಂಟಾಗಿದೆ. ನನಗೆ ಪ್ರವಾಸ ತ್ರಾಸ ವಾಗುವದು, ಏನು ಮಾಡಲಿ ?" ಎಂದು ಕೇಳಲು ಯೋಗಿಗಳು "ನಂಜುಂ ಡಯ್ಯಾ, ಚಿಂತಿಸಬೇಡ. ಶಿವನು ಆಯಾಸವಿಲ್ಲದೆ ನಿನ್ನನ್ನಲ್ಲಿಗೆ ಕರೆದೊಯ್ಯು ವನು. ಎಂದು ಹೇಳಿ ಎಲ್ಲ ಭಕ್ತರನ್ನೂ ತನ್ನ ಸುತ್ತಲು ನೆರಹಿ ಒಂದೆರಡು ನಿಮಿಷ ಎಲ್ಲರೂ ಕಣ್ಣು ಮುಚ್ಚಿಕೊಂಡು ನಿಲ್ಲಿರೆಂದು ಆಜ್ಞಾಪಿಸಿ ತಾವು "ಹರ ಹರ ಮಹಾದೇವ, ಶಿವನೇ ಬಸವಾ ಎಂದು ಜಯಘೋಷ ಮಾಡಿದರು. ಅನಂತರ ಆಕಾಶಮಾರ್ಗದಿಂದ ಅವರೆಲ್ಲರನ್ನು ಶಿವಗಂಗಾ ಕ್ಷೇತ್ರಕ್ಕಿಳಿಸಿ ಕಣ್ಣು ತೆರೆಯಿರಿ" ಎಂದು ಆಜ್ಞಾಪಿಸಿದರು. ತಾವು ಸಿದ್ಧಗಂಗೆಯನ್ನು ಬಿಟ್ಟು ಶಿವ ಗಂಗಾ ಕ್ಷೇತ್ರಕ್ಕೆ ಹೇಗೆ ಬಂದೆವೆಂಬುದು ಭಕ್ತರಿಗೆ ತಿಳಿಯದಾಯಿತು. ಶಿವಯೋ ಗಿಯು ಯಾವ ಮಂತ್ರ ಮಾಟ ಮಾಡಿದನೋ ! ಎಂದು ವಿಸ್ಮಯಬಟ್ಟರು.

## ಧಾರವಾಡ

ಬಳಿಕ ಯೋಗಿಗಳು ಧಾರವಾಡಕ್ಕೆ ಬಂದರು. ಭಕ್ತನು ಅವರನ್ನು ಆದರದಿಂದ ಬರಮಾಡಿಕೊಂಡು ಅವರಿಗಾಗಿ ಒಂದು ಚಿಕ್ಕ ಆಶ್ರಮವನ್ನು ವಿರಚಿಸಿದರು. ಅಲ್ಲಿ ದಿನಾಲು ಪ್ರವಚನವು ಸಾಗುತ್ತಿತ್ತು. ಜನರು ಬಂದು ಯೋಗಿದರ್ಶನ ಹೊಂದಿ ಆಶೀರ್ವಾದ ಪಡೆದು ತೆರಳುತ್ತಿದ್ದರು. ಒಂದು ದಿನ ಶಿವಯೋಗಿಗಳು ಧಾರವಾಡದ ಒಂದು ಬೀದಿ ಹಿಡಿದು ಸಾಗಿರುವಾಗ ಬಾಬಣ್ಣನೆಂಬ ಮುಗ್ಧ ಭಕ್ತನನ್ನು ಪೋಲೀಸರು ನಡುವಿಗೆ ಹಗ್ಗ ಕಟ್ಟಿ ಬೇಡಿ ಹಾಕಿ ವಧಸ್ಥಳಕ್ಕೆ ಒಯ್ಯುತ್ತಿರುವುದನ್ನು ಕಂಡರು. ಆತನ ಹಿಂದೆ ಆತನ ಕುಟುಂಬದ ಜನರು ಕಣ್ಣೀರು ಸುರಿಸುತ್ತ ನಡೆದಿದ್ದರು. ಊರಲ್ಲಿ ಯಾವನೋ ಒಬ್ಬನ ಖೂನಿಯಾಗಿತ್ತು. ಖೂನಿ ಮಾಡಿದವರು ಪರಾರಿಯಾಗಿದ್ದರು. ನಿರಪರಾಧಿಯಾದ ಬಾಬಣ್ಣನು ಆ ಮೃತ ಶರೀರದ ಬಳಿಯಲ್ಲಿ ಏನೂ ಅರಿಯದೇ ನಿಂತುಕೊಂಡಿದ್ದನು. ಆಗ ಪೋಲೀಸರು ಇವನೇ ಅಪರಾಧಿಯೆಂದು ಹಿಡಿದುಕೊಂಡು ನ್ಯಾಯಾಲಯಕ್ಕೆ ಗುರಿ ಮಾಡಿದರು. ತಾನು ನಿರಪರಾಧಿಯೆಂದು ಎಷ್ಟು ಹೇಳಿಕೊಂಡರೂ ಕೇಳುವವರಾರು ? ಆತನ ವಿರುದ್ಧ ಸಾಕ್ಷಿ ಪುರಾವುಗಳನ್ನು ಪೋಲಿಸರು ಬಂದೋಬಸ್ತ ಇಟ್ಟಿದ್ದರಿಂದ ನ್ಯಾಯಾಧೀಶನು ಬಾಬಣ್ಣನಿಗೆ ಅನಿವಾರ್ಯವಾಗಿ ಮರಣದಂಡನೆ ವಿಧಿಸಿದನು. ತೀರ್ಪು ಬರೆಯುವಾಗ ಆತನ ಮನಸ್ಸು ಅಳುಕಿತಾದರೂ ಉಪಾಯವಿಲ್ಲದೆ ಹಾಗೆ ಬರೆಯಲೇ ಬೇಕಾಯಿತು.

ಈಗ ಬಾಬಣ್ಣನನ್ನು ವಧಸ್ಥಾನಕ್ಕೆ ಒಯ್ಯುತ್ತಿರಲು ಆತನು ಅದೇ ಮಾರ್ಗದಿಂದ ಎದುರಿಗೆ ಬರುತ್ತಿರುವ ಯೋಗಿಗಳನ್ನು ಕಂಡು ಪೋಲೀಸರಿಗೆ ಹೇಳಿಕೊಂಡು ಭಕ್ತಿಯಿಂದ ಅವರ ಪಾದಕ್ಕೆ ಅಡ್ಡಬಿದ್ದನು. ಆಗ ಅವರು "ಏಳು ಮಗನೇ, ನಿನಗೆ ಶಿವನ ಕೃಪೆಯಾಗಲಿ" ಎಂದು ಹರಸಿದರು. ಆಗ ಮನೆಯವರು "ಬುದ್ಧೀ, ಈತನಿಗೆ ಇವತ್ತು ಪಾಸಿ ಕೊಡುವವರಿದ್ದಾರೆ. ತಾವು ಅವನಿಗೆ ಶಿವನ ಕೃಪೆಯಾಗಲೆಂದು ಅನುಗ್ರಹಿಸಿದಿರಲ್ಲ ! ಅದು ಹೇಗೆ ಸಾಧ್ಯ ?" ಎಂದು ಹೇಳಿಕೊಂಡರು. ಅದಕ್ಕೆ ಯೋಗಿಗಳು "ನೀವು ಚಿಂತಿಸಬೇಡಿರಿ, ಶಿವನು ನಿರಪರಾಧಿಗಳನ್ನು ಹೇಗಾದರೂ ಪಾರು ಮಾಡುವನು" ಎಂದು ಸಮಾಧಾನ ಹೇಳಿ ಕಳಿಸಿದರು.

ವಧಸ್ಥಾನಕ್ಕೆ ಒಯ್ದು ಬಾಬಣ್ಣನ ಕೊರಳಿಗೆ ಹಗ್ಗ ಹಾಕಿ ಜಗ್ಗಿದರು. ಆದರೆ ಆ ಹಗ್ಗ ಹರಿಯಿತು. ಎರಡು ಮೂರು ಸಲವೂ ಹೀಗೇ ಆಯಿತು.

ಏನು ಮಾಡಬೇಕೆಂಬುದು ಫಾಶಿ ಕೊಡುವವರಿಗೆ ತಿಳಿಯಲಿಲ್ಲ. ಅವತ್ತು ನ್ಯಾಯಾಧೀಶನ ಮನಸ್ಸಿನಲ್ಲಿ ತಾನು ನಿರಪರಾಧಿಗೆ ದೇಹಾಂತ ಶಿಕ್ಷೆ ವಿಧಿಸಿದೆನಲ್ಲ. ಇದು ಬಹಳ ಅನ್ಯಾಯವೆಂಬ ವಿಚಾರವು ಹೊಳೆದು ಕೂಡಲೆ ಒಬ್ಬ ಸಿಪಾಯಿಯ ಕೈಯಲ್ಲಿ ಆ ಕೈದಿಗೆ ಫಾಸಿ ಕೊಡದೆ ಬಿಟ್ಟು ಬಿಡಬೇಕೆಂದು ಆಜ್ಞಾಪತ್ರ ಬರೆದು ಕಳುಹಿಸಿದನು. ಆ ಪ್ರಕಾರ ಬಾಬಣ್ಣನು ಬಿಡುಗಡೆ ಹೊಂದಿ ಮಡದಿ ಮಕ್ಕಳನ್ನು ಕೂಡಿಕೊಂಡನು. ಎಲ್ಲರೂ ಬೂದೀಶನ ಲೀಲೆಯನ್ನು ಬಾಯಿತುಂಬ ಪೊಗಳಿ ಕಾಯಿ ಕರ್ಪೂರ ತೆಗೆದುಕೊಂಡು ಅವರ ದರ್ಶನ ಮಾಡಿಕೊಂಡು ಅವರ ಆಶೀರ್ವಾದವನ್ನು ಹೊಂದಿ ತಮ್ಮ ಮನೆಗೆ ತೆರಳಿದರು.

## ೧೨ನೆಯ ಸಂಧಿ

### ಸಂಸಾರ-ಸನ್ಯಾಸ

ಒಮ್ಮೆ ಸೋಮಸೇಖರನೆಂಬುವನು ಸಂಸಾರದ ಬಗ್ಗೆ ಹೇಯ ಹುಟ್ಟಿ ಶ್ರೀ ಬೂದೀಶ್ವರನ ಬಳಿಗೆ ಬಂದು "ಗುರುವೇ, ನನಗೆ ಈ ಸಂಸಾರವು ಬೇಡವಾಗಿದೆ. ಇದರಲ್ಲಿ ಎಳ್ಳಷ್ಟೂ ಸುಖವಿಲ್ಲ. ಸುಮ್ಮನೆ ಸನ್ಯಾಸಾಶ್ರಮ ಹೊಂದಿ ಸುಖದಿಂದ ಕಾಲಕಳೆಯಬೇಕೆಂದಿದ್ದೇನೆ. ಕಾರಣ ತಾವು ನನಗೆ ಸನ್ಯಾಸ ದೀಕ್ಷೆಯನ್ನು ಕರುಣಿಸಬೇಕು." ಎಂದು ಬೇಡಿಕೊಂಡನು. ಅದಕ್ಕೆ ಯತಿಗಳು "ಏನಯ್ಯಾ ನಿನಗೆ ಮಡದಿ ಮಕ್ಕಳು ಇಲ್ಲವೇ? ಹೊಲಮನೆ ಪಡೆದ ಸಂಪತ್ತುಗಳು ಇಲ್ಲವೇ? ಅವುಗಳನ್ನೆಲ್ಲ ಬಿಟ್ಟು ಸನ್ಯಾಸಿಯಾಗಿ ಕಾಡಿಗೇಕೆ ಹೋಗಲಿಚ್ಛಿಸುವಿ? ಎನ್ನಲು ಸೋಮಶೇಖರನು "ಗುರುವೇ, ನನಗೆ ಮಡದಿ ಮಕ್ಕಳು, ಪಡೆದ ದ್ರವ್ಯವು, ಭೂಮಿ, ಸೀಮೆಗಳು ಸಾಕಷ್ಟಿವೆ. ಆದರೆ ಅವೆಲ್ಲವೂ ನನಗೆ ಬೇಡವಾಗಿವೆ. ಸಂಸಾರದ ಬಗ್ಗೆ ಮನದಲ್ಲಿ ಹೇಯವು ಉತ್ಪನ್ನವಾಗಿದೆ. ಏಕಾಂತದಲ್ಲಿ ಶಿವನ ಧ್ಯಾನ ಮಾಡುತ್ತ ನಿಶ್ಚಿಂತನಾಗಿರಬೇಕೆಂದು ಬಯಸುತ್ತೇನೆ. ಸಂಸಾರವು ದುಃಖಸಾಗರವು, ಇಲ್ಲಿ ಸುಖಕ್ಕೆಡೆಯಿಲ್ಲ. ವಿಘ್ನ ಕಂಟಕಗಳೆಡೆಗೊಳ್ಳುವವು. ಸ್ವಾರ್ಥವು ಬೆನ್ನು ಹತ್ತುವದು. ಆಶೆ, ಆಮಿಷ, ವಿಷಯ ವ್ಯಾಮೋಹಗಳು ನನ್ನನ್ನು ಗಾಸಿಗೊಳಿಸುವವು. ಕೋಪ ತಾಪಗಳೂ ಮದಮತ್ಸರಗಳೂ ಎಡೆಬಿಡದೆ ಕಾಡುವವು. ಚಿಂತಾತುರತೆಗಳು ಬಂದು ಎಡೆಗೊಳ್ಳುವವು. ಆದ ಕಾರಣ ಸನ್ಯಾಸಿಯಾಗಿ ಏಕಾಂತ ಸ್ಥಳದಲ್ಲಿದ್ದುಕೊಂಡು

ಶಿವ ಶಿವಾ ಎನ್ನುತ್ತ ಕಾಲ ಕಳೆದು ಕಡೆಗೆ ಶಿವನ ಪಾದವನ್ನು ಸೇರುವೆನು. ಆದುದರಿಂದ ಗುರುವೇ ನನಗೆ ಸನ್ಯಾಸ ದೀಕ್ಷೆಯನ್ನು ಕರುಣಿಸೆಂದು" ಬಹು ದೈನ್ಯದಿಂದ ಬೇಡಿಕೊಂಡನು.

ಸೋಮಶೇಖರನಾಡಿದ ಮಾತುಗಳನ್ನು ಕೇಳಿ ಯೋಗಿಗಳು "ತಮ್ಮಾ ಕೇಳು ಸಂಸಾರವು ಸುಳ್ಳಲ್ಲ, ಕನಸಲ್ಲ, ಭ್ರಮೆಯಲ್ಲ. ಜಗತ್ತು ಸುಳ್ಳಲ್ಲ. ಎಲ್ಲವೂ ಶಿವನಷ್ಟೇ ಸತ್ಯವಾಗಿವೆ, ಸುಂದರವಾಗಿವೆ. ಆ ಪರಶಿವನ ಆಜ್ಞೆಯ ಮೇರೆಗೆ ಎಲ್ಲ ಕಾರ್ಯಗಳೂ ನಡೆಯುವವು. ಸೂತ್ರಧಾರನಂತೆ ಆತನು ಮರೆಗೆ ನಿಂತು ಎಲ್ಲರಿಂದ ಆತನು ಆಯಾಯ ಪಾತ್ರವಾಡಿಸುವನು. ಶರಣ ಬಸವಾದಿಗಳು ಸಂಸಾರವನ್ನು ತೊರೆದರೇನು ? ಹಿಂದಿನ ಋಷಿಗಳು ಅರಣ್ಯವಾಸಿಗಳಾಗಿದ್ದರೂ ಸಂಸಾರವನ್ನು ಬಿಟ್ಟಿರಲಿಲ್ಲವಲ್ಲ ? ಹೀಗಿದ್ದು ಮಂದಮತಿಗಳಂತೆ ಹೆಂಡತಿ ಮಕ್ಕಳನ್ನು ಬಿಟ್ಟು ಸನ್ಯಾಸಿಯಾಗಿ ಅಡವಿಯನ್ನೇಕೆ ಸೇರಬೇಕೆನ್ನುವೆ ? ಶರಣರಂತೆ ಸಂಸಾರ ಮಾಡಿದರೆ ದುಃಖವೆಲ್ಲಿದೆ ? ಗಂಡ ಸುಳ್ಳಲ್ಲ. ಹೆಂಡತಿ ಸುಳ್ಳಲ್ಲ. ಮಕ್ಕಳು ಸುಳ್ಳಲ್ಲ. ಯಾರೂ ಸುಳ್ಳಲ್ಲ. ಪ್ರತ್ಯಕ್ಷ ಕಂಡೂ ಕಂಡೂ ಸುಳ್ಳೆಂದರೆ ಅದು ವಿತಂಡವಾದವಾದೀತು. ಜಗವೆಲ್ಲ ಸುಳ್ಳಾದರೆ ಜಗತ್ತನ್ನು ಹುಟ್ಟಿಸಿದ ದೇವರು ಸುಳ್ಳಾದಾನು ! ಸರ್ವವೂ ಶೂನ್ಯವಾದೀತು. ಸತ್ಯವಾಗಿ ತೋರುವುದೆಲ್ಲ ಅನಿತ್ಯವಿರಬಹುದು. ಆದರೆ ಅದಕ್ಕೆ ಸುಳ್ಳೆಂದೇಕೆ ಹೇಳಬೇಕು? ಎಲ್ಲವೂ ಸುಳ್ಳಾದರೆ ಜಗತ್ತಿನ ವ್ಯವಹಾರಗಳೆಲ್ಲ ಹೇಗೆ ನಡೆದಾವು ?

ಸತ್ಯಶರಣರು ಸಂಸಾರದಲ್ಲಿಯೇ ಸೊಬಗನ್ನು ಕಂಡರು. ಸತ್ಯ ಶುದ್ಧ ಕಾಯಕ ಮಾಡಿ ದ್ರವ್ಯ ಸಂಗ್ರಹಿಸಿ ನಿತ್ಯ ದಾಸೋಹಕ್ಕೆ ಸಲ್ಲಿಸಿ ಸುಖಿಗಳಾದರು. ಉತ್ತಮವಾದ ಈ ಮಾರ್ಗವಿಡಿದು ಭೃತ್ಯಾಚಾರದಿಂದ ನಡೆಯಲು ಸಂಸಾರವೇ ಸ್ವರ್ಗವಾದೀತು. ಸಂಸಾರಕ್ಕೆ ಅಂಜಿ ವನಕ್ಕೆ ಓಡಿ ಹೋಗುವವರು ಹೇಡಿಗಳು. ಸ್ವಾರ್ಥದಿಂದ ಯಾರಿಗೇನೂ ಕೇಡು ಮಾಡದೆ ಒಳಿತನ್ನೆ ಮಾಡುತ್ತ ಹೋದರೆ ಸಂಸಾರವು ಸೊಗಸಾಗದೇ ? ಕಾರಣ ಒಳ್ಳೆಯ ನಾಗರಿಕನಾಗಿ ಬಾಳು. ಸನ್ಯಾಸಿಯಾಗಬೇಡ. ನಡೆಯುವ ಆಗು ಹೋಗುಗಳೆಲ್ಲ ಈಶ್ವರನ ಇಚ್ಛೆಯ ಮೇರೆಗೆ ನಡೆಯುತ್ತವೆ. ನಮಗೆ ಒಳಿತಾಗಲಿ, ಕೆಡಕಾಗಲಿ. ಏನೇನು ಸಂಭವಿಸುವದೋ ಅದೆಲ್ಲ ಪರಮಾತ್ಮನ ಇಚ್ಛೆಯೆಂದೇ ದೃಢವಾಗಿ ನಂಬಿ ಸಂಸಾರ ಮಾಡಬೇಕು. ನಮ್ಮಿಂದ ಯಾರಿಗೂ ಏನೂ ಬಾಧೆಯಾಗದಂತೆ ಒಳ್ಳೇ ಎಚ್ಚರದಿಂದ ನಡೆಯಬೇಕು. ಸದಾ ತನ್ನ ಇಷ್ಟವಾದ ದೇವರನ್ನು ನೆನೆಯುತ್ತ ಸಾಗಬೇಕು. ಅಂದರೆ ಸಂಸಾರವು ಸುಖದ ಆಗರವಾಗುವದು.

ಸಂಸಾರವನ್ನು ಸುಗಮಗೊಳಿಸುವದು ಲಿಂಗತತ್ತ್ವವು. ಇದನ್ನೇ ಶರಣರು ಸಮಾಜದಲ್ಲಿ ಬೆಳಗಿ ಅದು ಸರ್ವಾಂಗ ಸುಂದರವಾಗುವಂತೆ ಮಾಡಿದರು. ಲಿಂಗಧಾರಿಗಳೆಲ್ಲ ಸರಿಸಮಾನರು. ಒಬ್ಬರು ಹೆಚ್ಚಲ್ಲ, ಇನ್ನೊಬ್ಬರು ಕಡಿಮೆಯಲ್ಲ ಎಂಬ ಆರ್ಥಿಕ ಹಾಗೂ ಸಾಂಸ್ಕೃತಿಕ ಯೋಜನೆಯಿಂದ ಪ್ರಾಮಾಣಿಕತನ. ನಿಸ್ವಾರ್ಥತೆ, ಪ್ರೇಮ, ಐಕ್ಯತೆಗಳು ಪರಸ್ಪರರಲ್ಲಿ ಬೆಳೆದು ಸಮಾಜವು ಕೈಲಾಸವಾಯಿತು. ಸ್ವಾರ್ಥಮಯವಾದ ಈ ಜಗತ್ತಿನಲ್ಲಿ ದುಡ್ಡುಗಳಿಸುವುದೊಂದೇ ಮನುಷ್ಯನ ಧ್ಯೇಯವಲ್ಲ. ಅದಕ್ಕಾಗಿ ಭ್ರಷ್ಟಾಚಾರವೆಸಗಬೇಕೇ ? ಈ ಅರಿವನ್ನು ಹಿಡಿದು ಲಿಂಗದಲ್ಲಿ ಭಕ್ತಿಯನ್ನಾಚರಿಸಿದರೆ ಶಿವಕರುಣವುಂಟಾಗಿ ಸಂಸಾರವು ಸುಖಮಯವಾಗುವದು. ಅರಿವು ಭಕ್ತಿಗಳೆರಡು ಸಂಸಾರವನ್ನು ಸುಗಮಗೊಳಿಸುವವು. ಸಂಸಾರದಲ್ಲಿ ವಿವೇಕ, ತ್ಯಾಗಭಾವ, ಸರಸಭಕ್ತಿ, ನೀತಿ, ಧರ್ಮಾಚಾರ, ಸಹಕಾರ, ಕಾಯಕ, ದಾಸೋಹಗಳಿದ್ದರೆ ಸಾಕು; ಆ ಸಂಸಾರವೇ ಕೈಲಾಸ. ಆದುದರಿಂದ ಸೋಮಶೇಖರಾ, ನೀನು ಸನ್ಯಾಸದ ಯೋಚನೆಯನ್ನು ಬಿಟ್ಟು ಸಂಸಾರವನ್ನು ಹಿಡಿ.

ಶರಣರು ನಿರಸ ಸಂಸಾರದಲ್ಲಿ ಬೆಳಕನ್ನಿರಿಸಿ ಜನತೆಗೆ ಮಾರ್ಗ ತೋರಿಸಿದರು. ಜನಹಿತಕ್ಕಾಗಿ ಅನೇಕ ವಚನಗಳನ್ನು ಬರೆದಿಟ್ಟಿದ್ದಾರೆ. ಹರಪೂಜೆ. ಶರಣಸಂಗ, ಅವರ ವಚನಗಳ ನಿರಂತರ ಅಭ್ಯಾಸವಿದ್ದರೆ ಸಂಸಾರವೇಕೆ ದುಃಖಮಯವಾದೀತು ? ಸಂಸಾರದಲ್ಲಿ ಚೆನ್ನಾಗಿ ಕೃಷಿ ಮಾಡಬಲ್ಲವನೇ ಪಾರಮಾರ್ಥದಲ್ಲಿಯೂ ಕೃಷಿ ಮಾಡಬಲ್ಲನು. ವಿಚಾರ ಮಾಡಿ ನೋಡಿದರೆ ಈ ಜಗತ್ತಿನಲ್ಲಿ ಸನ್ಯಾಸಿಗಳೆಷ್ಟಿರುವರು ? ಬಹು ಸಂಖ್ಯಾಕರೆಲ್ಲ ಸಂಸಾರಿಗಳೇ ಇದ್ದಾರೆ. ಸಂಸಾರವು ಬೇಡವೆಂದು ಎಲ್ಲರೂ ಸನ್ಯಾಸಿಗಳಾದರೆ ಜಗತ್ತು ಹೇಗೆ ನಡೆದೀತು ? ಜಂಗಮನು ಅವಿವಾಹಿತನಾಗಿದ್ದರೂ ಸನ್ಯಾಸಿಯಲ್ಲ. ಸಮಾಜದಲ್ಲಿದ್ದುಕೊಂಡೇ ಆತನು ಲೋಕ ಸಂಗ್ರಹ ಮಾಡುವನು. ಲಿಂಗಾಂಗಿಗಳಿಗೆ ವಿಶ್ವಪ್ರೇಮವನ್ನು ಕಲಿಸಿಕೊಟ್ಟವನು ಜಂಗಮನು. ಆದುದರಿಂದ ಸನ್ಯಾಸಿಯಾಗದೆ ಸದ್ಭಕ್ತನಾಗಿ ನೀನು ಸಂಸಾರಮಾಡು.” ಎಂದು ಸೋಮಶೇಖರನಿಗೆ ಯೋಗಿಗಳು ಬೋಧಿಸಿದರು. ಅವರ ಅಪ್ಪಣೆಯಮೇರೆಗೆ ಹಾಗೆಯೇ ನಡೆದುಕೊಂಡು ಆತನು ಸದ್ಗತಿಯನ್ನು ಹೊಂದಿದನು.

## ಶಿವಯೋಗಮಂದಿರ

ಸೋಮಶೇಖರನಿಗೆ ಉಪದೇಶ ಮಾಡಿ ಮುಂದೆ ಬೂದೀಶ್ವರರು ಈಗಿನ ಶಿವಯೋಗಮಂದಿರವಾಗಿರ್ದು ಆಗ ನಿಜಡಾರಣ್ಯವಾಗಿರುವ ಕಪೋತ ಪರ್ವತದ

ಪರಿಸರದಲ್ಲಿ ಮಲಾಪಹಾರಿಯು ವನಪ್ರದೇಶಕ್ಕೆ ಬಂದು ಒಂದು ಬಿಲ್ವ ತರುವಿ ನಡಿಯಲ್ಲಿ ಕಟ್ಟೆಯ ಮೇಲೆ ಬೂದೀಬಸವ ಮೂರ್ತಿಯನ್ನು ಸ್ಥಾಪಿಸಿ ಹೋಗಿ ಬಿಟ್ಟರು. ಮುಂದೆ ಎಷ್ಟೋ ವರ್ಷಗಳು ಸಂದಿಹೋದವು. ಹಿಂದುಳಿದ ಲಿಂಗಾಂಗಿ ಧರ್ಮವನ್ನುದ್ಧರಿಸಬೇಕೆಂದು ಕುಮಾರ ಶಿವಯೋಗಿಯೆಂಬ ಅವತಾರಿ ಪುರುಷನು ಜನ್ಮ ತಾಳಿದನು. ಆತನು ಆಗಿನ ಕಾಲಕ್ಕೆ ನಾಡಿನಲ್ಲೆಲ್ಲ ಮಹಾ ವೈರಾಗ್ಯ ಮೂರ್ತಿಗಳೆಂದು ಹೆಸರು ಪಡೆದ ಚಿತ್ತರಗಿ ಮಹಾಂತೇಶ ಯೋಗಿಯ ಮಹಿಮೆಯನ್ನು ಕೇಳಿ ಅವರ ಸನ್ನಿಧಿಗೆ ಬಂದು ಅಭಿವಂದಿಸಿ, “ಪರಮ ಪೂಜ್ಯರೇ, ವೀರಶೈವರು ತಮ್ಮ ಧರ್ಮಾಚಾರಗಳನ್ನು ತೊರೆದು ಅನಾಥ್ಯರಾಗಿ ರುವರು. ನಮ್ಮ ಧರ್ಮದ ಆಧಾರ ಸ್ತಂಭದಂತಿರುವ ಧರ್ಮಪೀಠಗಳ ಮಾಂ ದೇವರ ತರಬೇತಿಯ ಸಲುವಾಗಿ ಒಂದು ಶಿವಯೋಗಾಶ್ರಮವನ್ನು ರಚಿಸಬೇ ಕೆಂದಿರುವೆ. ಅದಕ್ಕಾಗಿ ಒಂದು ಏಕಾಂತವೂ ಪ್ರಶಸ್ತವೂ ಆದ ಪ್ರಶಾಂತಸ್ಥಲವು ಬೇಕಾಗಿದೆ ಅದನ್ನು ತಾವು ಕರುಣಿಸಿ ಶೋಧಿಸಬೇಕು” ಎಂದು ಪ್ರಾರ್ಥಿಸಲು ಶ್ರೀ ಮಹಾಂತ ಯೋಗಿಯು ತಮ್ಮ ಕುದುರೆಯನ್ನೇರಿ ಆಗ ನಿರ್ಜನಾರಣ್ಯ ವಾದ ಈಗಿನ ಶಿವಯೋಗ ಮಂದಿರದ ತಾಣಕ್ಕೆ ಬಂದರು.

ಅಲ್ಲಿ ಅವರಿಗೆ ಒಂದು ಪತ್ರಿಯ ಬನವು ಕಣ್ಣಿಗೆ ಬಿತ್ತು. ಒಂದು ವೃಕ್ಷದ ಬುಡದಲ್ಲಿ ಕಟ್ಟೆಯ ಮೇಲೆ ಬಸವಣ್ಣನನ್ನು ಕಂಡರು. ಒಂದು ಆವು ಸಮೀಪ ದಲ್ಲಿಯೇ ಮಲಗಿಕೊಂಡಿತ್ತು. ಈ ತಾಣವೇ ತಕ್ಕುದೆಂದು ಕುಮಾರೇಶನಿಗೆ ಹೇಳಲು ಆತನು ಹಿರಿಹಿರಿ ಹಿಗ್ಗಿದನು. ಆಗ ಶ್ರೀ ಕುಮಾರೇಶನು “ಪೂಜ್ಯರೇ, ಇಂಥ ನಿರ್ಜನಾರಣ್ಯದಲ್ಲಿ ಈ ನಂದಿ ವಿಗ್ರಹವು ಎಲ್ಲಿಂದ ಬಂದಿತೆಂ”ದು ಕೇಳ ಗೊಳ್ಳಲು ಶ್ರೀ ಮಹಾಂತೇಶನು “ಹಿಂದೊಮ್ಮೆ ಈ ತಾಣಕ್ಕೆ ಬೂದೀಶ್ವರನೆಂಬ ಯೋಗಿಯು ಬಂದು ಈ ಸುಂದರವಾದ ಬನದಲ್ಲಿ ನಂದಿಮೂರ್ತಿಯನ್ನು ಸ್ಥಾಪನೆ ಮಾಡಿ ಹೊರಟು ಹೋದನು.” ಅದಕ್ಕೆ ಜನರು ಆ ಕಾಲದಲ್ಲಿ ಬೂದಿ ಬಸವನೆಂದು ಕರೆಯುತ್ತಿದ್ದರು.

ಮುಂದೆ ಕೆಲ ಕಾಲದ ನಂತರ ಕೊಟ್ಟೂರ ಬಸವ ದರ್ಶನಕ್ಕೆಂದು ಹೊರ ಟಿದ್ದ ಒಬ್ಬ ಹಾದಿಕಾರನು ಹಾದಿ ತಪ್ಪಿಸಿಕೊಂಡು ಅತ್ತಿತ್ತ ಅಲೆದಾಡಿ ಹೈರಾ ಣಾಗಿ ಕೊನೆಗೆ ಈ ಬೂದೀಬಸವಣ್ಣನಿದ್ದ ಸ್ಥಾನಕ್ಕೆ ಬಂದನು. ಆ ಮೂರ್ತಿ ಯನ್ನು ಕಂಡಾಕ್ಷಣವೇ ಆತನಿಗೆ ಈತನೇ ತನ್ನ ಆರಾಧ್ಯ ದೇವತೆಯಾದ ಕೊಟ್ಟೂರು ಬಸವನೆಂಬ ಭಾವಾವೇಶವುಂಟಾಗಿ ಆನಂದದಿಂದ ಕುಣಿದಾಡಿದನು. ನೆರೆ ಹೊರೆಯ ಜನರು ಬಂದು ಭಕ್ತಿಯಿಂದ ಬಸವಣ್ಣನ ಪೂಜೆಗೈದು ಮಂಗಲ

ಮಾಡಿದರು. ಅಂದಿನಿಂದ ಅದಕ್ಕೆ ಜನರು ಬೂದೀಬಸವ ಎಂಬ ಹೆಸರಿನ ಬದಲು ಕೊಟ್ಟೂರು ಬಸವನೆಂಬ ಹೆಸರಿನಿಂದ ಕರೆಯುಹತ್ತಿದರು. ಎಂದು ಹೇಳಿ ಮಹಾಂತ ಯೋಗಿಗಳು ತಮ್ಮ ಪಯಣವನ್ನು ಬೆಳೆಸಿದರು.

ಇತ್ತ ಹಾನಗಲ್ಲ ಶ್ರೀ ಕುಮಾರ ಯೋಗಿಗಳು ಮುಂದೆ ಶ್ರೀ ಮಹಾಂತೇಶ್ವರರ ಅಪ್ಪಣೆಯಂತೆ ಆ ಮಲಪ್ರಭಾ ತೀರದಲ್ಲಿ ಶಿವಯೋಗಾಶ್ರಮವನ್ನು ವಿರಚಿಸಿ ವೀರಶೈವ ವಟುಗಳಿಗೆ ವೀರಶೈವ ಧರ್ಮದ ಆಚಾರ ವಿಚಾರಗಳನ್ನೂ ಯೋಗಾಸನಗಳನ್ನೂ ಕಲಿಸಿದರು. ಸಾಧಕರಿಗೆ ವೀರಶೈವ ಷಟ್‌ಸ್ಥಲ ಜ್ಞಾನವನ್ನು ಪದೇಶಿಸಿ ಸಮಾಜದಲ್ಲಿಹೆಚ್ಚಾಗಿ ಬೆಳೆಯುತ್ತಿರುವ ಗುರು-ವಿರಕ್ತಪೀಠಗಳಿಗೆ ತಕ್ಕಂಥ ಅಧಿಕಾರಿಗಳನ್ನು ಅಣಿಗೊಳಿಸಿ ಧರ್ಮದಲ್ಲಿ ಜಾಗ್ರತಿಯನ್ನು ನೆಲೆಗೊಳಿಸಿದರು. ಕುಮಾರ ಯೋಗಿಗಳು ನುರಿತ ಯೋಜಕರು ಹಾಗೂ ಕಾರಣಿಕ ಪುರುಷರು.

## ೧೩ನೆಯ ಸಂಧಿ

### ಶಿಶುನಾಳ

ಒಂದು ದಿನ ವಸಂತ ಕಾಲದಲ್ಲಿ ನಿಸರ್ಗವು ಬಹು ರಮಣೀಯವಾಗಿ ಕೆಂಗೊಳಿಸುತ್ತಿರಲು ಶ್ರೀ ಬೂದೀಶ್ವರನು ಶಿಶುನಾಳಿಗೆ ದಯಮಾಡಿಸಿದನು. ಅವರ ಆಗಮನವನ್ನು ಮೊದಲೇ ನಿರೀಕ್ಷಿಸಿದ್ದ ಹಜರತ್ ಶರೀಫ ಸಾಹೇಬರು ಅವರ ಸಲುವಾಗಿ ತಾವೇ ಸ್ವತಃ ಆಸನವನ್ನು ಅಣಿಗೊಳಿಸುತ್ತಿದ್ದರು. ಇದನ್ನು ನೋಡಿ ಅವರ ಶಿಷ್ಯರು, "ಗುರುಗಳೇ, ನಾವು ಆ ಕೆಲಸ ಮಾಡುತ್ತಿದ್ದೆವಲ್ಲಾ. ತಾವೇಕೆ ಸ್ವತಃ ಮಾಡುತ್ತಿರುವಿರಿ ?" ಎಂದು ಕೇಳಿದರು. ಅದಕ್ಕೆ ಶರೀಫರು "ಅಯ್ಯಾ ಕೇಳಿರಿ, ಇಲ್ಲಿಗೆ ಇವತ್ತು ಮಹಾ ಮಹಿಮಾಶಾಲಿಗಳಾದ ವಿಭೂತಿಗಳು ಬರುವರು. ಅವರು ಸಾಮಾನ್ಯರಲ್ಲ. ಅವರು ಸಾಕ್ಷಾತ್ ಪರಶಿವನ ಸ್ವರೂಪಿಗಳು, ನಮಗೆ ಏಳೇಳು ಜನ್ಮಕ್ಕೆ ಸಿಗದಂಥ ದರ್ಶನವು ಏನೋ ಪುಣ್ಯವಶದಿಂದ ಇವತ್ತು ನಮ್ಮಲ್ಲಿಗೆ ಲಭಿಸಲಿದೆ. ಆದ್ದರಿಂದ ನಾವು ಧನ್ಯರು. ಅವರನ್ನು ಇದಿರ್ಗೊಂಡು ಕರೆತರೋಣ ಬನ್ನಿರಿ." ಎಂದು ಹೇಳಿ ಶಿವಯೋಗಿಗಳನ್ನು ಆದರದಿಂದ ಬರಮಾಡಿಕೊಂಡು ಬಂದು ಪಾದಪೂಜೆ ಮಾಡಿ ಮಂಗಲ ಮಾಡಿದರು. ಆಗ ಶರೀಫರು ಅವರನ್ನು ಕುರಿತು. "ಗುರುಬಂದಾ, ಹರಬಂದಾ, ಚರ ಬಂದಾ ಯೋಗಿ" ಎಂದು ಆನಂದವುಕ್ಕಿ ಭಕ್ತಿಯಿಂದ ಹಾಡಿ ನಲಿದಾಡಿ

ವರು. ಆ ಮೇಲೆ ಶರೀಫರು ನೆರೆದ ಶಿಷ್ಯರಿಗೆಲ್ಲ ಬೂದಿಯೋಗಿಯ ಯೋಗ ಮಹಿಮೆಯನ್ನು ಬಹು ಪರಿಯಿಂದ ಕೊಂಡಾಡಿದರು. ಬೂದೀಶನು ಶರೀಫರ ಶುದ್ಧ ಸಾತ್ವಿಕ ಭಾವಕ್ಕೆ ಮೆಚ್ಚಿ ಎಲ್ಲರಿಗೂ ಕೃಪಾಶೀರ್ವಾದವನ್ನು ಮಾಡಿ ಅಲ್ಲಿಯೇ ಮಾಯವಾಗಿ ಬಿಟ್ಟರು. ಕೂಡಿದ ಜನಗಳಿಗೆ ಅತ್ಯಂತ ಆಶ್ಚರ್ಯ ವಾಯಿತು.

## ಪುಲಿಗೆರೆ

ಮುಂದೆ ಶಿವಯೋಗಿಗಳು ಪುಲಿಗೇರಿಗೆ ಬಂದು ಒಂದು ಉಪವನದಲ್ಲಿ ತಂಗಿದರು. ಆ ಊರ ಶಿವಾಲಯದಲ್ಲಿದ್ದ ಸೋಮೇಶ್ವರ ಲಿಂಗನು ದರ್ಶನಕ್ಕೆ ಬರಬೇಕೆಂದು ಅವರಿಗೆ ಪ್ರೇರಣೆ ಮಾಡಿದನು. ಆ ಪ್ರಕಾರ ಅವರು ಗುಡಿಯ ಬಾಗಿಲು ತೆರೆದಿರಲು ಸೋಮೇಶನಿಗೆ ಶರಣು ಶರಣೆಂದು ಹೇಳಿ ಮುಂದಿರದ ಒಂದು ಕಂಬದಾಸರಕ್ಕೆ ಒರಗಿ ಲಿಂಗಧ್ಯಾನ ಮಾಡುತ್ತ ಕುಳಿತುಕೊಂಡರು. ಅಷ್ಟರಲ್ಲಿ ಅರ್ಚಕರು ಬಂದು ಇವರನ್ನು ಕಂಡು ಕೋಪಾವಿಷ್ಟರಾಗಿ "ಎಲೊ ಬೈರಾಗಿಯೇ ನೀನಾರು ? ಹೇಗೆ ಗುಡಿಯಲ್ಲಿ ಪ್ರವೇಶಿಸಿದೆ ? ಗುಡಿಯನ್ನೆಲ್ಲ ಅಪವಿತ್ರಗೊಳಿಸಿದೆಯಲ್ಲ ! ಬ್ರಾಹ್ಮಣೇತರರು ಇಲ್ಲಿ ಬರಬಹುದೇ ? ನಡೆ ಇಲ್ಲಿಂದ" ಎಂದು ಗದರಿಸಲು ಯೋಗಿಗಳು ಮನನೊಂದು ಉಪಾಯವಿಲ್ಲದೆ ಅಲ್ಲಿಂದ ಹೊರಬಿದ್ದು ಅಗಸ್ತ್ಯ ತೀರ್ಥದ ಕಡೆಗೆ ಹೊರಟರು.

ಅಲ್ಲಿ ತೀರ್ಥದಲ್ಲಿ ಜಳಕ ಮಾಡಿ ಮಾಮರದ ಕೆಳಗೆ ಕುಳಿತುಕೊಂಡು ಲಿಂಗಾನಂದದಲ್ಲಿ ತಲ್ಲೀನರಾದರು. ಇತ್ತ ಗುಡಿಯಲ್ಲಿ ಪೂಜಾರಿಗಳು ಲಿಂಗಕ್ಕೆ ಅಭಿಷೇಕಗೈಯಬೇಕೆಂದು ಮುಂದಿರುವ ಕೊಡವನ್ನು ಎತ್ತಲು ಅದರಲ್ಲಿ ಒಂದು ಹನಿ ಸಹ ನೀರಿರಲಿಲ್ಲ. ಅಷ್ಟರಲ್ಲಿ ಉರಿಯುವ ನಂದಾದೀಪಗಳು ನಂದಿ ಹೋದವು. ಪೂಜೆಗೆಂದು ತಂದ ಹೂಪತ್ರಿಗಳು ಮಾಯವಾದವು. ಹೀಗೇ ಕಾಯಿತೆಂದು ಅವರಿಗೆ ತಿಳಿಯದಾಯಿತು. ಪೂಜಾರಿಗಳು ಈ ಸುದ್ದಿಯನ್ನು ಊರೊಳಗಿನ ಪ್ರತಿಷ್ಠಿತ ಜನರಿಗೆ ತಿಳಿಸಿದರು, ಯಾರೂ ಏನೂ ಮಾಡ ದಂತಾದರು. ಆಗ ಸೋಮೇಶ್ವರನು ಒಬ್ಬ ಭಕ್ತನ ಕನಸಿನಲ್ಲಿ ಬಂದು "ಬೂದಿ ಯೋಗಿಯು ಮುನಿದಿಹನು. ಈಗ ಆತನು ಅಗಸ್ತ್ಯ ತೀರ್ಥದಲ್ಲಿದ್ದಾನೆ. ಈಗ ನೀವು ಆತನನ್ನು ಕರೆದುಕೊಂಡು ಬಂದು ಪೂಜೆ ಮಾಡಿದರೆ ನಿಮಗೆ ಕ್ಷೇಮವಾಗುವದು. ಇಲ್ಲದಿದ್ದರೆ ಮಹದನರ್ಥ ಸಂಭವಿಸುವದು." ಎಂದು ಎಚ್ಚರಿಸಲು ಆತನು ಎಲ್ಲರಿಗೂ ಈ ಸಂದೇಶವನ್ನು ಮುಟ್ಟಿಸಿದನು.



ನಾಲ್ಕನೆಯ ಪಟ್ಟಾಧಿಕಾರಿಗಳಾದ
**ಶ್ರೀ ಮ. ನಿ. ಪ್ರ. ಸಿದ್ಧಲಿಂಗಸ್ವಾಮಿಗಳು**

ಬಳಿಕ ಎಲ್ಲರೂ ಕೂಡಿ ಅರ್ಚಕರೊಂದಿಗೆ ಬೂದೀಶ್ವರನ ಬಳಿಗೆ ಬಂದು ಸಾಷ್ಟಾಂಗ ಹಾಕಿದನಂತರ ಪೂಜಾರಿಗಳು "ಬುದ್ಧೀ, ನಮ್ಮದು ಸರ್ವಾಪರಾಧ ವಾಗಿದೆ. ದಯವಿಟ್ಟು ನಮ್ಮನ್ನು ಕ್ಷಮಿಸಿ ಗುಡಿಗೆ ಬಂದು ನಮ್ಮಿಂದ ಪೂಜಾ ಕಾರ್ಯವನ್ನು ಪ್ರಾರಂಭಗೊಳಿಸಬೇಕೆ"ಂದು ದೈನ್ಯದಿಂದ ಬೇಡಿಕೊಂಡರು. ಶಿವಯೋಗಿಯು ಅವರ ತಪ್ಪನ್ನು ಮನಸ್ಸಿನಲ್ಲಿ ಹಿಡಿಯದೆ ಕ್ಷಮಿಸಿ ಗುಡಿಗೆ ದಯಮಾಡಿಸಿ ಪೂಜಾರಿಗಳಿಗೆ ಪೂಜೆಯನ್ನು ಪ್ರಾರಂಭಿಸಬೇಕೆಂದು ಆಜ್ಞಾಪಿಸಿದರು. ಆದರೆ ಮಂದಿರದಲ್ಲಿ ಜಲ, ಭಸಿತ, ಗಂಧ, ಪತ್ರಿ, ಪುಷ್ಪಾದಿಗಳೇನೂ ಇಲ್ಲದೆ ಹೇಗೆ ಪೂಜೆ ಮಾಡಬೇಕು ? ಅರ್ಚಕರು ಮೌನದಿಂದ ಕುಳಿತರು. ಆಗ ಯೋಗಿಗಳು, "ಮರುಳರೇ, ಅರ್ಚಕರಾದ ನೀವು ಜಾತ್ಯಂಧರು. ನಾವೇ ಹೆಚ್ಚಿನವರೆಂಬ ಸೊಕ್ಕು ನಿಮಗೆ ಬಹಳವಿದೆ. ಅನ್ಯ ಮತೀಯರನ್ನು ನೀವು ಜರೆಯುತ್ತಿರುವಿರಿ. ಅದಕ್ಕಾಗಿಯೇ ಸೋಮೇಶ್ವರನು ಎಲ್ಲ ಪೂಜಾಸಾಮಗ್ರಿಗಳನ್ನು ಮರೆಮಾಡಿ ಬಿಟ್ಟಿರುವನು, ಆದುದರಿಂದ ಎಲ್ಲ ಜಾತಿಯವರನ್ನೂ ಗುಡಿಯೊಳಗೆ ಪ್ರವೇಶ ಮಾಡಿಸಿದರೆ ಮಾತ್ರ ಪೂಜಾ ಸಾಮಗ್ರಿಗಳೆಲ್ಲ ಮೊದಲಿನಂತೆ ಪ್ರಾಪ್ತವಾಗುವವು" ಎನ್ನಲು, ಊರಲ್ಲಿ ಡಂಗುರ ಹೊಡಿಸಿ ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಎಲ್ಲ ಕುಲದವರನ್ನು ಗುಡಿಯಲ್ಲಿ ಬರಮಾಡಿಕೊಳ್ಳಲು ಪೂಜಾ ಸಾಮಗ್ರಿಗಳೆಲ್ಲ ಕಾಣಿಸಿಕೊಂಡವು. ಆಗ ಪೂಜಾರಿಗಳು ಪೂಜೆಯನ್ನು ಸಂಭ್ರಮದಿಂದ ನೆರವೇರಿಸಿ ಎಲ್ಲರಿಗೂ ತೀರ್ಥ ಹಂಚಿದರು ಬೂದೀಶ್ವರನು ಎಲ್ಲರನ್ನೂ ಆಶೀರ್ವದಿಸಿ ಸಂಚಾರವನ್ನು ಬೆಳೆಸಿದನು.

## ನವಿಲುಗುಂದ

ಒಂದು ದಿನ ನವಿಲುಗುಂದದ ಭಕ್ತರು ಬೂದೀಶನೆಡೆಗೆ ಬಂದು ಸಾಷ್ಟಾಂಗವೆರಗಿ "ಬುದ್ಧೀ, ಒಂದೆರಡುದಿನ ನಮ್ಮಲ್ಲಿಗೆ ಬಂದು ನಮ್ಮನ್ನುದ್ಧರಿಸಬೇಕೆಂದು" ಬೇಡಿಕೊಂಡರು. ಭಕ್ತ ಹಿತಾರ್ಥವಾಗಿ ಬೂದೀಶನು ನವಿಲುಗುಂದಕ್ಕೆ ಆಗಮಿಸಿದನು. ಆಲೂರಪೇಟೆ ಸೆಟ್ಟರ ಮನೆತನದ ಗಂಗಮ್ಮನೆಂಬ ಹುಟ್ಟುಗುರುಡಿಯು ಸ್ವಾಮಿಗಳ ಲೀಲೆಗಳನ್ನು ಕೇಳಿ ಅವರ ಸೇವೆಯನ್ನು ಮಾಡಿದರೆ ತನ್ನ ಕಣ್ಣುಗಳು ಬಂದಾವೆಂದು ತಿಳಿದು ನಸುಕಿನಲ್ಲಿ ಬಂದು ಸ್ವಾಮಿಗಳ ಆಶ್ರಮದ ಅಂಗಳ ಕಸವನ್ನು ದಿನಾಲು ತಪ್ಪದೆ ಕೈಯಾಡಿಸುತ್ತ ಗುಡಿಸ ಹತ್ತಿದಳು. ಹೀಗಿರಲು ಒಂದು ದಿನ ಕಸಗೂಡಿಸುವಾಗ ಯೋಗಿಗಳು ಆವಳನ್ನು ಕಂಡು "ಏನಮ್ಮಾ ತಾಯಿೂ, ನೀನೇಕೆ ಅಂಗಳವನ್ನು ಗೂಡಿ

ಸುವೆಯೆಂದು ಕೇಳಿದರು. ಆಗ ಆಕೆಯು ತನ್ನ ಮನದ ಇಂಗಿತವನ್ನು ಪಾದಕ್ಕೆ ಅರಿಕೆ ಮಾಡಿಕೊಂಡು ತನ್ನ ಎರಡೂ ಕಣ್ಣುಗಳನ್ನು ಕೊಡಬೇಕೆಂದು ಬೇಡಿಕೊಂಡಳು. ಆಗ ಅವರು "ತಾಯಿ, ಶಿವನು ನಿನಗೆ ದೃಷ್ಟಿಯನ್ನು ಕೊಟ್ಟಿಲ್ಲ. ಶಿವನ ಸೃಷ್ಟಿಯನ್ನು ಮೀರಲಿಕ್ಕೆ ಬರುವದಿಲ್ಲ. ನೀನು ಪುಣ್ಯವಂತೆ ನಮ್ಮ ಸೇವೆಯನ್ನು ಮನಃಪೂರ್ವಕವಾಗಿ ಮಾಡಿರುವಿ. ಸೇವೆ ಮಾಡಿದ ನಿನಗೆ ನಾನು ಕಣ್ಣು ಕೊಡದಿದ್ದರೆ ಅದು ನನಗೆ ಕುಂದು. ನಿನಗೆ ಒಂದು ಕಣ್ಣನ್ನು ಮಾತ್ರ ಕೊಡುವೆ. ಇನ್ನೊಂದು ಕಣ್ಣು ಮೊದಲಿನಂತೆಯೇ ಇರಲಿ" ಎಂದರು. ಒಂದು ಕಣ್ಣು ಬಂದರೆ ಸಾಕೆಂದು ಹೇಳಿ ಗಂಗವ್ವನು ಆನಂದಬಟ್ಟಳು. ಬಂದ ಕಣ್ಣಿನಿಂದ ಸ್ವಾಮಿಯ ಪಾದದರ್ಶನ ಮಾಡಿಕೊಂಡು ಸಂತುಷ್ಟಳಾದಳು. ಮುಂದೆ ಆಕೆಯು ಹೊಸಹಳ್ಳಿಯ ಶ್ರೀ ಬೂದೀಶ್ವರ ಸೇವೆಯಲ್ಲಿಯೇ ಕಾಲ ಕಳೆದು ಮಠದಲ್ಲಿಯೇ ಐಕ್ಯವಾದಳು. ಆಕೆಯ ಸ್ಮರಣಾರ್ಥದಲ್ಲಿ ಒಂದು ಗದ್ದುಗೆಯನ್ನು ಕಟ್ಟಿಸಿದ್ದಾರೆ.

## ನಾಗಲಿಂಗಯತಿ

ಬೂದಿಯೋಗಿಯು ನವಿಲುಗುಂದಕ್ಕೆ ಬಂದ ಸುದ್ದಿಯು ನಾಗಲಿಂಗಾರೂಢನಿಗೆ ತಿಳಿಯಿತು. ಅವರು ಬಂದಾಕ್ಷಣವೇ ತಾನು ಅವರ ಮಗನೋ ಏನೋ ಎಂಬಂತೆ ಅವರಿಗೆ ತೆಕ್ಕೆ ಬಿದ್ದು ಗಾಢಪ್ರೇಮವನ್ನು ವ್ಯಕ್ತಪಡಿಸಿದನು. ಬೂದಿಯೋಗಿಯಾದರೂ ನಾಗಲಿಂಗ ಯತಿಯನ್ನು ತಮ್ಮ ಮಗನಂತೆಯೇ ಕಂಡು ಅವನು ಕಾಡಿ ಬೇಡಿದ ವಸ್ತುಗಳನ್ನು ಕೊಟ್ಟು ಸಮಾಧಾನ ಪಡಿಸುತ್ತಿದ್ದರು. ನಾಗಲಿಂಗೇಶನಿಗೆ ಅವರು ಹಣ್ಣು ತಿನಿಸಿ, ಹಾಲು ಕುಡಿಸಿ ತಾಯಿಯಂತೆ ಚಪ್ಪಿ ಬಡಿದು ಮಲಗಿಸುತ್ತಿದ್ದರು. ನಾಗಲಿಂಗನು ಬೂದೀಶನಿಗೆ ಯಾವಾಗಲೂ ಅಪ್ಪಾಯೆಂದೇ ಸಂಬೋಧಿಸುವನು. ಹಠ ಹಿಡಿದು ಕಾಡಿದಾಗ ಬೂದೀಶನು ತನ್ನ ಮಗನನ್ನು ತಾಯಿಯು ರಮಿಸುವಂತೆ ರಮಿಸುತ್ತಿದ್ದನು. ಈ ಪ್ರಕಾರ ತಂದೆಮಕ್ಕಳ ಲೀಲೆಯು ಕೆಲದಿನ ನಡೆಯಿತು.

ಒಂದು ದಿನ ನಾಗಲಿಂಗಯತಿಯು ಬೂದೀಶನ ಮಹಿಮೆಯನ್ನು ಜನಗಳಿಗೆ ಗೊತ್ತು ಮಾಡಿಕೊಡಬೇಕೆಂದು ಅವರಿದ್ದ ಉಪವನದ ನಾನಾ ಪ್ರಕಾರದ ಪುಷ್ಪ ಫಲಗಳನ್ನು ತಾನೇ ಹರಿದು ಹರಿದು ಚಲ್ಲಿ ಊರೊಳಗೆ ಹೋಗಿ "ಬೂದೀಶನಿಗೆ ಹುಚ್ಚು ಹಿಡಿದಿದೆ ನೋಡಬನ್ನಿ. ತೋಟದೊಳಗಿನ

ಹಣ್ಣು, ಹೂ, ಕಾಯಿಗಳನ್ನು ಹರಿದು ಸೂರೆ ಮಾಡಿಬಿಟ್ಟಿದ್ದಾನೆ." ಎನ್ನಲು ಜನರು ಧಾವಿಸಿ ಬಂದು ಆ ದೃಶ್ಯವನ್ನು ಕಂಡು ಗುಜು ಗುಜು ಮಾತಾಡ ಹತ್ತಿದರು. ಈ ಗಲಾಟೆಯನ್ನು ಕೇಳಿ ಗುಡಿಸಲೊಳಗಿದ್ದ ಬೂದೀಶನು ಹೊರಬಂದು ನೋಡುವಷ್ಟರಲ್ಲಿ ಹೂ ಕಾಯಿ ಫಲಗಳು ಅಲ್ಲಲ್ಲಿ ನೆಲದಮೇಲೆ ಬಿದ್ದಿದ್ದವು. ಇದು ನಾಗಲಿಂಗನ ಆಟವೆಂದು ತಿಳಿದು ಅವರು ಆ ಹೂ ಕಾಯಿಗಳನ್ನು ಆಯಾಯ ಗಿಡಗಳಿಗೆ ಅಂಟಿಸಲು ಅವು ಮೊದಲಿನಂತೆ ಗಿಡ ಗಳಿಗೆ ಹತ್ತಿಕೊಂಡವು. ಈ ಲೀಲೆಯನ್ನು ಕಂಡು ಜನರಿಗೆ ಪರಮಾಶ್ಚರ್ಯ ವಾಗಿ ಬೂದೀಶನನ್ನು ಕೊಂಡಾಡಹತ್ತಿದರು. ಆಗ ನಾಗಲಿಂಗನು "ಅಪ್ಪಾ ನನಗೆ ಬೆಂಡು ಬತ್ತಾಸ ಕೊಡಿಸು, ಚೆಂಡು ಬುಗರಿ ಕೊಡಿಸು, ಗುಂಡು ಕೊಡಿಸು" ಎಂದು ಹಟ ಹಿಡಿಯಲು ಅವರು ತಮ್ಮ ತುಂಡು ಜೋಳಿಗೆಯಿಂದ ಅವನು ಬೇಡಿದ ವಸ್ತುಗಳನ್ನೆಲ್ಲ ಕೊಟ್ಟು ಸಮಾಧಾನ ಪಡಿಸಿದರು. ಆಗ ನಾಗ ಲಿಂಗನು "ಅಪ್ಪಾ, ನಿನಗೆ ಬಹಳ ಕಾಡಿದೆನು. ಕಾಡಿದುದು ಲೇಸಾಗಲಿಲ್ಲವೇ?" ಎಂದು ನಕ್ಕನು. ಯೋಗಿಗಳು ನವಿಲುಗುಂದದಲ್ಲಿ ಬೂದಿಬಸವನ ವಿಗ್ರಹ ವನ್ನು ಸ್ಥಾಪಿಸಿ ನಾಗಲಿಂಗಯತಿಯನ್ನು ಜೊತೆಗೊಂಡು ಮುಂದೆ ಸಂಚಾರವನ್ನು ಬೆಳೆಸಿದರು.

## ನರಗುಂದ

ನವಿಲುಗುಂದದಿಂದ ಬೂದೀಶನು ನರಗುಂದಕ್ಕೆ ದಯಮಾಡಿಸಿ ಒಂದು ವಿಶಾಲವಾದ ವಟುವೃಕ್ಷದ ಕೆಳಗೆ ಧ್ವಜವೂರಿದನು. ಆ ಸ್ಥಲವು ನಿರ್ಜನವಾ ಗಿಯೂ ಪ್ರಶಸ್ತವಾಗಿಯೂ ಇದ್ದಿತು. ಆ ಆಲದಮರದಲ್ಲಿ ಒಂದು ಬ್ರಹ್ಮ ಪಿಶಾಚಿಯು ವಾಸವಾಗಿದ್ದಿತು. ಅಲ್ಲಿ ಯಾರಾದರೂ ಮರೆತು ರಾತ್ರಿ ವಾಸ ಮಾಡಿದರೆ ಆ ಪಿಶಾಚಿಯು ಅವರನ್ನು ನಡುರಾತ್ರಿಯಲ್ಲಿ ಕೊಂದುಬಿಡುತ್ತಿತ್ತು. ಬೂದೀಸ್ವಾಮಿಗಳು ಆ ಗಿಡದಡಿಯಲ್ಲಿ ಕುಳಿತದ್ದನ್ನು ಕೆಲವು ದನ ಕಾಯುವ ಹುಡುಗರೂ ಒಕ್ಕಲಿಗರೂ ನೋಡಿ "ಸ್ವಾಮಿಗಳೇ, ಇಲ್ಲಿ ನೀವು ರಾತ್ರಿ ವಾಸ ಮಾಡಿದರೆ ಬ್ರಹ್ಮರಾಕ್ಷಸವು ನಿಮ್ಮನ್ನು ಕೊಲ್ಲುವದು. ಕಾರಣ ಊರೊಳಗೆ ಬಂದು ಒಂದು ಮಠದಲ್ಲಿ ವಾಸಿಸಬೇಕೆಂದು ಬೇಡಿಕೊಂಡರು. ಅದಕ್ಕೆ ಸ್ವಾಮಿ ಗಳು "ಬ್ರಹ್ಮರಾಕ್ಷಸವು ನನ್ನನ್ನು ಕೊಂದರೆ ಕೊಲ್ಲಲಿ, ತಿಂದರೆ ತಿನ್ನಲಿ. ಎಂದಿ ಗಾದರೊಂದು ದಿನ ಈ ದೇಹವು ಬಿದ್ದು ಮಣ್ಣುಪಾಲಾಗತಕ್ಕುದೇ ಬ್ರಹ್ಮ ರಾಕ್ಷಸ ನನ್ನನ್ನು ತಿನ್ನುತ್ತಿದ್ದರೆ ನಾನು ಧನ್ಯನೇ ಸರಿ" ಎಂದು ನುಡಿದರು. ಊರವರಿಗೆ ಈ ಸುದ್ದಿ ಮುಟ್ಟಲು ಅವರು ಧಾವಿಸಿ ಬಂದು ಯೋಗಿಗಳಿಗೆ

ಅಲ್ಲಿರಬೇಡಿರೆಂದು ಬಹು ದೈನ್ಯದಿಂದ ಬೇಡಿಕೊಂಡರು. ಅವರು ಕೇಳಲಿಲ್ಲ. ಅವರು ಹೇಳಿದುದೇನೆಂದರೆ "ತಮ್ಮಗಳಿರಾ, ನನಗೆ ರಾಕ್ಷಸನ ಅಂಜಿಕೆಯಿಲ್ಲ. ನನಗೆ ಮಡದಿ ಮಕ್ಕಳ ಸಂಸಾರವಂತೂ ಇಲ್ಲವೇ ಇಲ್ಲ. ಈ ದೇಹವನ್ನು ಯಾತರ ಸಲುವಾಗಿ ರಕ್ಷಿಸಿಕೊಳ್ಳಬೇಕು ? ನಮ್ಮೆಲ್ಲರನ್ನು ಕಾಯುವವ ಶಿವ ನಿದ್ದಾನೆ. ನೀವು ಹೋಗಿರೆಂದು ಸ್ಪಷ್ಟ ನುಡಿಯಲು ನಿರುಪಾಯರಾಗಿ ಜನರು ನಾಳೆ ಯೋಗಿಗಳನ್ನು ನಾವು ಕಾಣಲಾರೆವು" ಎನ್ನುತ್ತ ಹೊರಟು ಹೋದರು.

ಮಧ್ಯರಾತ್ರಿಯಲ್ಲಿ ಶಿವಯೋಗಿಗಳು ಶಿವಪೂಜೆಗೆ ಕುಳಿತಾಗ ಕರಕರನೆ ಹಲ್ಲು ಕಡೆಯುತ್ತ ಬ್ರಹ್ಮರಾಕ್ಷಸವು ಮರವನ್ನು ನಡುಗಿಸುತ್ತ ಅರ್ಭಟಿಸಿ ಬಂದು "ನೀನಾರೆಲೋ ಮಾನವಾ, ಈ ಮಧ್ಯರಾತ್ರಿಯಲ್ಲಿ ಏನು ನಡೆಸಿರುವೆ. ಕ್ರೂರನಾದ ನನ್ನ ಹಸಿವನ್ನು ಹಿಂಗಿಸಲು ಬಂದೆಯಾ ? ಬಾ, ಈ ಖಡ್ಗ ದಿಂದ ನಿನ್ನ ಶಿರವನ್ನು ಹಾರಿಸಿ ನಿನ್ನ ಮಾಂಸ ಭಕ್ಷಣ ಮಾಡಿ ಹಸಿವನ್ನು ಹಿಂಗಿ ಸಿಕೊಳ್ಳುವೆ." ಎಂದು ತನ್ನ ಖಡ್ಗದಿಂದ ಹೊಡೆಯಲು ಪೂಜ್ಯರಿಗೆ ಏನೂ ಗಾಯವಾಗದೆ ಗಾಳಿಯಲ್ಲಿ ಹೊಡೆದಂತಾಯಿತು. ರಾಕ್ಷಸನಿಗೆ ಪರಮಾಶ್ಚರ್ಯ ವಾಯಿತು. ಕೈಯೊಳಗಿನ ಖಡ್ಗ ಕೆಳಗೆ ಬಿದ್ದಿತು. ಅವರ ಶಿವಪೂಜೆಯನ್ನು ನೋಡಿ ರಾಕ್ಷಸನ ಹಿಂದಿನ ಜನ್ಮದ ಪಾಪವೆಲ್ಲ ಪರಿಹಾರವಾಯಿತು. ಆ ರಾಕ್ಷಸವು ಪುರುಷಾಕಾರದಿಂದ ಬಂದು ಯೋಗಿಗಳ ಪಾದಕ್ಕೆ ಪೊಡಮಟ್ಟನು. ತಮ್ಮಾ ನೀನಾರೆಂದು ಕೇಳಲು ಆ ರಾಕ್ಷಸನು "ಏನು ಹೇಳಲಿ, ಗುರುವೇ ನಾನು ಬಹು ಪಾಪಿಷ್ಠನು. ನಾನು ಶ್ರೀಮಂತನಿದ್ದರೂ ದಾನ ಧರ್ಮ ಮೊದಲಾದ ಯಾವ ಪುಣ್ಯ ಕಾರ್ಯಗಳನ್ನು ಮಾಡಲಿಲ್ಲ. ಪರರ ದುಡ್ಡನ್ನು ಸೆಳೆದೆನು. ಪರಸ್ತ್ರೀ ಯರನ್ನು ಕೆಡಿಸಿದೆನು. ಪರಹಿಂಸೆ ಮಾಡಿದೆನು. ಧನದಾಶೆಯಿಂದಲೇ ಸತ್ತು ಬ್ರಹ್ಮ ಪಿಶಾಚಿಯಾದೆ. ತಮ್ಮ ದರ್ಶನದಿಂದ ನನ್ನ ಪಾಪವು ದೂರಾಯಿತು." ಎಂದು ಪಾದಕ್ಕೆ ನಮಸ್ಕರಿಸಲು ಅವರು ಆತನ ಮಸ್ತಕದ ಮೇಲೆ ತಮ್ಮ ಹಸ್ತವನ್ನಿರಿಸಲು ಆತನ ರಾಕ್ಷಸ ಜನ್ಮ ನೀಗಿ ಆತನು ಮುಕ್ತನಾಗಿ ಮಾಯ ವಾದನು. ಜನರು ಬ್ರಹ್ಮರಾಕ್ಷಸವು ಆ ಆಲದ ಗಿಡವನ್ನು ಬಿಟ್ಟು ಹೋದ ದ್ದನ್ನು ತಿಳಿದು ಅದು ಶ್ರೀ ಶಿವಯೋಗಿಗಳ ಪವಾಡವೆಂದರಿದು ಅವರ ದರ್ಶ ನಕ್ಕೆ ಬಂದು ಪಾವನರಾದರು. ಆ ವಟವೃಕ್ಷದ ಬುಡದಲ್ಲಿ ಭಕ್ತರ ನೆರವಿನಿಂದ ಬೂದೀಶ್ವರನು ಬೂದಿಬಸವನ ಮೂರ್ತಿಯನ್ನು ಸ್ಥಾಪಿಸಿದರು.

## ನರಗುಂದ ಬಾಬಾಸಾಹೇಬ

ನರಗುಂದ ವಿರಕ್ತಮಠದ ಶ್ರೀ ಚೆನ್ನಬಸವ ಸ್ವಾಮಿಗಳ ಕೀರ್ತಿಯನ್ನು ಕೇಳಿ ಬೂದೀಶ್ವರರು ಅವರ ದರುಶನಕ್ಕಾಗಿ ಬಂದರು. ಮಠದ ಸ್ವಾಮಿಗಳು ಅವರನ್ನು ಸ್ವಾಗತಿಸಿ ತರೆದುಕೊಂಡು ಬಂದು ಉಚ್ಚ ಪೀಠದಲ್ಲಿ ಕುಳ್ಳಿರಿಸಿ ಸತ್ಕರಿಸಿದರು. ಕೆಲ ದಿನ ಸ್ವಾಮಿಗಳ ಆಗ್ರಹದ ಮೇರೆಗೆ ಬೂದೀಶ್ವರರು ಅಲ್ಲಿಯೇ ತಂಗಿದ್ದರು. ಒಂದು ದಿನ ನರಗುಂದ ಬಾಬಾಸಾಹೇಬ ದೊರೆಯು ಬೂದೀಶ್ವರರು ಬಂದ ಸುದ್ದಿ ಕೇಳಿ ಅವರ ದರ್ಶನಕ್ಕೆ ಪರಿವಾರಸಹಿತ ಕಾಯಿ ಕಪ್ಪುರ, ಪುಷ್ಪ ಫಲಗಳನ್ನು ತಬಕದಲ್ಲಿ ತುಂಬಿಕೊಂಡು ತಂದು ಸ್ವಾಮಿಗಳ ಮುಂದಿಟ್ಟು ನಮಸ್ಕರಿಸಿದರು. ಯೋಗಿಗಳು "ದೊರೆಯೇ, ಬಾ ಕುಳಿತುಕೋ," ಎಂದಿಷ್ಟೇ ಹೇಳಿದರು. ಬೇರೆ ಯಾವ ಕುಶಲ ಪ್ರಶ್ನೆಯನ್ನೂ ಕೇಳಲಿಲ್ಲ. ಅವರಿಗೆ ಒಳಿತಾಗಲೆಂದು ಆಶೀರ್ವದಿಸಲೂ ಇಲ್ಲ. ಅದರಿಂದ ದೊರೆಯು ಖಿನ್ನನಾಗಿರಲು ಪರಿವಾರದವರು "ದೊರೆಗಳೇ ಬಂದದ್ದೇ ತಪ್ಪಾಯಿತು. ಮಂದಮತಿ ಯಿವನೆಂಥ ಯೋಗಿಯು ! ಬಂದವರು ಯಾರೆಂಬುದರ ಅರಿವು ಸಹ ಇರಬಾರದೇ ಇವನಿಗೆ ?" ಎಂದು ಹಂಗಿಸಿ ನುಡಿದರು. ಆಗ ಯೋಗಿಯು "ದೊರೆಯೇ, ಮೃಡನ ಇಚ್ಛೆಯನ್ನು ಮೀರುವದು ಯಾರಿಗೂ ಶಕ್ಯವಿಲ್ಲ. ಪಡೆದ ಹಣೆಬರಹವನ್ನು ತೊಡೆದು ಹಾಕಲು ಶಿವನು ಕೂಡ ಅಸಮರ್ಥನೇ. ನಿನ್ನ ಭೋಗಭಾಗ್ಯವು ತೀರುತ್ತ ಬಂದಿದೆ. ಇನ್ನು ಆರು ತಿಂಗಳಿಗೆ ನಿನ್ನ ರಾಜ್ಯವು ಸೂರೆ ಹೋಗುವುದು ತಪ್ಪದು. ನಿನ್ನನ್ನು ನಂಬಿದವರೇ ನಿನ್ನನ್ನು ಹಾಳು ಮಾಡುವರು. ವಿಧಿಲಿಖಿತವನ್ನು ತಪ್ಪಿಸುವವರಾರು ? ಜಗದಲ್ಲಿ ಯಾವುದೂ ಸ್ಥಿರವಲ್ಲ. ಆದಕ್ಕಾಗಿ ದೊರೆಯೇ ಚಿಂತಿಸಬೇಡ. ನೀನು ಬಂದು ನಮಸ್ಕಾರ ಹಾಕಿದಾಗಲೇ ನಿನ್ನ ಮುಖದ ಮೇಲೆ ವಿಧಿಲಿಖಿತವನ್ನು ನಾನು ಓದಿದೆನು.

ದೊರೆಯು ಏನೊಂದನಾಡದೆ ಯೋಗಿಗೆ ನಮಸ್ಕರಿಸಿ ಹೊರಟು ಹೋದನು. ಮುಂದೆ ಆರು ತಿಂಗಳಲ್ಲಿ ಸಿಪಾಯಿಗಳ ಬಂಡಾಯವೆದ್ದು ಆಂಗ್ಲರೊಡನೆ ಯುದ್ಧ ಮಾಡುವ ಪ್ರಸಂಗ ಬಂದಿತು. ದೊರೆಯ ವಿಶ್ವಾಸಿಕ ಜನರು ಆಂಗ್ಲರಿಗೆ 'ಫಿತೂರ' ಆಗಿ ನರಗುಂದ ರಾಜ್ಯವನ್ನು ಮಣ್ಣುಗೂಡಿಸಿದರು. ಮಡದಿ ಮಕ್ಕಳು ಸಹಿತ ದೊರೆಯು ಪಾರಾಗಿ ಹೋಗಿ ದುರ್ಮರಣಕ್ಕೀಡಾದನು. ಕೊನೆಗೆ ಯೋಗಿಯ ಮಾತು ಸುಳ್ಳಾಗಲಿಲ್ಲ.

# ೧೪ನೆಯ ಸಂಧಿ

## ರೋಣ

ಒಂಬದಿನ ಕಡು ಬೇಸಿಗೆಯಲ್ಲಿ ಬೂದೀಶ್ವರರು ರೋಣವೆಂಬ ಗ್ರಾಮಕ್ಕೆ ಹಾದಿ ಹಿಡಿದು ಹೋಗುತ್ತಿರುವಾಗ ದಾರಿಯಲ್ಲಿ ಒಂದು ಗಬ್ಬದೆಮ್ಮೆಯು ಕರುವನ್ನು ಹಾಕಲು ಬಿದ್ದುಕೊಂಡಿತ್ತು. ಎಮ್ಮೆಯ ಒಡೆಯನಾದ ಕೆಂಚಪ್ಪನಿಗೆ ಆ ಎಮ್ಮೆಯು ಈದರೆ ಅದರ ಕರುವನ್ನು ೭-೮ ಮೈಲು ದೂರವಿರುವ ರೋಣಕ್ಕೆ ಹೇಗೆ ಹೊತ್ತುಕೊಂಡು ಹೋಗಬೇಕೆಂಬುದು ದೊಡ್ಡ ಸಮಸ್ಯೆಯಾಗಿದ್ದಿತು. ಕರುವಿನ ತಲೆ ಹಾಗೂ ಎರಡು ಕಾಲುಗಳು ಕಡೆಗೆ ಬಂದಿದ್ದವು. ಎಮ್ಮೆಯು ಬಹಳೇ ಚಡಪಡಿಸುತ್ತಿತ್ತು. ಕರುವು ಪೂರಾ ಕಡೆಗೆ ಬರಲೊಲ್ಲದು. ಅಷ್ಟರಲ್ಲಿ ಶಿವಯೋಗಿಗಳು ಅಲ್ಲಿಗೇ ಬಂದುದನ್ನು ಕಂಡು ಕೆಂಚಪ್ಪನು ಸಾಷ್ಟಾಂಗವೆರಗಿ "ಬುದ್ಧೀ, ಈ ಎಮ್ಮೆ ಈದರೆ ನಾನು ಆ ಕರುವನ್ನು ಬಹು ದೂರ ಹೇಗೆ ಹೊತ್ತುಕೊಂಡು ಹೋಗಲಿ ? ನನಗೆ ತಾವೇ ಗತಿಯೆಂದು ದೈನ್ಯದಿಂದ ಬೇಡಿಕೊಂಡನು. ಆಗ ಬೂದೀಶನು ಆ ಎಮ್ಮೆಯ ಮೈಗೆಲ್ಲ ಭಸ್ಮವನ್ನು ಹಚ್ಚಲು ಅದು ಚಪಲತೆಯಿಂದ ಎದ್ದು ನಿಂತಿತು. ಕಡೆಗೆ ಬಂದ ಕರುವಿನ ತಲೆ ಕಾಲುಗಳು ಪುನಃ ಒಳ ಸೇರಿದವು. ಎಮ್ಮೆ ಹಾಗೆಯೆ ದಾರಿ ಹಿಡಿದು ಹೋಗಿ ರೋಣದಲ್ಲಿ ಆತನ ಮನೆಯಲ್ಲಿ ಈಯಿತು. ಈ ಸುದ್ದಿಯು ಊರಲ್ಲೆಲ್ಲ ಹಬ್ಬಿ ಜನರು ಬೂದೀಶನ ಲೀಲೆಯನ್ನು ಕೊಂಡಾಡಿದರು. ಬೂದೀಶನು ರೋಣದಲ್ಲಿ ಕೆಲದಿನವಿದ್ದು ತಮ್ಮ ಬೋಧಾಮೃತದಿಂದ ಭಕ್ತರನ್ನು ತಣಿಸಿದನು. ಭಕ್ತರು ಅವರಿಗಾಗಿ ಅಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟರು. ಅದು ಬೂದೀಮಠವೆಂದು ಹೆಸರಾಗಿದೆ.

## ನರೆಗಲ್ಲು

ಯೋಗಿಗಳು ರೋಣದಿಂದ ನರೆಗಲ್ಲಿಗೆ ಬಂದರು. ಅಲ್ಲಿ ಪರಮ ಪತಿವ್ರತೆಯಾದ ಫಾತಿಮಾ ಯೆಂಬ ಮುಸ್ಲಿಂ ಸ್ತ್ರೀಯಳು ಸ್ವಾಮಿಗಳಿಗೆ ಅಭಿವಂದಿಸಿ "ಗುರುವೇ, ನನಗೆ ಇನ್ನುವರೆಗೆ ಮಕ್ಕಳಾಗಿಲ್ಲ. ಮಕ್ಕಳನ್ನು ಕೊಟ್ಟು ಕಾಪಾಡಬೇಕೆಂದು ಬೇಡಿಕೊಂಡಳು. ಆಗ ಅವರು ತಮ್ಮ ಜೋಳಿಗೆಯಿಂದ ಎರಡು

ಉತ್ತತ್ತಿಗಳನ್ನು ಕೊಟ್ಟು, "ಮಗಳೇ, ನಿನಗೆ ಇಬ್ಬರು ಸುಪುತ್ರರು ಜನಿಸುವರು. ಹಿರಿಯ ಮಗನು ದೊಡ್ಡ ಶರಣನಾಗುವನು. ಆತನನ್ನು ನನಗೊಪ್ಪಿಸು. ಎರಡನೆಯ ಮಗನು ಸುಶೀಲನೂ ಶ್ರೀಮಂತನೂ ಆಗುವನು. ಆತನು ನಿನಗಿರಲಿ. ನೀನು ಜಳಕ ಮಾಡಿ ನಾನು ಕೊಟ್ಟ ಉತ್ತತ್ತಿಗಳನ್ನು ತಿಂದುಬಿಡು." ಎಂದು ಆಜ್ಞಾಪಿಸಿದರು. ಅವಳು ತಮ್ಮಪ್ಪಣೆಯಂತೆ ನಡೆದುಕೊಳ್ಳುವೆನೆಂದು ನಮಸ್ಕರಿಸಿ ಹೋದಳು. ಮುಂದೆ ಆಕೆಗೆ ಎರಡು ಮಕ್ಕಳು ಹುಟ್ಟಿದವು. ಚೊಚ್ಚಲ ಮಗನಿಗೆ ಹುಸೇನಸಾಬ ಎಂದು ಹೆಸರಿಟ್ಟು ಅವನನ್ನು ತಾಯಿಯು ಬೂದೀಶ್ವರನಿಗೆ ಒಪ್ಪಿಸಿದಳು ಹುಸೇನಸಾಬನಿಗೆ ವೈರಾಗ್ಯ ಹುಟ್ಟಿ ಆತನು ಮನೆಮಾರು ತೊರೆದು ಅಡ್ನೂರ ಎಂಬ ಗ್ರಾಮದಲ್ಲಿ ನೆಲಸಿ ಅಡ್ನೂರ ಶರಣನೆಂದು ಹೆಸರು ಪಡೆದನು.

ಒಂದು ದಿನ ಆತನು ರೈಲುಗಾಡಿಯು ಹೋಗುವದನ್ನು ಕಂಡು "ನಿಲ್ಲು, ನಿಲ್ಲೆಂ"ದು ಕೈ ಮಾಡಿ ಕೂಗಿದನು. ಹೊರಟ ಗಾಡಿಯು ನಿಂತು ಬಿಟ್ಟಿತು. ಎಷ್ಟು ಪ್ರಯತ್ನಿಸಿದರೂ ಮುಂದೆ ಸರಿಯಲಿಲ್ಲ. ಜನರಿಗೆಲ್ಲ ಪರಮಾಶ್ಚರ್ಯವಾಯಿತು. ಅಷ್ಟರಲ್ಲಿ ಒಬ್ಬ ಪ್ರವಾಸಿಯು ದೂರದಲ್ಲಿ ಕೈಮಾಡಿ ನಿಂತಿದ್ದ ಅಡ್ನೂರ ಶರಣನನ್ನು ನೋಡಿ, "ಅಕೋ ಗಾಡಿ ನಿಲ್ಲಿಸಿದವನು ಅಡ್ನೂರ ಶರಣನು. ಆತನನ್ನು ಕರೆತನ್ನಿ" ಎನ್ನಲು ಕೆಲವರು ಓಡಿ ಹೋಗಿ ಅವನನ್ನು ಕರೆದುಕೊಂಡು ಬಂದು ಗಾಡಿಯಲ್ಲಿ ಕುಳ್ಳಿರಿಸಿದರು. ಆಗ ಶರೀಫರು "ಇನ್ನು ಹೋಗೋಣ ನಡೆಯಿರಿ" ಎನ್ನಲು ಗಾಡಿಯು ಚಾಲು ಆಯಿತು. ಮುಂದೆ ಆ ಶರೀಫನು ಬೂದಿಯೋಗಿಯ ಬಳಿಗೆ ಬಂದು ಅವರ ಶಿಷ್ಯನಾಗಿ ಸೇವೆ ಮಾಡಿದನು. ಒಬ್ಬ ಭಕ್ತನು ಶರೀಫರಿಗೆ ಒಂದು ಮಂಚವನ್ನು ಮಾಡಿಸಿ ಕೊಟ್ಟಿರಲು ಅದು ತನ್ನ ಗುರು ಬೂದೀಶ್ವರನಿಗಿರಲೆಂದು ಅದರ ಮೇಲೆ ಅವರ ಹಾವುಗೆಗಳನ್ನಿರಿಸಿ ಪೂಜಿಸಿದನು. ಅದನ್ನು ತನಗಾಗಿ ಎಂದಿಗೂ ಉಪಯೋಗಿಸಿಕೊಳ್ಳಲಿಲ್ಲ. ಇಂದಿಗೂ ಆ ಮಂಚವು ಮಾರುತಿಯ ಮಂದಿರದಲ್ಲಿದ್ದು ಭಕ್ತರಿಂದ ಪೂಜೆಗೊಳ್ಳುತ್ತ ನಡೆದಿಹುದು.

ನರೆಗಲ್ಲಿನ ಗೌಡನಿಗೆ ಮಕ್ಕಳಿರಲಿಲ್ಲ ಒಂದು ದಿನ ಆತನು ಬೂದೀಶ್ವರರ ದರ್ಶನ ಹೊಂದಿ ತನ್ನ ಮನದಿಚ್ಛೆಯನ್ನು ಯೋಗಿಯ ಪಾದಕ್ಕೆ ಬಿನ್ನವಿಸಿಕೊಂಡನು. ಯೋಗಿಯು ಆತನಿಗೆ ಒಬ್ಬ ಸುಪುತ್ರನನ್ನು ದಯಪಾಲಿಸಿ ಆ ಮಗುವಿಗೆ ಪ್ರಭುಗೌಡನೆಂದು ಹೆಸರಿಡಲು ಆಜ್ಞಾಪಿಸಿದರು. ಆ ಪ್ರಕಾರ ಗೌಡನಿಗೆ ಗಂಡು ಹುಟ್ಟಿ ಪ್ರಭುಗೌಡನಾಮದಿಂದ ಒಳ್ಳೆ ಹೆಸರಾದನು. ಆತನು ಶಿವಯೋಗ ಮಂದಿರಕ್ಕೆ ದೊಡ್ಡ ಮೊತ್ತದ ಧನಸಹಾಯ ಮಾಡಿದ್ದಾನೆ.

## ಬಿಂಕದಕಟ್ಟಿ

ಮುಂದೆ ಬೂದೀಶನು ಬಿಂಕದಕಟ್ಟಿ ಗ್ರಾಮಕ್ಕೆ ಬಂದು ಊರ ಹೊರಗಿನ ಉಪವನದಲ್ಲಿ ತಂಗಿರಲು ಭಕ್ತರು ಅವರ ದರುಶನಕ್ಕೆ ಬಂದರು. ಅವರಲ್ಲಿ ರಾಮರಡ್ಡೆಪ್ಪನೆಂಬ ಕಿವುಡನೂ ಒಬ್ಬನಾಗಿದ್ದನು. ಆತನು ಸ್ವಾಮಿಗಳಿಗೆ ಪೊಡಮಟ್ಟಾಗ ಅವರು “ತಮ್ಮಾ, ನೀನಾರು ? ನಿನ್ನ ಹೆಸರೇನು ? ನಿನ್ನ ಮಡದಿ ಮಕ್ಕಳು ಸುಖವಾಗಿದ್ದಾರೆಯೇ ?” ಇತ್ಯಾದಿ ಪ್ರಶ್ನೆಗಳನ್ನು ಕೇಳಲು ಆತನು ಮೌನದಿಂದಿದ್ದನು. ನೆರೆದ ಜನರು ನಕ್ಕು ಆತನು ಕಿವುಡನೆಂದು ಯೋಗಿಗಳಿಗೆ ತಿಳಿಸಿದರು. ಆಗ ಅವರು “ಹಾಗಾದರೆ, ನಾವು ಕೇಳಿದ ಪ್ರಶ್ನೆಗಳೆಲ್ಲ ವ್ಯರ್ಥವಾದವಲ್ಲ ! ಎಂದು ಹೇಳಿ ಸನ್ನೆ ಮಾಡಿ ಆತನನ್ನು ಹತ್ತಿರ ಕರೆದು ಕಿವಿಯಲ್ಲಿ ಮಂತ್ರವನ್ನುಚ್ಚರಿಸಿದರು. ಆಗ ಕಿವುಡನಿಗೆ ಕಿವಿಗಳು ಕೇಳ ಹತ್ತಿದವು. ಸ್ವಾಮಿಗಳು ಕೇಳಿದ ಪ್ರಶ್ನೆಗಳೆಲ್ಲ ನೆನಪಾಗಿ ಅವುಗಳಿಗೆ ಸರಿಯಾಗಿ ಉತ್ತರ ಕೊಟ್ಟನು.

ಆ ಊರಲ್ಲಿ ತಿರ್ಲಾಪೂರ ಮನೆತನದ ನಿಂಗಮ್ಮನೆಂಬ ಸಾಧ್ವಿಯು ತನ್ನ ಆಕಳ ಹಾಲು ಹಿಂಡಿ ಬೂದೀಶಯೋಗಿಗಳಿಗೆ ನಿತ್ಯ ಹಾಲು ಕೊಡುತ್ತಿದ್ದಳು. ಅಲ್ಲದೆ ನಿತ್ಯ ಅವರ ಕುಟೀರದ ಅಂಗಳವನ್ನುಡುಗಿ ಸ್ವಚ್ಛ ಮಾಡುತ್ತಿದ್ದಳು. ನೆಲವನ್ನು ಸಾರಿಸುತ್ತಿದ್ದಳು. ಆದರೆ ಪಾಪ ! ಆವಳ ಹಿಂಡುವ ಆಕಳು ಅಕಸ್ಮಾತ್ ಸತ್ತು ಹೋಯಿತು. ಯೋಗಿಗೆ ಹಾಲು ಕೊಡುವಂಥ ಹಾಗೂ ತಮ್ಮ ಉಪಜೀವನಕ್ಕೆ ಅನುಕೂಲವಾಗುವಂಥ ಗೋವು ಸತ್ತದ್ದಕ್ಕಾಗಿ ಅವಳಿಗೆ ಬಹಳೇ ವ್ಯಥೆಯಾಯಿತು. ಇದು ಯೋಗಿಗೆ ತಿಳಿಯಲು ಅವರು “ಅಮ್ಮಾ, ನಿನ್ನ ಮನೆಯಲ್ಲಿ ಕರುಗಳೇನಾದರೂ ಉಂಟೇ” ಎಂದು ಕೇಳಿದರು. ಅವಳು “ತಂದೆಯೇ, ಮೂರು ವರ್ಷದ ಬರಡು ಆಕಳ ಕರುವುಂಟು.” ಎಂದು ಹೇಳಿದಳು. ಅವರು ಅದನ್ನು ತರಹೇಳಿ, ತಂದಬಳಿಕ ಅದರ ಬೆನ್ನನ್ನು ಸವರಿಸಲು ಅದರ ಕೆಚ್ಚಲು ತುಂಬಿ ಮೊಲೆಗಳಿಂದ ಹಾಲು ಹೊರಟವು. ಶಿವಯೋಗಿಯು ಸ್ವತಃ ಹಾಲು ಕರೆದು ಗಡಿಗೆಯನ್ನು ತುಂಬಿದರು. ಆಕೆಯ ಮನೆತನವು ಸಂಪತ್ತಿನಿಂದ ಸಮೃದ್ಧವಾಯಿತು, ಇಂದಿಗೂ ಅವರ ಮನೆಯಲ್ಲಿ ಹೈನ ತಪ್ಪಿಲ್ಲ. ಗುರು ಲಿಂಗ ಜಂಗಮ ಸೇವೆಗೆ ಅದು ಸಲ್ಲುತ್ತಿದೆ.

## ಅಸುಂಡಿ

ಬೂದೀಶ್ವರನು ಬಿಂಕದಕಟ್ಟಿಯಲ್ಲಿದ್ದಾಗ ಅಸುಂಡಿ ಗ್ರಾಮದ ಪ್ರಮುಖರು ಅವರ ದರ್ಶನ ಹೊಂದಿ ಅವರನ್ನು ತಮ್ಮೂರಿಗೆ ಕರೆದುಕೊಂಡು ಬಂದು ಬಸವೇಶ್ವರನ ಗುಡಿಯಲ್ಲಿಳಿಸಿದರು. ದಿನಾಲು ದರ್ಶನಕ್ಕೆ ಅನೇಕ ಸ್ತ್ರೀಪುರುಷರು ಬರತೊಡಗಿದರು. ಒಂದು ದಿನ ಕಾಶಮ್ಮನೆಂಬ ಹುದ್ದಾರ ಮನೆತನದ ಬ್ರಾಹ್ಮಣ ಸಾಧ್ವಿಯು ಬಂದು ಬೂದೀಶ್ವರನಿಗೆ ಅಭಿವಂದಿಸಿ "ಬುದ್ಧೀ, ನಾನು ಬಡವಿಯು ನನ್ನಲ್ಲಿ ತಮಗರ್ಪಿಸಲು ಯಾವ ಕಾಣಿಕೆಯೂ ಇಲ್ಲ. ಆದರೆ ತಮ್ಮ ಪಾದಕ್ಕೆ ಒಂದು ಹೊಸ ಚಪ್ಪಲಿಯ ಜೋಡನ್ನು ತಂದಿದ್ದೇನೆ ಸ್ವೀಕರಿಸಬೇಕೆಂದು ಮುಂದಿಟ್ಟಳು. ಯೋಗಿಗಳು ಆ ಜೋಡನ್ನು ಮೆಟ್ಟಿ ತಮ್ಮ ಹಳೆಯ ಚಪ್ಪಲಿಗಳನ್ನು ಕಳಚಿ ಅವಳ ಉಡಿಯಲ್ಲಿಟ್ಟು "ಅಮ್ಮಾ, ಈ ಪಾದುಕೆಗಳನ್ನು ನೀನು ಜಗುಲಿಯ ಮೇಲಿಟ್ಟು ಪೂಜಿಸು ನಿನ್ನ ಮನೆತನವು ಸಂಪತ್ತಿನಿಂದ ಬೆಳೆಯುವದು." ಎಂದು ಆಶೀರ್ವದಿಸಿದರು. ಆ ಪ್ರಕಾರ ನಡೆದುಕೊಳ್ಳಲು ಆ ಮನೆತನವು ಸಿರಿಸಂಪದಗಳಿಂದ ಅಭಿವೃದ್ಧಿ ಹೊಂದಿತು.

ಮುಂದೆ ಕಾಶಮ್ಮನ ಮೊಮ್ಮಗನಾದ ಶೇಷಪ್ಪನು ಜಗುಲಿಯ ಮೇಲೆ ತೊಗಲಿನ ಜೋಡನ್ನು ಕಂಡು ಸಿಟ್ಟಾಗಿ ಅವನ್ನು ತಿಪ್ಪೆಯಲ್ಲಿ ಬಿಸಾಡಿ ಬಿಟ್ಟನು. ಮುಂದೆ ಅವರ ಮನೆತನವು ಇಳಿತರಕ್ಕೆಬಿದ್ದು ಅಶನಕ್ಕೆ ಅಭಾವವಾಗಿ ಕುಳಿತಿತು. ತಿಪ್ಪೆಯ ಗೊಬ್ಬರ ಹೇರುವ ಭೀಮರಡ್ಡಿಯೆಂಬವನಿಗೆ ಆ ಬಿಸುಟಿದ ಚಪ್ಪಲಿಗಳು ಬಂಗಾರದಂತೆ ಲಕಲಕ ಹೊಳೆಯುತ್ತಿರುವುದನ್ನು ಕಂಡು ಅವು ಬೂದೀಶ್ವರನು ಆಶೀರ್ವದಿಸಿದ ವಸ್ತುಗಳೆಂದು ತಿಳಿದುಕೊಂಡು ಮನೆಗೆ ತಂದು ಜಗುಲಿಯ ಮೇಲಿಟ್ಟು ಪೂಜಿಸತೊಡಗಿದನು. ದಿನೇ ದಿನೇ ಆತನ ಮನೆತನವು ಸಂಪತ್ತಿನಿಂದ ಸಮೃದ್ಧವಾಗತೊಡಗಿತು. ಬೂದೀಶನಲೀಲೆಯು ಸಾಮಾನ್ಯವೇ?

## ಹೊಂಬಳ

ಹೊಂಬಳದ ಭಕ್ತರು ಸೆಟ್ಟಿ ಸಾಹುಕಾರರು ಕೂಡಿ ಯೋಗಿಗಳನ್ನು ತಮ್ಮೂರಿಗೆ ಬರಮಾಡಿಕೊಂಡು ಒಂದು ತೋಟದಲ್ಲಿಳಿಸಿದರು. ಅವರ ಶಿವಪೂಜಾ ವ್ಯವಸ್ಥೆಯನ್ನು ರಾಚಮ್ಮನ ಮಕ್ಕಳಾದ ಗುರುಪಾದಪ್ಪ, ಬೂದಪ್ಪ ಎಂಬವರು ನೋಡಿಕೊಳ್ಳುತ್ತಿದ್ದರು. ಒಂದು ದಿನ ಗುರುಲಿಂಗಪ್ಪನೆಂಬ ಸದ್ಭ

ಕ್ತನು ಗುರುಗಳನ್ನು ಮನೆಗೆ ಕರೆಯಿಸಿಕೊಂಡು ಗಣಪರ್ವವನ್ನೇರ್ಪಡಿಸಿ ಸಾವಿರಾರು ಜನರಿಗೆ ಊಟಕ್ಕೆ ಆಮಂತ್ರಣ ನೀಡಿ ಊರ ಜನರಿಗೆಲ್ಲ ಪ್ರಸಾದ ಸಂತರ್ಪಣೆ ಮಾಡಿದನು. ಶಿವಯೋಗಿಗಳು ಆತನ ದಾಸೋಹ ಬಕ್ತಿಗೆ ಮೆಚ್ಚಿ ಬಸವಣ್ಣನಂತೆ ನೀನೂ ಕೀರ್ತಿಶಾಳಿಯಾಗೆಂದು ಹರಸಿದರು. "ಅನ್ನವೇ ಪ್ರಸಾದ, ಅನ್ನವೇ ಬ್ರಹ್ಮ, ಅನ್ನದಾನಕ್ಕಿಂತ ಹೆಚ್ಚಿನ ದಾನಗಳಿಲ್ಲ" ಎಂದು ಹೇಳಿದರು. ಅವರು ಇಳಿದುಕೊಂಡಿದ್ದ ಉಪವನದಲ್ಲಿ ಪ್ರಭುದೇವರ ಗದ್ದುಗೆಯನ್ನು ಪ್ರತಿಷ್ಠೆಗೊಳಿಸಿ ಅಲ್ಲಿ ದಾಸೋಹ ನಡೆಯಿಸುವಂತೆ ಅಪ್ಪಣೆಮಾಡಿ ಯೋಗಿಗಳು ಸಂತೋಷಬಟ್ಟು ತೆರಳಿದರು.

## ಬ್ಯಾಹಟ್ಟಿ

ಯೋಗಿಗಳು ಬ್ಯಾಹಟ್ಟಿಗೆ ಬರಲು ಭಕ್ತರು ಅವರಿಗೆ ಒಂದು ಕುಟೀರವನ್ನು ಕಟ್ಟಿಸಿ ಶಿವಪೂಜೆಗೆ ಅನುಕೂಲ ಮಾಡಿದರು. ಆ ಊರ ಗೌಡರ ಮನೆತನದ ಚೆನ್ನಮ್ಮನೆಂಬುವವಳಿಗೆ ಹಿರೆಬೇನೆ ಬಂದು ಆಕೆಯ ಕೈಕಾಲ ಬೆರಳುಗಳು ಮೊಂಡವಾಗಿದ್ದವು. ಕೈಕಾಲುಗಳಲ್ಲಿ ಕೀವು ಹುಟ್ಟಿ ಸೋರುತ್ತಿದ್ದವು. ಮೂಗಿಗೆ ದುರ್ಗಂಧವು ತಗಲಿ ಆಗಾಗ್ಗೆ ಮೊಗವನ್ನು ಕಿವುಚುತ್ತಿದ್ದಳು, ಊರೊಳಗಿರಬಾರದೆಂದು ಆಕೆಯನ್ನು ದೂರ ಹೊಲದೊಳಗಿರಿಸಿ ಆಕೆಗೆ ಮನೆಯವರು ಬುತ್ತಿ ನೀರನ್ನು ದೂರದಲ್ಲಿಟ್ಟು ತಿರುಗಿ ಒರುತ್ತಿದ್ದರು. ಆಕೆಯು ಊರಲ್ಲಿ ಶಿವಯೋಗಿಯು ಬಂದಿರುವುದನ್ನು ಕೇಳಿ ರಾತ್ರಿಯಲ್ಲಿ ಒಂದು ಗಿಡದ ಮರೆಗೆ ಕುಳಿತುಕೊಂಡು ಪೂಜ್ಯರ ಸ್ನಾನವಾದಕೂಡಲೆ ಅವರ ಬಚ್ಚಲುದಕದ ರೊಜ್ಜನ್ನು ಮೈಗೆಲ್ಲ ಸವರಿಕೊಳ್ಳುತ್ತಿದ್ದಳು. ಹೀಗೆ ಕೆಲ ದಿನ ಗತಿಸಲು ಅವಳ ವ್ರಣಗಳೆಲ್ಲ ಮಾಯ್ದು ನೆಟ್ಟಗಾದಳು. ಒಂದು ಶುಭ ದಿವಸ ಅವಳು ಸ್ನಾನ ಮಾಡಿ ಮಡಿಬಟ್ಟೆಯನ್ನುಟ್ಟು ಪೂಜ್ಯಪಾದರ ದರುಶನಕ್ಕೆ ಬಂದಳು. ಅವಳ ರೋಗ ನಿವಾರಣೆಯಾದುದನ್ನು ಕೇಳಿ ಜನರಿಗೆ ಪರಮಾಶ್ಚರ್ಯವಾಯಿತು. ಆಗ ಅವಳು ಜನರಿಗೆ ತಾನು ಯೋಗಿಯ ಬಚ್ಚಲ ರೊಜ್ಜನ್ನು ಲೇಪಿಸಿಕೊಂಡು ಗುಣವಾದ ಕಥೆಯನ್ನು ಹೇಳಿದಳು. ಜನರೆಲ್ಲ ಬೂದೀಶನ ಲೀಲೆಯನ್ನು ಹೊಗಳಿದರು. ಭಕ್ತರು ಊರಲ್ಲಿ ಪ್ರಭುಗದ್ದುಗೆಯನ್ನು ಸ್ಥಾಪಿಸಿ ತಮ್ಮ ಸೇವಾಭಕ್ತಿಯನ್ನು ವ್ಯಕ್ತ ಪಡಿಸಿದರು.

# ೧೫ನೆಯ ಸಂಧಿ

## ಕರಮುಡಿ

ಬೂದೀಶಯೋಗಿಯು ಕರಮುಡಿಯೆಂಬ ಗ್ರಾಮಕ್ಕೆ ಬರಲು ಊರ ಸದ್ಭಕ್ತನಾದ ಮುರಿತಮ್ಮಪ್ಪನೆಂಬ ಶ್ರೀಮಂತನು ಊರೊಳಗಿನ ಪ್ರಮುಖರೊಂದಿಗೆ ಹೂ, ಹಣ್ಣು. ಕಾಯಿ, ಕರ್ಪೂರ ತೆಗೆದುಕೊಂಡು ಪೂಜ್ಯಪಾದರಡಿದಾವರೆಗೆ ವಂದಿಸಿ "ಬುದ್ಧೀ, ತಮ್ಮ ನೀಳವಾದ ಜಡೆಯನ್ನು ಇಳುಹಬೇಕೆಂಬ ಪೇಕ್ಷೆಯಾಗಿದೆ. ಅಪ್ಪಣೆಕೊಡಬೇಕೆಂ"ದು ಬೇಡಿಕೊಂಡನು. ಅದಕ್ಕೆ ಯೋಗಿಯು "ಭಕ್ತನೇ. ಜಡೆಯನ್ನಿಳುಹುವದು ಸುಲಭವಲ್ಲ. ಹನ್ನೆರಡು ಸಾವಿರ ಹರಗುರು ಚರರಿಗೆ ಗಣಾರಾಧನೆಮಾಡಿ ಇಳುಹಬೇಕಾಗುತ್ತದೆ, ಆ ಶಕ್ತಿಯು ನಿನ್ನಲ್ಲಿದೆಯೋ?" ಎಂದು ಕೇಳಲು ಆತನು ಎಷ್ಟೆಷ್ಟೂ ಹುದುಗದೆ ತಮ್ಮ ಪಾದಕೃಪೆ ನನಗಿರಲಿ ಅದನ್ನು ನೆರವೇರಿಸುವೆನೆಂದು ಹೃದಯ ತುಂಬಿ ಮಾತನಾಡಲು ಪೂಜ್ಯರು ಒಪ್ಪಿದರು. ಜಡೆಯ ಬಗ್ಗೆ ಒಂದು ಸಮಾಧಿಯನ್ನೇರ್ಪಡಿಸಿ ಅದನ್ನು ತಳಿರು ತೋರಣಗಳಿಂದ ಸಜ್ಜುಗೊಳಿಸಿ ಪೂಜ್ಯರ ಆಜ್ಞಾನುಸಾರ ೧೨ ಸಾವಿರ ಹರಗುರು ಚರ ಮೂರ್ತಿಗಳಲ್ಲದೆ ಇನ್ನೆಷ್ಟೋ ಬಂಧು ಬಾಂಧವರಿಗೂ, ಬಡಬಗ್ಗರಿಗೂ ದೀನ ದಲಿತರಿಗೂ ತೃಪ್ತಿಬಡಿಸಿದನು. ಬಡಬಗ್ಗರು ಪಕ್ವಾನ್ನವನ್ನು ಸೇವಿಸಿ ಮುರಿತಮ್ಮಪ್ಪನನ್ನು ಹಾಡಿಹರಸಿದರು. ಕರಡಿ ಮಜಲು ದೀಪಾರತಿ ಮೊದಲಾದ ಸಡಗರದೊಂದಿಗೆ ಉಪವನದಲ್ಲಿ ಜಟಾ ಸಮಾಧಿಯ ಉತ್ಸವವು ಸಾಂಗವಾಯಿತು. ಇಂದಿಗೂ ಆ ಜಟಾ ಸಮಾಧಿಯು ಯಾತ್ರಿಕರಿಗೆ ಪವಿತ್ರ ಸ್ಥಾನವಾಗಿದೆ. ಆ ಮುರಿತಮ್ಮಪ್ಪನ ಭೋಗ ಭಾಗ್ಯವು ಶಿವಯೋಗಿಗಳ ಕೃಪೆಯಿಂದ ಅಭಿವೃದ್ಧಿ ಹೊಂದಿತು.

## ಕಿರೆಸೂರು

ಸ್ವಾಮಿಗಳು ಹೆಬಸೂರ ಗ್ರಾಮದಲ್ಲಿ ಭಕ್ತರನ್ನು ಅನುಗ್ರಹಿಸುತ್ತಿರುವಾಗ ಕಿರೆಸೂರ ಗ್ರಾಮದ ಭಕ್ತರು ಬಂದು ಬೇಡಿಕೊಂಡು ಅವರನ್ನು ತಮ್ಮೂರಿಗೆ ಕರೆದುಕೊಂಡು ಹೋದರು. ಊರ ಹೊರ ಬದಿಯಲ್ಲಿ ನೀರು ಜುಳು ಜುಳು ಹರಿಯುವ ಹಳ್ಳವಿದ್ದಿತು. ನೆರೆಯಲ್ಲಿ ಬಿಲ್ವ ತರುವೊಂದು ಶೋಭಿಸುತ್ತಿತ್ತು. ಹೂ ಲತೆಗಳಿಗೆ ಕೊರತೆಯಿರಲಿಲ್ಲ. ಶಿವಯೋಗಿಗಳು ಹರ್ಷ ಹೊಂದಿ ಶಿವ

ಪೂಜೆಗಾಗಿ ಅಲ್ಲಿಯೇ ತಂಗಿದರು. ಅಲ್ಲಿ ಪ್ರತಿನಿತ್ಯ ಭಕ್ತರಿಗೆ ಸದ್ಬೋಧೆ ಮಾಡುತ್ತ ಭಕ್ತರ ಸಹಾಯದಿಂದ ಅಲ್ಲಿ ಒಂದು ಪ್ರಭುದೇವರ ಗದ್ದುಗೆಯನ್ನು ಕಟ್ಟಿಸಿದರು.

ಒಂದು ದಿನ ಶಿವಯೋಗಿಗಳು ಕಣ್ಣು ಮುಚ್ಚಿ ಜಪ ಮಾಡುತ್ತಿರುವಾಗ ಒಂದು ನಾಗರಹಾವು ಬಂದು ಅವರ ಕೊರಳನ್ನು ಸುತ್ತಿಕೊಂಡು ಹೆಡೆಯನ್ನು ತೂಗಾಡಹತ್ತಿತು. ಆಗ ಶಿವಯೋಗಿಯು ನಾಗಭೂಷಣ ಶಿವನಂತೆ ಕಂಗೊಳಿಸಿದನು. ಯೋಗಿಯ ತನುವು ಗಂಧಮಯವಾಗಿದ್ದರಿಂದ ಆ ವಾಸನೆ ಹಿಡಿದು ಅದು ಅಲ್ಲಿಗೆ ಬಂದಿತ್ತು. ಸ್ವಲ್ಪ ಹೊತ್ತಿನಲ್ಲಿ ಯೋಗಿಗಳಿಗೆ ನಾಗರಹಾವು ಕೊರಳಿಗೆ ಸುತ್ತಿದ್ದು ತಿಳಿದು "ಹೋಗು ಹೋಗೆಲೆ, ಸಾಕು ನನ್ನೊಡನೇಕೆ ನಿನ್ನಾಟ?" ಎನ್ನಲು ಆ ಹಾವು ಹರಿದು ಹೋಗಿ ಮಾಯವಾಗಿಬಿಟ್ಟಿತು.. ನೆರೆದ ಜನ ಕೈಮುಗಿದು ಯೋಗಿಯ ಮಹಿಮೆಯನ್ನು ಹೊಗಳಿದರು.

ಮತ್ತೊಂದು ದಿನ ಬಹು ಜನರು ದರ್ಶನಕ್ಕೆ ಬಂದಾಗ ಲಿಂಗಪ್ಪನೆಂಬ ಭಕ್ತನು ಪೂಜ್ಯರ ಲಿಂಗವಸ್ತ್ರವು ಜೀರ್ಣವಾಗಿರುವುದನ್ನು ನೋಡಿ ಜನರೆದುರಿಗೆ ಆತ್ಮಸ್ತುತಿ ಮಾಡಿಕೊಳ್ಳಬೇಕೆಂದು "ಬುದ್ಧೀ, ನಾಳೆ ನಾನು ತಮಗೆ ಒಂದು ಚಂದವಾದ ಲಿಂಗವಸ್ತ್ರವನ್ನು ತಂದುಕೊಡುವೆನೆಂ"ದು ಹೇಳಿದನು. ಆದರೆ ಮುಂದೆ ಅದನ್ನು ಕನಸಿನಲ್ಲಿಯೂ ಸಹ ತಂದು ಕೊಡಲಿಲ್ಲ. ಆಡಿದಂತೆ ತಂದು ಕೊಡಬೇಕೆಂಬ ಅರಿವು ಸಹ ಅವನಿಗೆ ಹುಟ್ಟಲಿಲ್ಲ. ತಾನು ಧನಿಕನೆಂಬ ದರ್ಪವನ್ನು ಜನರ ಮುಂದೆ ತೋರಿಸಬೇಕಾಗಿದ್ದಿತಷ್ಟೇ !

ಒಂದು ದಿನ ಲಿಂಗಪ್ಪನು ತನ್ನ ಹತ್ತಿಯ ದಿಂಡುಗಳನ್ನು ಹತ್ತು ಗಾಡಿಗಳ ಮೇಲೆ ಹೇರಿಕೊಂಡು ಹುಬ್ಬಳ್ಳಿ ಪೇಟೆಗೆ ಮಾರಲಿಕ್ಕೆ ಹೋಗುತ್ತಿದ್ದನು. ಆ ದಿನವೇ ವೀರಪ್ಪನೆಂಬ ಬಡ ಭಕ್ತನು ತನ್ನದೊಂದು ಹತ್ತಿಯ ಅಂಡಿಗೆಯನ್ನು ಹೇರಿಕೊಂಡು ಹುಬ್ಬಳ್ಳಿಗೆ ಹೊರಟಿದ್ದನು. ದಾರಿಯಲ್ಲಿ ವೀರಪ್ಪನು ಲಿಂಗಪ್ಪ ಸಾಹುಕಾರನನ್ನು ಕಂಡು ಶರಣು ಮಾಡಿ, "ಇನ್ನೂ ಯಾರೂ ಲಿಂಗವಸ್ತ್ರವನ್ನು ಪೂಜ್ಯರಿಗೆ ತರಲಿಲ್ಲ. ತಾವು ಹೇಳಿದ್ದಿರಿ. ನೆನಪಿಟ್ಟು ತರಬೇಕೆ"ಂದು ವಿನಂತಿ ಮಾಡಿಕೊಂಡನು. ಆ ಮಾತಿಗೆ ಲಿಂಗಪ್ಪನು ರೇಗಿ "ಆ ಉಸಾಬರಿ ನಿನಗೇಕೆ? ನಿನಗೆ ಲಿಂಗವಸ್ತ್ರದ ಚಿಂತೆಯಿದ್ದರೆ ನೀನೇ ತಂದುಕೊಡು. ನನಗೆ ಹೇಳುವ ಧೈರ್ಯ ಬಂತೇ ನಿನಗೆ ? ನಾನು ಸಾವುಕಾರನೆಂಬ ಪರಿವೆ ನಿನಗಿಲ್ಲವೇ?" ಎಂದು ಗರ್ವದಿಂದ ನುಡಿದನು.

ವೀರಪ್ಪನು ಮರು ಮಾತಾಡದೆ ಮರುದಿನ ಪೇಟೆಯಲ್ಲಿ ಒಂದು ಲಿಂಗ ವಸ್ತ್ರವನ್ನು ಕೊಂಡು ತಂದು ಶಿವಯೋಗಿಗೆ ಮುಟ್ಟಿಸಿದನು. ಲಿಂಗಪ್ಪನಿಗೆ ಅದರ ನೆನಪೇ ಇರಲಿಲ್ಲ. ಪೇಟೆಯಲ್ಲಿ ವೀರಪ್ಪನ ಅಂಡಿಗೆಯನ್ನು ತೂಕ ಮಾಡಲು ದುಪ್ಪಟ್ಟು ತೂಕ ಬಂದಿತು. ಅದರಿಂದ ಆತನಿಗೆ ಇಮ್ಮಡಿ ಹಣ ಲಾಭವಾಯಿತು. ಅದೇ ಮೇರೆಗೆ ಲಿಂಗಪ್ಪನ ಹತ್ತು ಗಾದಿಯ ಹತ್ತಿಯನ್ನು ತೂಕ ಮಾಡಲು ತೂಕವು ಅರ್ಧಕ್ಕಿಳಿಯಿತು. ಮತ್ತೆ ತೂಗಿದರೂ ಅಷ್ಟೇ ಆಯಿತು. ನೆರೆದ ಜನರಿಗೆ ಆಶ್ಚರ್ಯವಾಯಿತು. ಅದು ಬೂದೀಶ್ವರನ ಲೀಲೆಯೆಂದು ಯಾರಿಗೆ ಗುರುತು ? ಮುಂದೆ ವೀರಪ್ಪನು ದಿನೇ ದಿನೇ ಹೆಚ್ಚೆಚ್ಚು ಶ್ರೀಮಂತನಾಗಹತ್ತಿದನು. ಲಿಂಗಪ್ಪನು ದುರ್ದೈವದಿಂದ ವ್ಯಾಪಾರದಲ್ಲಿ ದಿವಾಳಿ ತೆಗೆದು ಭಿಕ್ಷಾಪತಿಯಾದನು. ಭೋಗದಾಟವನ್ನಾರು ಬಲ್ಲರು? ಯೋಗಿಯನ್ನು ಧಿಕ್ಕರಿಸಿದವರಿಗೆ ಸುಖ ತಟ್ಟೀತೇ ?

## ಕಾಲುವೆಹಳ್ಳಿ

ಮುಂದೆ ಶ್ರೀಗಳು ಕಾಲುವೆಹಳ್ಳಿಗೆ ದಯಮಾಡಿಸಿ ಕೆಲದಿನ ಲಿಂಗಾನಂದದಿಂದಿರಲು ಒಂದು ದಿನ ಪೂಜ್ಯರು ಪತ್ರಿ ಪುಷ್ಪಗಳನ್ನೆತ್ತಲು ಹೊರಗೆ ಹೊರಟಾಗ ದಾರಿಯಲ್ಲಿ ಕೆಲವು ಹುಡುಗರು ಜೋರಾಗಿ ಓಡಾಡುತ್ತಿರುವಷ್ಟರಲ್ಲಿ ಒಬ್ಬ ಹುಡುಗನು ತಲೆಯೊಡೆದು ರಕ್ತವು ಸೋರುತ್ತಿದ್ದಿತು. ಆ ಹುಡುಗನು ಬಹಳೇ ಆಕ್ರೋಶ ಮಾಡುತ್ತಿದ್ದನು. ಅಷ್ಟರಲ್ಲಿ ಯೋಗಿಗಳು ಅಲ್ಲಿಗೆ ಬಂದು ಆ ರಕ್ತದ ಮೇಲೆ ಬಟ್ಟೆಯ ಪಟ್ಟಿಯನ್ನು ಕಟ್ಟಬೇಕೆಂದು ನಿಂತ ಜನರನ್ನು ಕುರಿತು "ಯಾರಾದರೂ ನಿಮ್ಮ ಬಟ್ಟೆಯ ಚುಂಗನ್ನು ಹರಿದುಕೊಡುವಿರಾ ?" ಎಂದು ಕೇಳಿದರು. ಒಬ್ಬರೂ ಕೊಡಲಿಲ್ಲ. ಅಷ್ಟರಲ್ಲಿ ಮೌನಪ್ಪನೆಂಬ ಪಂಚಾಳನು ಮುಂದೆ ಬಂದು ತನ್ನ ಒಲ್ಲಿಯ ಸೆರಗನ್ನು ಹರಿದು ಸ್ವಾಮಿಗಳಿಗೆ ಕೊಟ್ಟನು. ಅವರು ಸಂತುಷ್ಟರಾಗಿ ಆ ಹುಡುಗನ ತಲೆಗೆ ಪಟ್ಟಿ ಕಟ್ಟಿದರು. ಅಷ್ಟರಲ್ಲಿ ಹಿರೇಕೆರೂರ ಗ್ರಾಮದ ಶಿವಪ್ಪ ಸಾಹುಕಾರರ ಅಂಗಡಿಯಿಂದ ಒಂದು ಆಳು ಬಂದು ಪೂಜ್ಯರಿಗೆ ನಮಸ್ಕರಿಸಿ "ಬುದ್ಧೀ, ನಮ್ಮ ಸಾಹುಕಾರರು ಈ ಧೋತರ ಜೋಡನ್ನು ಮೌನಪ್ಪನಿಗೆ ಕಾಣಿಕೆಯಾಗಿ ಕಳಿಸಿದ್ದಾರೆ. ತಮ್ಮ ಹಸ್ತದಿಂದ ಮುಟ್ಟಿಸಬೇಕೆ"ಂದು ವಿನಂತಿ ಮಾಡಿಕೊಂಡು ಹೊರಟು ಹೋದನು. ಆ ಪ್ರಕಾರ ಶ್ರೀಗಳು ಅದನ್ನು ಮೌನಪ್ಪನಿಗೆ ಕೊಟ್ಟರು. ಎಂದೂ ಕೊಡದ ಸಾಹುಕಾರನು ನನಗೇಕೆ ಧೋತರ ಕೊಟ್ಟನೆಂಬುದು ಮೌನಪ್ಪನಿಗೆ ಆಶ್ಚರ್ಯವನ್ನುಂಟುಮಾಡಿತು.

ಆ ಪಂಚಾಳನು ಇದನ್ನು ಪರೀಕ್ಷೆ ಮಾಡಿ ಬಿಡಬೇಕೆಂದು ಹಿರೆಕೆರೂರಿಗೆ ಹೋಗಿ ಸಾಹುಕಾರರಿಗೆ "ಏನ್ರಿ, ನೀವು ನನಗೇಕೆ ನಿಮ್ಮ ಆಳಿನ ಸಂಗಡ ಒಂದು ಜೋಡು ಧೋತರವನ್ನು ಕಾಣಿಕೆಯಾಗಿ ಕಳಿಸಿದಿರಿ ?" ಎಂದು ಕೇಳಲು ಆತನು "ನಾನೆಲ್ಲಿ ಕಳಿಸಿದ್ದೇನೆ? ನಿನಗೇತಕ್ಕೆ ಕಳಿಸಲಿ? ಆದರೆ ಒಬ್ಬ ಯೋಗಿಯು ನಿನಗೆ ಒಂದುಜೋಡು ಧೋತರ ಕೊಟ್ಟದ್ದನ್ನು ನಾನು ನಿನ್ನೆ ಕನಸಿನಲ್ಲಿ ಕಂಡೆನು" ಎನ್ನಲು ಈ ಸಂಗತಿಯನ್ನು ಊರೊಳಗೆ ತಿಳಿಸಿದಕೂಡಲೆ ಎಲ್ಲರೂ ಯೋಗೀಂದ್ರನ ಲೀಲೆಯನ್ನು ಹಾಡಿ ಹರಿಸಿದರು.

## ಹುಬ್ಬಳ್ಳಿ

ಶ್ರೀಗಳು ಕಾಲುವೆಹಳ್ಳಿಯಿಂದ ಹುಬ್ಬಳ್ಳಿ ನಗರಕ್ಕೆ ಬರಲು ಅಲ್ಲಿ ರುದ್ರಾಕ್ಷಿ ಮಠದ ಶ್ರೀ ಬಸವಲಿಂಗ ಸ್ವಾಮಿಗಳು ಅವರನ್ನು ಇದಿರ್ಗೊಂಡು ಕರೆತಂದು ಸತ್ಕರಿಸಿದರು. ಸ್ವಾಮಿಗಳೀರ್ವರು ಪರಸ್ಪರ ಕುಶಲವಾರ್ತೆಯನ್ನು ಕೇಳಿಕೊಂಡು ಸಂತೋಷಬಟ್ಟರು. ರುದ್ರಾಕ್ಷಿ (ಟೀಕೆಯ) ಮಠದ ಶ್ರೀಗಳು ಅಪ್ರತಿಮ ನಿರಂಜನ ಮೂರ್ತಿಗಳು, ಘನತರದ ಶಾಸ್ತ್ರಾರ್ಥ ಪಂಡಿತರು, ಮಹಾ ಶಿವಾನುಭವಿಗಳು, ವೇದಾಂತ ಪಾರಂಗತರೆಂದು ಬೂದೀಶ್ವರರು ಹೊಗಳಿದರು. ಶ್ರೀ ಬಸವಲಿಂಗ ಸ್ವಾಮಿಗಳು ಬೂದೀಶ್ವರರನ್ನು ಕುರಿತು ವೀರಶೈವ ಧರ್ಮೋದ್ಧಾರ ಮಾಡಲಿಕ್ಕೆ ಅವತರಿಸಿದ ಮಹಾ ಮಹಿಮರೆಂದೂ ಬಸವೇಶನ ಹೆಸರಿನಿಂದ ಬೂದೀಬಸವನ ವಿಗ್ರಹಗಳನ್ನೂ, ಪ್ರಭುವಿನ ಸ್ಮರಣಾರ್ಥ ಪ್ರಭು ಗದ್ದುಗೆಗಳನ್ನು ಅಲ್ಲಲ್ಲಿ ಕಟ್ಟಿಸಿ ಜಾಗೃತಿ ಮಾಡಿದ ಮಹಿಮಾ ಪುರುಷರೆಂದೂ ಕೊಂಡಾಡಿದರು. ಆ ಮಠದ ಸದರಿನಲ್ಲಿ ಇಬ್ಬರೂ ಸ್ವಾಮಿಗಳು ಸಮಾನಸ್ಕಂದರಾಗಿ ಕಂಗೊಳಿಸಲು ಒಮ್ಮಿಂದೊಮ್ಮೆಲೇ ಎಡಗಡೆ ಕುಳಿತು ಬೂದೀಶನು ಬಲಗಡೆ ಕುಳಿತಂತೆ; ಎಡಗಡೆ ಕುಳಿತ ಶ್ರೀ ಬಸವಲಿಂಗ ಸ್ವಾಮಿಗಳು ಬಲಗಡೆ ಕುಳಿತಂತೆ ಜನರಿಗೆ ಕಂಡರು. ಆಸನ ಪಲ್ಲಟದಿಂದ ಜನರು ಆಶ್ಚರ್ಯಬಡುತ್ತಿರಲು ಒಮ್ಮಿಂದೊಮ್ಮೆಲೇ ಬೂದೀಶನು ಅದೃಶ್ಯನಾದನು. ಕೆಲ ನಿಮಿಷಗಳಲ್ಲಿ ಬಸವಲಿಂಗ ಸ್ವಾಮಿಗಳೂ ಅದೃಶ್ಯರಾದರು. ಪುನಃ ಎಲ್ಲರ ಕಣ್ಣಿಗೆ ತೋರಿದರು.

ಅಷ್ಟರಲ್ಲಿ ಒಬ್ಬ ಮೂಕನು ಬಂದು ನಮಿಸಿ ಅವರ ಮುಖವನ್ನು ಹುಳು ಹುಳು ನೋಡಹತ್ತಿದನು. ಆಗ ಬೂದೀಶನು "ಬಾರಯ್ಯಾ ಭಕ್ತ. ನಿನ್ನ ಹೆಸರೇನು ?" ಎಂದು ಕೇಳಲು ಸುಮ್ಮನೇ ನಿಂತನು. ಆಗ ಒಬ್ಬನು ಆತನು ಮೂಕನೆಂದು ಶ್ರೀಗಳಿಗೆ ಹೇಳಿದನು. ಆಗ ಬೂದೀಶನು "ಶಿವನು ಅವನಿಂದ ನನ್ನ

ಪ್ರಶ್ನೆಗೆ ಉತ್ತರ ಕೊಡಿಸಲಾರನೇ?" ಎಂದು ಹೇಳಿ ಬೂದಿ ಮಂತ್ರಿಸಿ ಆತನ ನಾಲಿಗೆಗೆಹಚ್ಚಿ "ತಮ್ಮಾ ಶಿವ ಶಿವಾ, ಬಸವಾ. ಬಸವಾ ಅನ್ನು" ಎಂದು ನುಡಿದರು. ಆಗ ಅವನಿಗೆ ವಾಕ್‌ಶಕ್ತಿಯುಂಟಾಗಿ ಶಿವಶಿವಾ, ಬಸವಾ ಬಸವಾ ಯೆಂದುಚ್ಚರಿಸಿದ್ದನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಯಿತು. ಆ ಮೇಲೆ ಭಕ್ತರ ಸಹಾಯದಿಂದ ಹುಬ್ಬಳ್ಳಿ ನಗರದಲ್ಲಿರುವ ಗಂಟೀಕೇರಿಯ ಓಣಿಯಲ್ಲಿ ಬೂದೀಬಸವಣ್ಣನನ್ನು ಸ್ಥಾಪಿಸಿದನು. ಬೂದೀಶ್ವರನು ಶ್ರೀ ರುದ್ರಾಕ್ಷಿ ಮಠದಲ್ಲಿ ಕೆಲಕಾಲ ಇದ್ದು ಅಲ್ಲಿಯ ಸ್ವಾಮಿಗಳೊಂದಿಗೆ ಸೋದರ ಸ್ನೇಹದಿಂದ ಕಾಲಕಳೆದರು.

## ಗಂಟೀಕೇರಿ

ಬೂದೀಶ್ವರರು ಗಂಟೀಕೇರಿಯ ಮಠದಲ್ಲಿ ಒಂದು ದಿನ ಲಿಂಗಾನಂದದಲ್ಲಿ ಮೈಮರೆದು ನಿಂದಿರಲು ಮೂರು ಸಾವಿರ ಮಠದ ಜಗದ್ಗುರುಗಳಾದ ಶ್ರೀ ಗುರು ಸಿದ್ಧಯೋಗಿಗಳು ಶಿವಯೋಗಾನಂದದಲ್ಲಿ ತಾವೇ ತಾವಾಗಿ ಮೈಮರೆತುದನ್ನು ಜ್ಞಾನದೃಷ್ಟಿಯಿಂದ ತಿಳಿದು ಬೂದೀಶನು ತನ್ನ ಸಮಾಧಿಯನ್ನಿಳುಹಿ ಜಗದ್ಗುರು ಮಹಾ ಯೋಗಿಗಳ ಸನ್ನಿಧಿಗೆ ಬಂದು ಅವರ ಯೋಗ ಸಾಮರ್ಥ್ಯವನ್ನು ಪರೀಕ್ಷಿಸಿ ನೋಡಿ ನಿಬ್ಬೆರಗಾಗಿ ನಿಂತರು. ಅಷ್ಟರಲ್ಲಿ ಜಗದ್ಗುರುಗಳು ಅಕಸ್ಮಾತ್ ಕಣ್ದೆರೆದು ಮುಂದೆ ಬೂದೀಶ್ವರನು ನಿಂತುದನ್ನು ನೋಡಿ ಮುಂಬಂದು ಅವರನ್ನು ಆನಂದದಿಂದ ತಬ್ಬಿಕೊಂಡರು. ಉಭಯಪೂಜ್ಯರು ಪರಸ್ಪರ ನಿಜಾನಂದ ಸಾಗರದಲ್ಲಿ ಮುಳುಗಿದರು. ಅಷ್ಟರಲ್ಲಿ ಭಕ್ತಾದಿಗಳು ದರ್ಶನಕ್ಕೆಂದು ಬಂದು ಉಭಯ ಶ್ರೀಗಳಿಗೆ ಅಭಿವಂದಿಸಿದರು. ಆಗ ಬೂದೀಶನು ಜಗದ್ಗುರುಗಳ ತನುವನ್ನು ಸ್ಪರ್ಶಿಸಲು ಅವರು ಮಾಯವಾಗಿಬಿಟ್ಟರು. ಅವರ ಮಾಂಸಪಿಂಡವು ಮಂತ್ರಪಿಂಡವಾಯಿತು. ಇದನ್ನು ಕಂಡು ಕೂಡಿದ ಜನಕ್ಕೆಲ್ಲ ಅತ್ಯಾಶ್ಚರ್ಯವಾಯಿತು. ಕೆಲ ನಿಮಿಷಗಳಲ್ಲಿ ಇದ್ದಕ್ಕಿದ್ದಂತೆ ಜಗದ್ಗುರುಗಳು ಎಲ್ಲರ ಕಣ್ಣಿಗೆ ಗೋಚರಿಸಿದರು. ಬೂದೀಶನು ಭಕ್ತರನ್ನು ಕುರಿತು "ಶ್ರೀ ಗುರುಸಿದ್ಧ ಜಗದ್ಗುರುಗಳು ಪರತರದ ಶಿವಯೋಗೀಶ್ವರರು. ಅವರ ಕೃಪಾಕಟಾಕ್ಷದಿಂದ ಹುಬ್ಬಳ್ಳಿ ನಗರವು ಯಾಂತ್ರಿಕ, ವ್ಯಾವಹಾರಿಕ, ತಾತ್ವಿಕ ಮೊದಲಾದ ದೃಷ್ಟಿಯಿಂದ ಉಜ್ವಲವಾಗಿ ಬೆಳಗುವದೆಂದು ಹೇಳಿ ಮಾಯವಾಗಿಬಿಟ್ಟರು.

## ಬೂದನಗುಡ್ಡ

ಹುಬ್ಬಳ್ಳಿಯಿಂದ ೧೨ ಮೈಲಿನಮೇಲೆ ಬೂದನಗುಡ್ಡವಿದೆ. ಅಲ್ಲಿಗೆ ಬೂದೀಶ್ವರರು ದಯಮಾಡಿಸಿ ನೀರು, ಪತ್ರಿ, ಪುಷ್ಪಗಳ ಸೌಕರ್ಯವುಳ್ಳ ಸ್ಥಾನವನ್ನು ಹುಡುಕಿಕೊಂಡು ಅಲ್ಲಿ ಕೆಲದಿನ ಲಿಂಗಪೂಜಾನುಷ್ಠಾನಗಳನ್ನೆಸಗಿದರು. ಅಲ್ಲಿ ಒಂದು ಬಸವಣ್ಣನನ್ನು ಸ್ಥಾಪಿಸಿದ್ದರಿಂದ ಆ ಸ್ಥಳಕ್ಕೆ ಬೂದಿಬಸವನಗುಡ್ಡವೆಂಬ ಹೆಸರುಂಟಾಗಿ ಅದು ಮುಂದೆ ಸಂಕ್ಷಿಪ್ತವಾಗಿ ಬೂದನಗುಡ್ಡವಾಗಿದೆ. ಹುಬ್ಬಳ್ಳಿಯ ಕೆಲಜನ ಭಕ್ತರು ಒಂದು ದಿನ ಅಲ್ಲಿಗೆ ಬಂದು ಪೂಜ್ಯಪಾದರಿಗೆ ಸಾಷ್ಟಾಂಗ ಹಾಕಿ ನಿಂದಿರಲು ಒಬ್ಬ ಭಕ್ತನು ಯೋಗಿಗಳ ಬಳಿಗೆ ಬಂದು ಇಂದು ಸಾಯಂಕಾಲ ಕೂಡಲ ಸಂಗಮೇಶನ ರಥೋತ್ಸವವು ನಡೆಯುತ್ತಿದೆ ಎಂದನು. ಅದಕ್ಕೆ ಸ್ವಾಮಿಗಳು "ಇಂದು ನಿಮಗೆ ಕೂಡಲ ಸಂಗಮೇಶನ ದರ್ಶನವು ಬೇಕೆ ? ಯಾತ್ರೋತ್ಸವವನ್ನು ನೋಡಬೇಕೆಂದಿರುವಿರಾ ? ಇಂದು ನಿಮಗೆ ನಾನು ಜಾತ್ರೆಯ ದರ್ಶನ ಮಾಡಿಸುವೆನು" ಎಂದು ಹೇಳಿದರು. ಭಕ್ತರು "ಎಲ್ಲಿಯ ಸಂಗಮ ! ಎಲ್ಲಿಯ ಬೂದನಗುಡ್ಡ ! ಅದು ಹೇಗೆ ಶಕ್ಯ ? ಎಂದು ಯೋಚಿಸುತ್ತಿರಲು ಪೂಜ್ಯರು ಅವರಿಗೆ ಸಾಲಾಗಿ ನಿಂತು ಒಬ್ಬರ ಕೈಯೊಬ್ಬರು ಹಿಡಿದು ಕಣ್ಣು ಮುಚ್ಚಿರಿ. ನಡುವೆ ಯಾರೂ ಕಣ್ಣು ತೆರೆಯ ಬೇಡಿರಿ" ಎಂದು ಹೇಳಿ ತಮ್ಮ ಯೊಗದಂಡದಿಂದ ಅವರನ್ನೆಲ್ಲ ಸ್ಪರ್ಶಿಸಲು ಅವರ ಕಣ್ಣಿಗೆ ಸಂಗಮೇಶನ ದೇವಾಲಯ, ರಥೋತ್ಸವ, ಕೃಷ್ಣಾ ಮಲಾಪಹಾರಿಗಳ ಸಂಗಮ ಈ ಎಲ್ಲ ದೃಶ್ಯಗಳು ಕಣ್ಣಿಗೆ ಬಿದ್ದವು. ಅಷ್ಟರಲ್ಲಿ ಬೂದೀಶ್ವರರು ಕಣ್ಣು ತೆರೆಯಲು ಹೇಳಿದಾಕ್ಷಣವೇ ಪುನಃ ಅವರೆಲ್ಲರೂ ಬೂದನಗುಡ್ಡದಲ್ಲಿಯೆ ಇದ್ದರು

ಒಂದು ದಿನ ಹುಬ್ಬಳ್ಳಿಯಿಂದ ನೀಲಮ್ಮ, ಸಂಗಮ್ಮ ಎಂಬ ಇಬ್ಬರು ಹೆಣ್ಣುಮಕ್ಕಳು ಬೂದನಗುಡ್ಡಕ್ಕೆ ಬಂದು ಸ್ವಾಮಿಯ ದರ್ಶನ ತೆಗೆದುಕೊಂಡು ತಮಗೆ ಮಕ್ಕಳಾಗಿಲ್ಲ. ಮಕ್ಕಳನ್ನು ದಯಪಾಲಿಸಬೇಕೆಂದು ಬೇಡಿಕೊಂಡರು. ಆಗ ಅವರು ಅವರೀರ್ವರಿಗೆ ಒಂದೊಂದು ವಿಭೂತಿ ಗಟ್ಟಿಯನ್ನು ಕೊಟ್ಟು ದಿನಾಲು ಅದನ್ನು ಬಸವ ಬಸವಾಯೆಂದು ಸ್ವಲ್ಪ ಸ್ವಲ್ಪ ಸೇವಿಸುತ್ತ ಹೋಗಿರಿ. ಈ ಮಾತನ್ನು ಯಾರ ಮುಂದೆಯೂ ಹೇಳಬೇಡಿರಿ. ನಿಮಗೆ ಮಕ್ಕಳಾಗುವವು. ಎಂದು ಆಶೀರ್ವದಿಸಿ ಕಳಿಸಿಕೊಟ್ಟರು. ಸಂಗಮ್ಮನು ಈ ಗುಟ್ಟಿನ ಮಾತನ್ನು ತನ್ನ ಗೆಳತಿಯರಿಗೆ ಹೇಳಿದಳು. ಆಗ ಆ ಹೆಂಗಸರು " ಆ ಬೈರಾಗಿಯು ಭಸ್ಮ ಕೊಟ್ಟು ಹೆಂಗಸರನ್ನು ಮರುಳು ಮಾಡುವನು. ಅದೆನ್ನೇಕೆ

ತಂದೆ ? ತಿಪ್ಪೆಯಲ್ಲಿ ಬೀಸಾಡಿ ಬಿಡು." ಎಂದು ಸಲಹೆ ಮಾಡಿದರು. ಆ ಮಾತುಗಳನ್ನು ನಂಬಿ ಸಂಗಮ್ಮನು ಆ ಭಸ್ಮವನ್ನು ತಿಪ್ಪೆಗೆಸೆದಳು. ತನ್ನ ಜನ್ಮದಲ್ಲಿ ಮಕ್ಕಳ ಕಾಣದೆ ಹಿಂದುಗಡೆ ಮರುಮರ ಮರುಗಿದಳು. ಆದರೆ ನೀಲಮ್ಮನು ಯೋಗಿಗಳು ಹೇಳಿದಂತೆ ನಡೆದುಕೊಂಡದ್ದರಿಂದ ಆಕೆಗೆ ಗಂಡು ಮಗುವೊಂದು ಜನಿಸಿ ಸುಖವಾಗಿ ಬಾಳಿದಳು.

ಮತ್ತೊಮ್ಮೆ ಸಂಗಮ್ಮನು ಬೂದೀಶ್ವರನ ದರ್ಶನಕ್ಕೆ ಹೋದಾಗ ಅವರು ಅವಳಿಗೆ "ಭಸ್ಮವನ್ನು ನಾನು ಹೇಳಿದಂತೆ ತೆಗೆದು ಕೊಂಡೆಯೇನಮ್ಮಾ ?" ಎಂದು ಕೇಳಿದರು. ಆಗ ಅವಳು ದುಃಖಿಸುತ್ತ ಆದ ಸಂಗತಿಯನ್ನೆಲ್ಲ ಹೇಳಿದಳು. ಆದಕ್ಕೆ ಅವರು "ನೀನೆಂಥ ಹತಭಾಗ್ಯಳಮ್ಮಾ ? ನಡೆ ನಾನು ನಿನ್ನೊಡನೆ ಬರುವೆನು ನೀನು ತಿಪ್ಪೆಯಲ್ಲಿ ಎಸೆದಿರುವ ವಿಭೂತಿಯನ್ನು ತೋರಿಸು" ಎನ್ನಲು ಅವಳು ಕರೆದುಕೊಂಡು ಹೋಗಿ ತೋರಿಸಿದಳು. ಅದು ಸುವರ್ಣದ ಗಟ್ಟಿಯಾಗಿತ್ತು. ಅದನ್ನು ಶಿವಯೋಗಿಯು ಕೊಂಡೊಯ್ದನು. "ನನ್ನ ಬಂಡ ಜನ್ಮಕ್ಕೆ ಧಿಕ್ಕಾರ" ಎಂದು ನುಡಿಯುತ್ತ ಆ ಬಂಗಾರದ ಗಟ್ಟಿಯನ್ನು ಕಳೆದು ಕೊಂಡು ಪುತ್ರನಿಲ್ಲದೆ ಕಡೆಗೆ ಬಂಜೆಯಾಗಿ ಸತ್ತುಹೋದಳು.

## ೧೬ನೆಯ ಸಂಧಿ

### ಹರ್ತಿ

ಮುಂದೆ ಒಂದು ದಿನ ಮಳೆಗಾಲದಲ್ಲಿ ಹರ್ತಿಯ ಭಕ್ತರು ಮೂರ್ತಿಮಂತ ಪ್ರಭುವಾದ ಶ್ರೀ ಬೂದೀಶನನ್ನು ತಮ್ಮಲ್ಲಿಗೆ ಕರೆದುಕೊಂಡು ಹೋಗಿ ಒಂದು ಪ್ರಶಸ್ತವಾದ ಸ್ಥಳದಲ್ಲಿ ಅವರನ್ನಿರಿಸಿದರು. ಸ್ವಾಮಿಗಳು ಬಂದಾಗ ಆ ಊರಲ್ಲಿ ಮಾರಿಕಾಬೇನೆಯು ಹಬ್ಬಿತ್ತು. ಊರ ಮುಂದಿನ ಬಾವಿಯ ನೀರು ಕೆಟ್ಟು ಹುಳ ಬಿದ್ದದ್ದರಿಂದ ಆ ರೋಗಕ್ಕೆ ಪುಟ ಕೊಟ್ಟಂತಾಗಿತ್ತು. ಭಕ್ತರು ಬಂದು ಇದನ್ನು ಮಹಾ ಪಾದಕ್ಕೆ ಅರಿಕೆ ಮಾಡಿಕೊಂಡರು. ಆ ಮೇಲೆ ಯೋಗಿಗಳು ಆ ಬಾವಿಯ ಬಳಿಗೆ ಬಂದು ಕೈಗೆ ಭಸ್ಮವ ಬಳಿದುಕೊಂಡು ಬಾವಿಯಲ್ಲಿಳಿದು ಕೈತೊಳೆದುಕೊಳ್ಳಲು ಆ ಕ್ರಿಮಿಗಳೆಲ್ಲ ನಾಶವಾಗಿ ಮಾರಿಕಾಬೇನೆಯು ನಿಂತು ಬಿಟ್ಟಿತು. ಆ ಮೇಲೆ ಆ ಬಾವಿಯ ನೀರಿನಲ್ಲಿ ಬಸವ ಪ್ರಣವವನ್ನು ಬರೆದು ಪೂಜ್ಯರು ಅದಕ್ಕೆ ಬಸವತೀರ್ಥವೆಂದು ಹೆಸರಿಟ್ಟರು. ಆ ನೀರಿನಿಂದ

ನಿತ್ಯ ಬಸವಣ್ಣನ ಪೂಜೆಯಾಗಬೇಕೆಂದು ಆಜ್ಞಾಪಿಸಿ ಅವತ್ತಿನ ದಿವಸ ಸೋಮವಾರವಿದ್ದುದರಿಂದ ಊರಲ್ಲಿ ಬಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟು ಮೆರೆಸಿದರು. ಅಂದಿನಿಂದ ಇಂದಿನ ವರೆಗೆ ಆ ಪೂಜಾ ಮಹೋತ್ಸವವು ಪ್ರತಿ ವರ್ಷ ತಪ್ಪದೆ ಸಾಗುತ್ತ ಬಂದಿದೆ.

## ಕಣವಿ

ಆ ಬಳಿಕ ಬೂದೀಯೋಗಿಗಳು ಹರ್ತಿಯಿಂದ ಕಣವಿಗೆ ದಯಮಾಡಿಸಿದರು. ಆ ಊರ ಸದ್ಭಕ್ತನಾದ ಸಿದ್ಧರಾಮಪ್ಪನೆಂಬ ಕುಷ್ಟ ರೋಗಿಯು ಸ್ವಾಮಿಯ ಬಳಿಗೆ ಬಂದು ಪಾದಕ್ಕೆ ಬಿದ್ದು ತನಗೆಡೆಗೊಂಡ ಮಹಾ ರೋಗವನ್ನು ನಿವೇದಿಸಿದನು. ಅವನ ಮೇಲೆ ಮರುಕ ಹುಟ್ಟಿ ಪೂಜ್ಯಪಾದರು ಭಸ್ಮವನ್ನು ಆತನ ಮೈಗೆಲ್ಲ ತೊಡೆದು ಪಾದತೀರ್ಥವನ್ನು ಕುಡಿಯಲಿಕ್ಕೆ ಕೊಟ್ಟರು. ಶಿವ ಮಂತ್ರವನ್ನು ದಿನಾಲು ತಪ್ಪದೇ ಜಪಿಸಬೇಕೆಂದು ಆಜ್ಞಾಪಿಸಿದರು. ಲಿಂಗದಲ್ಲಿ ಏಕಾಗ್ರ ದೃಷ್ಟಿಯನ್ನಿರಿಸಿ ಪೂಜಿಸೆಂದು ಬೋಧಿಸಿದರು. ಆತನು ಯೋಗಿಗಳ ಆಜ್ಞೆಯ ಪ್ರಕಾರ ನಡೆದುಕೊಂಡದ್ದರಿಂದ ಸ್ವಲ್ಪೇ ದಿನಗಳಲ್ಲಿ ಆತನ ರೋಗವು ನಿವಾರಣೆಯಾಗಿ ಆತನು ಮುಂದೆ ತನ್ನ ಜನ್ಮವಿರುವ ವರೆಗೂ ಪ್ರಭು ಗದ್ದುಗೆಯ ಸೇವೆ ಮಾಡಿ ಕೊನೆಯುಸಿರೆಳೆದನು.

## ಮುಳಗುಂದ

ಮುಳಗುಂದವು ಶ್ರೀ ಬಾಲಲೀಲಾ ಮಹಾಂತಸ್ವಾಮಿಗಳ ಪವಿತ್ರ ಕ್ಷೇತ್ರವು. ಬೂದೀಶನು ಅಲ್ಲಿಗೆ ಬಂದು ಒಂದು ತೋಟದಲ್ಲಿ ನೆಲಸಿದನು ಅಲ್ಲಿಯೇ ಒಂದು ಪ್ರಭು ಗದ್ದುಗೆಯನ್ನು ಸ್ಥಾಪನೆ ಮಾಡಿ ಯೋಗಾಂಗ ಸಾಧನೆಗಳನ್ನು ಮಾಡುತ್ತಾ ಸಮಾಧಿಯಲ್ಲಿ ಲೀನನಾಗುತ್ತಿದ್ದನು. ಅಲ್ಲಿ ಒಂದು ದೊಡ್ಡ ಹುಣಸಿಮರವಿತ್ತು. ಅದರಲ್ಲಿ ದುಷ್ಟ ಪಿಶಾಚಿಗಳೆಷ್ಟೋ ವಾಸವಾಗಿದ್ದವು. ಅವು ಬೂದೀಯೋಗಿಯ ಬಳಿಗೆ ಬಂದು ಅವರ ಸೇವೆ ಮಾಡಹತ್ತಿದವು. ಲಿಂಗಪೂಜೆಗೆ ಪತ್ರಿ ಪುಷ್ಪಗಳನ್ನು ತರುತ್ತಿದ್ದವು. ಅವರ ಬಟ್ಟೆಗಳನ್ನು ಒಗೆದು ಕೊಡುತ್ತಿದ್ದವು ಅವರ ಹಾಸಿಗೆಯನ್ನು ಹಾಸಿ ಕೊಡುತ್ತಿದ್ದವು. ಅಂಗಳ ಕಸವನ್ನು ಗೂಡಿಸುತ್ತಿದ್ದವು. ಸಾರಣೆ–ಕಾರಣೆ ಮಾಡುತ್ತಿದ್ದವು. ಆ ಪಿಶಾಚಿ

ಗಳ ಸೇವೆಯಿಂದ ಬೂದೀಶರು ಸಂತೃಪ್ತರಾಗಿ ತಮ್ಮ ತಪಸ್ಸಿನ ಪುಣ್ಯದ ಅರ್ಧ ಭಾಗವನ್ನು ಅವಕ್ಕೆ ನೀಡಿದರು. ಆಗ ಪಿಶಾಚಿಗಳ ಭೂತತ್ವವಳಿದು ಅವು ಶಿವಯೋಗಿಗೆ ನಮಸ್ಕರಿಸಿ ಜ್ಯೋತಿ ರೂಪವನ್ನು ತಾಳಿ ಆಕಾಶಕ್ಕೆ ಅಡರಿದವು.

ಬೂದೀಶನು ಬಾಲಲೀಲಾ ಮಹಾಂತ ಶಿವಯೋಗಿಗಳ ದರುಶನಕ್ಕೆಂದು ಹೊರಟಿರಲು ಅದನ್ನು ಅವರು ಜ್ಞಾನದೃಷ್ಟಿಯಿಂದ ತಿಳಿದು ಭಕ್ತರನ್ನೊಳಗೊಂಡು ಇದಿರ್ಗೊಳ್ಳಲು ಪರಸ್ಪರ ಸಾಷ್ಟಾಂಗವೆರಗಿದರು. ಕುಶಲ ಪ್ರಶ್ನೆಗಳಾದ ಬಳಿಕ ಭಕ್ತರ ಕಣ್ಣಿಗೆ ಇಬ್ಬರೂ ಒಮ್ಮೆಲೇ ಮಾಯವಾದರು. ಆ ಮೇಲೆ ಇಬ್ಬರೂ ಮುಳಗುಂದ ಗವಿಮಠದಲ್ಲಿ ಭಕ್ತರಿಗೆ ಕಾಣಿಸಿಕೊಂಡರು. ಕೆಲದಿನ ಬೂದಿಯೋಗಿಗಳು ಮುಳಗುಂದದ ಗವಿಮಠದಲ್ಲಿದ್ದು ನಿತ್ಯ ಶ್ರೀ ಮಹಾಂತ ಶಿವಯೋಗಿಗಳೊಡನೆ ಶಿವಾನುಭವ ಗೋಷ್ಠಿಯಲ್ಲಿನಿರತರಾಗಿ ಸುಖಮಾಗಿರ್ದು ಆ ಬಳಿಕ ಮಹಾಂತ ಸ್ವಾಮಿಗಳನ್ನು ಬೀಳ್ಕೊಂಡು ಕೆಳದಿಗೆ ದಯೆಮಾಡಿಸಿದರು.

## ಕೆಳದಿ

ದೊಡ್ಡ ಯೋಗಿಯು ತಾನಾಗಿಯೇ ಕೆಳದಿಗೆ ಬಂದುದನ್ನು ತಿಳಿದು ಕೆಳದಿಯ ನಾಯಕರು ಅವರನ್ನು ಭಕ್ತಿಪಹಿಸಿ ಅರಮನೆಗೆ ಕರೆತಂದು ಪಾದಪೂಜೆ ಮಾಡಿದರು. ಯೋಗಿಗಳು ಸಂತುಷ್ಟರಾಗಿ "ದೊರೆಯೇ, ನಿನಗೋರ್ವ ಸುಗುಣ ಸುಂದರ ಕೀರ್ತಿಶಾಲಿಯಾದ ಮಗನು ಹುಟ್ಟುವನು. ಆತನು ರಾಜ್ಯವನ್ನು ದಕ್ಷತೆಯಿಂದ ಆಳಿ ಪ್ರಜೆಗಳನ್ನು ಮಕ್ಕಳಂತೆ ಪಾಲನೆ ಮಾಡುವನು" ಎಂದು ಅಪ್ಪಣೆ ಕೊಡಿಸಿದರು. ಮುಂದೆ ದೊರೆಗೆ ಒಬ್ಬ ಸುಪುತ್ರನು ಜನಿಸಲು ಅವನಿಗೆ ಬೂದೀ ಬಸವಪ್ಪ ನಾಯಕನೆಂಬ ಹೆಸರನ್ನಿಟ್ಟರು. ಆತನು ಧರ್ಮನಿಷ್ಠನೂ ಗುರು ಲಿಂಗ ಜಂಗಮ ದಾಸೋಹಿಯೂ ಆಗಿ ಬಹು ಕೀರ್ತಿಶಾಲಿಯಾಗಿ ಬಾಳಿದನು.

ಆಗ ಕೆಳದಿಯ ಕೆಲವು ಕುಚೋದ್ಯಗಾರರು ಸ್ವಾಮಿಗಳ ಸತ್ವವನ್ನು ಪರೀಕ್ಷಿಸಬೇಕೆಂದು ಹಂಚಿಕೆ ಹಾಕಿ ಇಬ್ಬರು ತರುಣರನ್ನು ಬೇಕೆಂತಲೇ ಗಂಡ-ಹೆಂಡಿರಂತೆ ಸೋಗು ಹಾಕಿ ಹೆಂಡತಿಯು ಸುಳ್ಳುಸುಳ್ಳೆ ಗರ್ಭಿಣಿಯಿರುವಂತೆ ಹೊಟ್ಟೆಗೆ ಮಾದಲಕಾಯಿ ಕಟ್ಟಿ ಯೋಗಿಯ ಬಳಿಗೆ ಕಳಿಸಿದರು. ಅವರು ಯೋಗಿಯ ಬಳಿಗೆ ಬಂದು ನಮಸ್ಕರಿಸಿ ಗಂಡನಾದವನು, "ಬುದ್ಧೀ, ಈಕೆಯು

ನನ್ನ ಹೆಂಡತಿಯು ಮಹಾ ಪತಿವ್ರತೆ; ಪೂರ್ಣ ಗರ್ಭಿಣಿ. ಗರ್ಭವತಿಯಾಗಿ ಎರಡು ವರ್ಷಗಳಾದರೂ ಹಡೆದಿಲ್ಲ. ನನಗೆ ಚಿಂತೆಯಾಗಿದೆ. ಹಡೆಯುವಳೋ ಇಲ್ಲವೋ ? ಗಂಡು ಹುಟ್ಟುವದೋ, ಹೆಣ್ಣು ಹುಟ್ಟುವದೋ ? ಎಂಬುದನ್ನು ತಾವು ಹೇಳಿಕೊಟ್ಟು ನಮಗೆ ಸಮಾಧಾನವನ್ನುಂಟು ಮಾಡಬೇಕೆ"ಂದು ಬೇಡಿಕೊಂಡನು. ಶಿವಸ್ವರೂಪಿಯಾದ ಬೂದೀಶನು ಇವರ ಕಪಟ ನಾಟಕವನ್ನು ಅರಿಯದಿರುವನೇ ? ಸಿಟ್ಟಾಗಿ ಅವರಿಗೆ ಏನನ್ನೂ ನುಡಿಯದೆ ಶಾಂತ ಚಿತ್ತದಿಂದ ಅಲ್ಲಿ ನೆರೆದ ಜನಕೆಲ್ಲ "ಭಕ್ತರೇ ಕೇಳಿರಿ. ಈ ಹೆಣ್ಣು ಮಗಳು ಹೆಣ್ಣನ್ನಾಗಲಿ ಗಂಡನ್ನಾಗಲಿ ಹಡೆಯುವದಿಲ್ಲ. ಆಕೆಯ ಹೊಟ್ಟೆಯಿಂದ ಒಂದು ಬಂಗಾರದ ಗಟ್ಟಿಯು ಮಾತ್ರ ಹೊರಬೀಳುವದು." ಎಂದು ಹೇಳಿದರು. ಆ ಪ್ರಕಾರ ಅವಳ ಹೊಟ್ಟೆಗೆ ಮಾಡಿದ ಮಾದಲಕಾಯಿಯು ಒಮ್ಮೆಲೆ ಕಳಚಿ ಬಂಗಾರ ಗಟ್ಟಿಯಾಗಿ ಭೂಮಿಗೆ ಬಿದ್ದಿತು. ಮೋಸಗಾರರು. "ನಾವು ಕುಚೇಷ್ಟೆ ಮಾಡಿದರೆ ಯೋಗಿಗಳು ಪುನಃ ನಮಗೆ ಒಳಿತನ್ನೇ ಮಾಡಿದರಲ್ಲದೆ ಕೆಡಕು ಮಾಡಲಿಲ್ಲವಲ್ಲ !" ಎಂದು ಪಶ್ಚಾತ್ತಾಪ ಪಟ್ಟು ಅವರ ಕ್ಷಮೆಯನ್ನು ಕೋರಿದರು. ಯೋಗಿಗಳು ಇದೊಂದು ನಮಗೆ ವಿನೋದ. ಸಿಟ್ಟೇಕೆ ಬರಬೇಕು ?" ಎಂದು ಹೇಳಿ ಆ ಭಕ್ತರ ತಪ್ಪನ್ನು ಮನ್ನಿಸಿ ಆಶೀರ್ವಾದ ಮಾಡಿ ಮುಂದೆ ತೆರಳಿದರು.

## ಎಳವತ್ತಿ

ಕೆಳದಿಯಿಂದ ಎಳವತ್ತಿ ಗ್ರಾಮಕ್ಕೆ ಯೋಗಿಗಳೈತಂದು ಊರ ಹೊರಗಡೆ ಒಂದು ಪ್ರಶಸ್ತವಾದ ಸ್ಥಳದಲ್ಲಿಳಿದುಕೊಂಡು ನಿತ್ಯ ಪೂಜಾನಂದದಲ್ಲಿ ಕಾಲ ಕಳೆಯುತ್ತಿದ್ದರು. ಆ ಊರಿಗೆ ಒಬ್ಬ ದೊಡ್ಡ ಪೀಠಾಧಿಕಾರಿಗಳು ಕಾವಿ ಧರಿಸಿಕೊಂಡು, ತ್ರಿಪುಂಡ್ರವನ್ನು ಹಣೆಗೆ ಹಚ್ಚಿಕೊಂಡು ಬಂದು ಒಳ್ಳೆ ಗಂಭೀರ ಮುಖಮುದ್ರೆಯನ್ನು ತಳೆದು ಹಿರೇಮಠದಲ್ಲಿ ತಂಗಿದ್ದರು. ಅವರು ಭಕ್ತಾದಿಗಳಿಂದ ಕಾಣಿಕೆಯನ್ನೆತ್ತುವದಕ್ಕಾಗಿ ಅಲ್ಲಿಗೆ ಬಂದಿದ್ದರು. ಭಕ್ತರು ಅವರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮೆರವಣಿಗೆಯನ್ನು ತೆಗೆಯುವ ಸಂಭ್ರಮದಲ್ಲಿದ್ದರು. ಇತ್ತ ಬೂದೀಸ್ವಾಮಿಗಳು ತಮ್ಮ ದರ್ಶನಕ್ಕೆ ಬಂದ ಭಕ್ತರಿಗೆ ಆಶೀರ್ವಾದ ಮಾಡುತ್ತ ಬೇಡಿದಿಷ್ಟಾರ್ಥಗಳನ್ನು ನೀಡುತ್ತ ಸಾಗಿದ್ದರು. ಅಷ್ಟರಲ್ಲಿ ಒಬ್ಬ ಚಾಡಿಕೋರನು ಆ ಪೀಠಾಧಿಕಾರಿಗಳ ಬಳಿಗೆ ಬಂದು "ಬುದ್ಧೀ, ಊರೊಳಗೆ ಒಬ್ಬ ಜಂಗಮಯ್ಯನು ಬಂದಿದ್ದಾನೆ. ಆತನು ಪವಾಡ ಪುರುಷನೆಂದು ಸುತ್ತೆಲ್ಲ ಹೆಸರಾಗಿದ್ದಾನೆ" ಎಂದು ಹೇಳಿದನು. ಇದನ್ನು ಕೇಳಿ ಮಠಾಧಿಕಾರಿಗಳ ಚಿತ್ತವು

ನೆತ್ತಿಗೇರಿ ಮತ್ಸರವು ಉಲ್ಬಣಿಸಿ ಮುಂದಿರುವ ಭಕ್ತರಿಗೆ, "ಭಕ್ತರೇ, ಬಂದವನು ಕಪಟ ಸನ್ಯಾಸಿಯು. ಮಾಟ ಮಂತ್ರ ಮೊದಲಾದ ಬೂಟಾಟಿಕೆ ಮಾಡುವ ತಂತ್ರಗಾರನು. ಆತನನ್ನು ನಂಬಿ ಕೆಡಬೇಡಿರಿ. ನಂಬಿದವರನ್ನು ಆತನು ನರಕ ಕೂಪದಲ್ಲಿ ಹಾಕುವನು. ಆತನನ್ನು ಇಲ್ಲಿಗೆ ಎಳೆತಂದು ಕಂಬಕ್ಕೆ ಬಿಗಿದು ಕಟ್ಟಿರಿ" ಎಂದು ಅಪ್ಪಣೆ ಮಾಡಿದರು.

ಆ ಮೇರೆಗೆ ಕೆಲವು ದುಷ್ಟರು ಬೂದೀಯೋಗಿಯ ಬಳಿಗೆ ಬಂದು ಭಕ್ತಿಯನ್ನು ನಟಿಸುತ್ತ "ಸ್ವಾಮಿಗಳೇ, ಊರಲ್ಲಿ ಒಬ್ಬ ದೊಡ್ಡ ಯೋಗಿರಾಜನು ಬಂದಿದ್ದಾನೆ. ನೀವು ಅಲ್ಲಿಗೆ ಬಂದು ಅವರಿಗೆ ಬಾಗಿ ನಮಸ್ಕರಿಸಬೇಕು. ನಡೆಯಿರಿ. ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುವೆವು" ಎಂದರು. ಅದಕ್ಕೆ ಯೋಗೀಶ್ವರನು ಸಿಟ್ಟಿಗೇಳದೆ ಶಾಂತದಿಂದ ಮಂದಹಾಸ ಬೀರಿ, "ಶಿವ ಶಿವಾ, ನಮಗೆ ಆ ಪೀಠಾಧಿಕಾರಿಗಳ ದರ್ಶನದಿಂದೇನಾಗಬೇಕಿದೆ ? ನಮಗೆ ಶಿವನ ಕೃಪೆಯೊಂದಿದ್ದರೆ ಸಾಕು. ನಾವು ನಿಸ್ಸಂಗಿಗಳು ಹಾಗೂ ವೈರಾಗ್ಯಶೀಲರು. ಯಾವ ಪೀಠಾಧಿಕಾರಿಗಳ ಗೊಡವೆಯೂ ನಮಗೆ ಬೇಡ. ಭಾವಿಕರಾದ ನೀವು ಅವರ ಸೇವೆ ಮಾಡಿ ಸುಖವಾಗಿ ಬಾಳಿರಿ" ಎನ್ನಲು ಆ ದುಷ್ಟರು ಯೋಗಿಗಳನ್ನೆಳೆಯುತ್ತ, ದಬ್ಬುತ್ತ ಗುರುಸಾರ್ವಭೌಮನ ಮುಂದೆ ನಿಲ್ಲಿಸಿದರು.

ಆಗ ಪೀಠಾಧಿಕಾರಿಯು ದರ್ಪದಿಂದ "ಎಲೋ, ಕಪಟ ಸನ್ಯಾಸಿಯೇ, ಠಕ್ಕತನದಿಂದ ಜನರನ್ನು ಮೋಸ ಮಾಡುವೆಯಾ ? ತಪ್ಪಾಯ್ತೆಂದು ಬಾಗಿ ನಮಸ್ಕರಿಸು" ಎಂದು ಆಜ್ಞಾಪಿಸಿದರು. ಆಗ ಬೂದೀಶ್ವರನು "ನಾನು ವಂದಿಸಲು ಬಂದಿಲ್ಲ. ಜನರು ಒತ್ತಾಯದಿಂದ ನನ್ನನ್ನು ನಿಮ್ಮ ಬಳಿಗೆ ಎಳೆದು ತಂದಿದ್ದಾರೆ. ನೀವೆಂಥ ಮಂದಭಾಗ್ಯರು. ಜಂಗಮಕ್ಕೆ ಒಂದಿಸಬೇಕೆಂದು ಹೇಳುವಿರಲ್ಲ ? ಅಯೋಗ್ಯನಿಗೆ ಶಿರಬಾಗಿಸಲು ನಾನೇನು ಮಂದಮತಿಯೇ ? ನಾನು ನಿಮಗೆ ನಮಿಸಿದರೆ ನಿಮಗೇ ಕೇಡಾದೀತು. ಎಚ್ಚರಿಕೆ ! ನಿಮ್ಮ ಹಿತದ ದೃಷ್ಟಿಯಿಂದಲೇ ನಾನು ನಿಮಗೆ ನಮಿಸಲಾರೆ" ಎನ್ನಲು ಪೀಠಾಧಿಪತಿಯು "ಎಲೈ ಸನ್ಯಾಸಿಯೇ, ಗುರುಪೀಠಕ್ಕೆ ಅವಮಾನಗೊಳಿಸುವೆಯಾ ? ನಿನಗೆ ಲಿಂಗಪಿತ್ತವರು ಯಾರು ? ಗುರು ಪೀಠಕ್ಕೆ ನೀನು ನಮಿಸಲೇಬೇಕು" ಎಂದು ಆಜ್ಞೆ ಮಾಡಿದರು.

ಆಗ ಬೂದೀಶನು "ಹಾಗಾದರೆ ದೂರ ಸರಿ. ಪೀಠವನ್ನು ಬಿಟ್ಟೇಳು ಪೀಠಕ್ಕೆ ನಮಸ್ಕರಿಸುವೆನು" ಎನ್ನಲು ಆತನು ಬದಿಗೆ ನಿಂತನು. ಬೂದೀಶನು ಆ ಬರಿ ಪೀಠಕ್ಕೆ ನಮಸ್ಕರಿಸಲು ಅದಕ್ಕೆ ಧಗಧಗ ಉರಿ ಹತ್ತಿತು. ಪೀಠಾಧಿ

ಕಾರಿಯು ತತ್ತರಿಸಿ ಮನದಲ್ಲಿ ಪಶ್ಚಾತ್ತಾಪ ಬಟ್ಟನು. ಜನರು ಯೋಗಿಯನ್ನು ಕೊಂಡಾಡಿ ಅವರ ಪಾದಕ್ಕೆ ಶಿರಸಾಷ್ಟಾಂಗವೆರೆಗಿದರು. ಹಿಂದೆ ಬಿಜ್ಜಳ ದೊರೆಯು ಬಸವೇಶನಿಗೆ ತನ್ನ ಸಿಂಹಾಸನಕ್ಕೆ ನಮಸ್ಕರಿಸೆಂದು ಆಜ್ಞಾಪಿಸಿರಲು ಬಸವೇಶನು "ಸಿಂಹಾಸನವನ್ನು ಬಿಟ್ಟೇಳು ನಮಸ್ಕರಿಸುತ್ತೇನೆ"ನ್ನಲು ಆತನು ಸರಿದು ನಿಂತನು. ಸಿಂಹಾಸನಕ್ಕೆ ಭಗ್ಗೆಂದು ಬೆಂಕಿ ಹತ್ತಿತು. ಅದೇ ಸ್ಥಿತಿಯು ಗುರುಸಾರ್ವಭೌಮನ ಸಿಂಹಾಸನಕ್ಕೂ ಉಂಟಾಯಿತು.

ಆಗ ಬೂದೀಶನು ತನ್ನ ಅಂಗೈಯಲ್ಲಿ ಆ ಉರಿಯನ್ನು ಅಡಗಿಸಿಕೊಂಡು ಅದನ್ನು ರಕ್ಷಿಸಿದನು. ಭಕ್ತರೆಲ್ಲರೂ ಆ ಗುರುವನ್ನು ಬಿಟ್ಟು ಬೂದೀಶನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮೆರೆಯಿಸಬೇಕೆಂದು ಸಿದ್ಧರಾದರು. ಇಷ್ಟರಲ್ಲಿ ಗುರುವಿನ ಗರ್ವಾಂಧಕಾರವು ಮಾಯವಾಗಿತ್ತು. ಆತನು ಮನದಲ್ಲಿ "ಯೋಗೀಂದ್ರನೇ, ನನ್ನದು ತಪ್ಪಾಯಿತು. ಮದಾಂಧನಾದ ನನಗೆ ನೀನು ಅರಿವನ್ನು ನೀಡಿ ಎಚ್ಚರಿಸಿದೆ. ಕ್ಷಮಿಸಬೇಕೆ"ಂದು ಮೊಗ ಮಾಡಿ ನಿಂತುಕೊಂಡಿದ್ದನು. ಯೋಗಿಗಳು ಭಕ್ತರಿಗೆ "ನನ್ನನ್ನು ಅಂದಣವಲ್ಲಿ ಮೆರೆಯಿಸುವ ಗೋಜಿಗೆ ಹೋಗಬೇಡಿರಿ. ನಾನು ವಿರಕ್ತನು. ಪಲ್ಲಕ್ಕಿಯಲ್ಲಿ ಮೆರೆಯುವದಿಲ್ಲ. ನಿಮ್ಮ ಗುರುಗಳನ್ನು ಮೆರೆಯಿಸಿರಿ" ಎಂದು ಹೇಳಿ ಹೊರಟು ಹೋದರು.

## ೧೭ನೆಯ ಸಂಧಿ

### ಲಿಂಗಭಕ್ತಿಯ ಮಹಿಮೆ

ಮರುಳಸಿದ್ಧನೆಂಬ ಒಬ್ಬ ಮರುಳ ವೇದಾಂತಿಯು ಯೋಗಿಯ ಮಹಿಮೆಯನ್ನು ಕೇಳಿ ಅವರೊಡನೆ ವಾದಿಸಬೇಕೆಂದು ಬಂದು "ಗುರುವೇ, ಜ್ಞಾನವೇ ಮೋಕ್ಷಕ್ಕೆ ಕಾರಣವಿರಲು ಜ್ಞಾನ ಮಾಡಿಕೊಂಡರೆ ಸಾಕು. ಕೊರಳಲ್ಲಿ ಲಿಂಗವನ್ನು ಧರಿಸಿ ಪೂಜಿಸುವದೇಕೆ ? ಪರಬ್ರಹ್ಮವನ್ನರಿಯುವುದೇ ಮಹತ್ವವು. ಬರಿದೆ ಲಿಂಗಪೂಜಾದಿಗಳ ಉಪಾಸನೆ ಮಾಡಿದರೆ ದಿವ್ಯಜ್ಞಾನವಪ್ಪುದೇ ? ಅದು ಮೂರ್ಖತನವಾಗುವದಿಲ್ಲವೇ ? ಶಿವನು ಸಾರಾಸಾರ ವಿಚಾರಿಸಲು ನಮಗೆ ಬುದ್ಧಿಯನ್ನು ನೀಡಿರುವಾಗ ತರ್ಕದಿಂದ ಒರೆದೊರೆದು ನೋಡಿ ಜ್ಞಾನ ಪಡೆಯುವುದೇ ಲೇಸು. ಮರುಳರಂತೆ ಕಲ್ಲು ಪೂಜಿಸಿದರೆ ಜ್ಞಾನವು ಹೇಗಾದೀತು? ಹಿಂದಿನ ಹಿರಿಯರು ಕಾಣಬಾರದ ಪರವಸ್ತುವನ್ನು ಕಾಣುವಂತೆ ಮಾಡಬೇಕೆಂದು

ಕಲ್ಲು ಮೂರ್ತಿಗಳನ್ನು ಮಾಡಿಸಿ ಏಕೆ ಪೂಜಿಸಹಚ್ಚಿದರೋ ! ಪ್ರತ್ಯಕ್ಷ ಕಾಣುವ ಕಲ್ಲು ಮೂರ್ತಿಗಳನ್ನೇ ಮೂಢಮತಿಗಳೇಕೆ ಪೂಜೆ ಮಾಡುವರೋ !

ಆತ್ಮಾನಾತ್ಮ ವಿಚಾರ ಮಾಡಲು ವಿವೇಕ ಬೇಕು; ಸರಿ. ಲಿಂಗಪೂಜೆ ಮಾಡುವುದರಿಂದೇನಾಗುವದು ? ಶರಣರು ಆ ಮೂಢ ಭಾವನೆಗೆ ಅಷ್ಟೇಕೆ ಮಹತ್ವ ಕೊಟ್ಟರೋ ! ಜ್ಞಾನದಿಂದಲೇ ಕೈವಲ್ಯವೆಂದು ವೇದಾಂತವು ಸಾರ್‍ರುತ್ತದೆ. ಹೀಗಿರಲು ಜ್ಞಾನಕ್ಕಷ್ಟೇ ಮಹತ್ವ ಕೊಡದೆ ಲಿಂಗಭಕ್ತಿಯ ಮೌಢ್ಯವನ್ನೇಕೆ ತಾಳಿದರೋ ! ಆದುದರಿಂದ ಗುರುಗಳೇ, ಉಪಾಸನಾ ಮಾರ್ಗವಾದ ಲಿಂಗಪೂಜೆಯನ್ನು ಬಿಟ್ಟು ವಿವೇಕವನ್ನು ಪ್ರಚೋದನೆಗೊಳಿಸುವ ಜ್ಞಾನ ಮಾರ್ಗವನ್ನು ಹಿಡಿಯುವದು ಹೆಚ್ಚು ಸಮಂಜಸವಾಗದೇ"? ಎಂದು ಯೋಗಿಗಳಿಗೆ ಬಿನ್ನವಿಸಿಕೊಂಡನು, ಯೋಗಿಗಳು ಇದನ್ನು ಕೇಳಿ "ತಮ್ಮಾ, ನಾವಿರುವುದು ವ್ಯಕ್ತ ಪ್ರಪಂಚದಲ್ಲಿ. ನೀನೂ ವ್ಯಕ್ತ ರೂಪನಾಗಿದ್ದೀಯೆ. ಅದರಂತೆ ನಿಃಕಲವಾದ (ಅವ್ಯಕ್ತ) ಪರವಸ್ತುವು ಸಕಲ (ವ್ಯಕ್ತ) ವಾಗಿ ಇಷ್ಟಲಿಂಗವೆನಿಸಿದೆ, ಆದುದರಿಂದ ವ್ಯಕ್ತವಾದುದನ್ನು ವ್ಯಕ್ತ ಭಕ್ತಿಯಿಂದ ಕಾಂಬುವದು ಸುಲಭ ಮಾರ್ಗವಲ್ಲವೇ ? ಅವ್ಯಕ್ತ ಪರಬ್ರಹ್ಮನನ್ನು ಅವ್ಯಕ್ತ ಜ್ಞಾನದಿಂದ ಕಾಣುವದು ಎಷ್ಟು ಕಠಿಣವೆಂಬುದನ್ನು ಬಲ್ಲೆಯಾ ?"

ತಮ್ಮಾ, ನಿನಗೆ ಭಕ್ತಿಯ ಅನುವು ತಿಳಿದಿಲ್ಲ. ಭಕ್ತಿಯನ್ನು ಬಿಟ್ಟು ಬರಿ ಜ್ಞಾನವನ್ನು ಪಡೆದರೆ ಅದು ಶುಷ್ಕವೇದಾಂತವೆನಿಸುವದು. ತನುವಿನ ಕ್ರಿಯೆಗೆ ಭಕ್ತಿಬೇಕು. ಮನದಲ್ಲಿ ಧ್ಯಾನ ಮಾಡಲಿಕ್ಕೆ ಭಕ್ತಿ ಬೇಕು. ಘನತರವಾದ ಮಹಾಲಿಂಗದೊಳು ಬೆರೆಯಲಿಕ್ಕೆ ಭಕ್ತಿ ಬೇಕು. ಶಿವನು ಸುವ್ಯಕ್ತನೂ ಅಹುದು. ಅವ್ಯಕ್ತನೂ ಅಹುದು. ಶರಣರು ಆತನ ಎರಡೂ ರೂಪಗಳನ್ನು ನಂಬಿರುವರು. ಕರದ ಇಷ್ಟಲಿಂಗವು ವ್ಯಕ್ತಸ್ವರೂಪವು. ಮನದಲ್ಲಿರುವ ಇಷ್ಟಲಿಂಗವು ವ್ಯಕ್ತ-ಅವ್ಯಕ್ತ ಸ್ವರೂಪವು. ಕೇವಲ ಭಾವದಲ್ಲಿ ಬೆರೆದು ಮೈಮರೆದಾಗ ತೋರುವ ಚಿಜ್ಜ್ಯೋತಿಯು ಅವ್ಯಕ್ತ ರೂಪವು. ಇದಕ್ಕೇ ವೀರಶೈವರು ಕ್ರಮದಿಂದ ಸಕಲ, ಸಕಲ-ನಿಃಕಲ, ನಿಃಕಲನೆಂದು ಕರೆದಿರುವರು.

ಹೀಗೆ ತನು ಮನ ಭಾವಗಳಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳ ಉಪಾಸನೆಯನ್ನು ಮಾಡಬೇಕೆಂದು ಶರಣರು ಯೋಜಿಸಿರುವರು, ವ್ಯಕ್ತವಾದ ಇಷ್ಟಲಿಂಗವನ್ನೇ ಕರದಲ್ಲಿ ಪೂಜಿಸಿ ವ್ಯಕ್ತ–ಅವ್ಯಕ್ತರೂಪದ ಪ್ರಾಣಲಿಂಗವನ್ನು ಮನದಲ್ಲಿ ಧ್ಯಾನಿಸಿ, ಭಾವದಲ್ಲಿ ಅವ್ಯಕ್ತರೂಪದ ಭಾವಲಿಂಗದಲ್ಲಿ ಬೆರೆದು ಬೇರಿಲ್ಲದಂತಿರು

ವುದೇ ಶಿವಯೋಗವೆನಿಸಿದೆ. ಈ ಅನುಭವವೇ ಜ್ಞಾನ. ಇದೇ ಮೋಕ್ಷ ಸಾಧನ. ಇದು ವೇದಾಂತದ ಶುಷ್ಕಜ್ಞಾನವಲ್ಲ.

ಭಕ್ತಿಯಿಲ್ಲದ ಜ್ಞಾನವು ಶುಷ್ಕವಾದುದು. ಭಕ್ತಿಯಿಲ್ಲದ ಬರಿ ಜ್ಞಾನದಿಂದ ಆತ್ಮಸಾಕ್ಷಾತ್ಕಾರವಾಗಲರಿಯದು. ಭಕ್ತಿಯಿಂದ ಅನುಭವ ಬೆಳೆಯುವದು. ಭಕ್ತಿಯು ಜ್ಞಾನಕ್ಕೆ ಮೂಲ ಹೇತುವು. ಹೀಗಿದ್ದು ಭಕ್ತಿಯನ್ನೇಕೆ ಕಡೆಗಣಿಸ ಬೇಕು ಮರುಳಯ್ಯಾ ? ಪಾಯಸದ ಹೆಸರು ಕೇಳಿ ಅದನ್ನು ಕಂಡರೆ ಉಂಡಂತೆ ತೃಪ್ತಿಯಾದೀತೇ ? ಪಾಯಸದ ಜ್ಞಾನ ಮಾಡಿಕೊಂಡರೆ ತೃಪ್ತಿ ಯಿಲ್ಲ. ಉಂಡರೆ ಮಾತ್ರ ತೃಪ್ತಿಯಾಗುವದು. ಗುರುವನ್ನು ಕಂಡು ಜ್ಞಾನೋ ಪದೇಶವನ್ನು ಕೇಳಿದರೆ ಆಧ್ಯಾತ್ಮಿಕಾನಂದವಾಗುವುದೇ ? ಕರದಿಷ್ಟಲಿಂಗವನ್ನು ಮನದಲ್ಲಿ ಸೆರೆಹಿಡಿದು ಭಾವದಲ್ಲಿ ಜ್ಞಾನಾಮೃತವನ್ನುಂಡರೆ ಮಾತ್ರ ನಿಜವಾದ ಆನಂದವಾಗುವದು. ಅದಕ್ಕೇ ಭಕ್ತಿಗೆ ಪಂಚಮ ಪುರುಷಾರ್ಥವೆನ್ನುವರು. ಅದು ಜ್ಞಾನದ ಕೊನೆಯ ಮೇಲೇರಿ ಶೋಭಿಸುವದು.

ದಿನಾಲು ಹೃದಯತುಂಬಿ ಭಕ್ತಿಯನ್ನು ಸಾಧಿಸಿದರೆ ಕೊನೆಗೆ ನಿಶ್ಚಲವಾದ ಜ್ಞಾನವಾಗುವದು. ಭಕ್ತಿಯಿಲ್ಲದೆ ಪರವಸ್ತುವು ಕಾಣಲಾರದು, ತಿಳಿಯಲಾ ರದು, ಬೆರೆಯಲಾಸ್ಪದ ದೊರೆಯದು. ಭಕ್ತಿಯೇ ನಿಜ ಮುಕ್ತಿಯ ಸಾಧನೆ. ಭಕ್ತಿಯು ಜ್ಞಾನಕ್ಕೆ ಪೋಷಕ. ಭಕ್ತಿಯಿಲ್ಲದ ತರ್ಕಜನ್ಯಜ್ಞಾನಕ್ಕೆ ಆ ಪರವಸ್ತುವು ಕಾಣದು.

ಶರಣ ಬಸವೇಶ್ವರನು ಭಕ್ತಿಯ ಬಾವುಟವೇರಿಸಿ ಧರೆಯಲ್ಲಿ ಹೆಸರಾದನು. ಆತನ ಭಕ್ತಿಪಂಥದಲ್ಲಿ ಹಿರಿ-ಕಿರಿ, ಮೇಲು-ಕೀಳೆಂಬ ಸಂಕುಚಿತ ಭಾವನೆಗೆ ಆಸ್ಪದವಿರದೆ ಎಲ್ಲರೂ ಸಮತಾಭಾವದಿಂದ ಕಲ್ಯಾಣದ ಶಿವಾನುಭವ ಮಂಟಪ ದಲ್ಲಿ ಅನುಭವ ಪಡೆದು ಸುಖಿಸಿದರು.

ಜ್ಞಾನಮಾರ್ಗವು ಸುಲಭವಲ್ಲ. ಕರ್ಮಮಾರ್ಗವೂ ಸುಲಭವಲ್ಲ. ಯೋಗಮಾರ್ಗವಂತೂ ಎಲ್ಲಕ್ಕೂ ಕಠಿಣ. ಸುಲಭ ಸುಲಲಿತ ಸುಂದರ ಹಾಗೂ ಕಲಾಪೂರ್ಣವಾದ ಭಕ್ತಿಮಾರ್ಗವೊಂದೇ ಎಲ್ಲರಿಗೆ ಮಾನ್ಯವಾದುದು. ಜ್ಞಾನಿ ಗಳು ಎಲ್ಲವನ್ನೂ ನೀತಿಗಳೆದು ಕೊನೆಗೆ 'ನಾನೇ ಶಿವ'ನೆಂದು ಏತಕ್ಕೆ ಹೇಳು ವರೋ ! ಅದೆಂಥ ಅಹಂಕಾರವು ! ಆದರೆ ನಾನು ಶಂಕರನಲ್ಲ. ಶರಣರ ಕಿಂಕ ರರ ಕಿಂಕರನೆಂಬುದೇ ಭಕ್ತಿಮಾರ್ಗ. ಇದೆಂಥ ವಿನಯ ! ಇದೆಂಥ ಸೌಜನ್ಯ ! ನಾನು ಯೆಂಬ ಅಲ್ಪಜೀವನು ತಾನೆ ಶಿವನೆಂದೆನ್ನಬಹುದೇ ? ನಾನು ಯೆಂಬ

ಅಜ್ಞಾನ ದುರಹಂಕಾರದಿಂದ ದೂರಾದ ಶುದ್ಧ ಚೇತನ ವಸ್ತುವಿಗೆ ಸ್ವಾನುಭಾವಿಗಳು ಸಚ್ಚಿದಾನಂದಾತ್ಮನೆಂದು ಕರೆಯುವರು.

ಭಕ್ತಿಯುಕ್ತ ಲಿಂಗಪೂಜೆಯು ಶಿವಯೋಗ ಸಾಧನೆಗೆ ಅವಶ್ಯವಾಗಿ ಬೇಕು. ಯೋಗಿಗಳು ಲಿಂಗದಲ್ಲಿ ಏಕಾಗ್ರದೃಷ್ಟಿಯನ್ನಿರಿಸಿ, ಭಕ್ತಿವಹಿಸಿ ಭೃಂಗಕೀಟ ನ್ಯಾಯದಂತೆ ತಾವೂ ಲಿಂಗರೂಪರಾದರು. ಲಿಂಗವು ಪ್ರೇಮದ ಮೂಲಕ ವಿಶ್ವವನ್ನೊಂದುಗೂಡಿಸುವ ದಿವ್ಯ ಸಾಧನವಾಗಿದೆ. ಆದುದರಿಂದ ಮರುಳೇಶಾ. ನೀನು ಜಡಕರ್ಮದ ಹಾದಿಯನ್ನು ಬಿಡು. ಹೊಟ್ಟೆ ಹರಕೊಳ್ಳುವ ಜಡ ಕರ್ಮವು ಮನುಷ್ಯನನ್ನು ಸ್ವಾರ್ಥಿ ಹಾಗೂ ಪಾಪಿಯನ್ನಾಗಿ ಮಾಡುತ್ತದೆ. ಆಸನ ಪ್ರಾಣಾಯಾಮ ಬ್ರಹ್ಮಚರ್ಯ ಮುಂತಾದ ಕಠಿಣಮಾರ್ಗವನ್ನು ಹೇಳುವ ಯೋಗ ಮಾರ್ಗವೂ ನಿನಗೆ ತರವಲ್ಲ. ನೀತಿಗಳೆಯುವ ಶುಷ್ಕಜ್ಞಾನದ ಹಾದಿಯೂ ಬೇಡ. ಲಿಂಗಪೂಜಾ, ಧ್ಯಾನ, ಸಮರಸಗಳಿಂದೊಡಗೂಡಿದ ಭಕ್ತಿಮಾರ್ಗವಿಡಿದು ಕಡೆತನಕ ನಡೆ. ನಿನಗೆ ಭೋಗಭಾಗ್ಯಗಳುಂಟಾಗುವವು.

ನಂಬಿ ನಡೆಯುವವರಿಗೆ ಶ್ರೇಯಸ್ಸುಂಟು. ಶಿವನಿಗೆ ನಂಬುಗೆಯು ಪ್ರಿಯಕರವಾಗಿದೆ. ನಂಬುಗೆಗೆ ಮೂಢ ಭಾವನೆಯೆಂದು ನೀನು ಸರ್ವಥಾ ಕಲ್ಪಿಸಬೇಡ. ಅದು ಉತ್ಕಟ ಭಕ್ತಿಯ ಮೂಲಾಧಾರವಾಗಿದೆ. ನಂಬುಗೆಯಲ್ಲಿ ಅಪಾರ ಶಕ್ತಿಯಿದೆ. ಗುರುವರನ ಕೃಪೆಯಿಂದ ನಿನ್ನ ಶಿರದ ಚಿತ್ಕಳೆಯು ಘನರೂಪ ತಾಳಿ ಬಂದು ನಿನ್ನ ಕರದಲ್ಲಿ ಪೂಜೆಗೊಳ್ಳುತ್ತಿದೆ. ಲಿಂಗವು ಒಂದು ವಿಗ್ರಹವಲ್ಲ. ಅದು ಸ್ವಸ್ವರೂಪದ ಕುರುಹಾಗಿದೆ. ತನ್ನ ದೇವರು ತನ್ನೊಳಗೇ ಇರುವಾಗ ಆತನನ್ನು ಹುಡುಕಲ್ಕೆ ತೀರ್ಥಯಾತ್ರೆಗಳನ್ನೇಕೆ ಮಾಡುವರೋ ! ಅರಳಿಮರ-ಬೇವಿನಮರಗಳನ್ನೇಕೆ ಸುತ್ತುವರೋ ! ಹರನ ರೂಪದ ಸಜೀವ ಜಂಗಮರಿಗಿಂತ ನಿರ್ಜೀವವಾದ ತರುಮರಾದಿಗಳು, ಕಲ್ಲು ಮೊರಡಿಗಳು ಹೆಚ್ಚಿನವಾದುವೇ ? ಜಂಗಮನ ಪಾದಾಂಗುಷ್ಠದಿಂದೊಗೆದ ಸುಜ್ಞಾನ ಜ್ಯೋತಿಯು ಪಾದೋದಕರೂಪದಿಂದ ಭಕ್ತನ ಲಿಂಗವನ್ನೆಲ್ಲ ವ್ಯಾಪಿಸಿ ಆತನ ಜ್ಞಾನ ಗೋಲಕಗಳನ್ನು ಸ್ಫುರಣಗೊಳಿಸುವದು. ಇಂಥ ಭಕ್ತಿ ಮಾಡಬೇಕು ಮರುಳಯ್ಯಾ. ಇದನ್ನು ಬಿಟ್ಟು ಹೊಳೆಯಲ್ಲಿ ಮುಳು-ಮುಳುಗಿ ಏಳುವುದರಿಂದ ಆಗುವದೇನಯ್ಯಾ ? ಲಿಂಗವನ್ನು ಅಂಗೈಯಲ್ಲಿಟ್ಟು ಭಕ್ತಿಯಿಂದ ಪೂಜಿಸಿ ಅದರಲ್ಲಿ ಮನಮಗ್ನವಾಗುವ ಪುಣ್ಯಾತ್ಮನೇ ಧನ್ಯನು.

ಕೆಲವು ಅಜ್ಞಾನಿಗಳು ತನ್ನಲ್ಲಿರುವ ದೇವರನ್ನೇ ಬಿಟ್ಟು, ಮಾರಿ, ಮಸಣಿ. ದುರ್ಗಿ, ಚಂಡಿ ಮೊದಲಾದ ಕ್ರೂರ ದೇವತೆಗಳನ್ನಾರಾಧಿಸಿ ಅವುಗಳಿಗೆ ಮೂಕ

ಪ್ರಾಣಿಗಳನ್ನು ಬಲಿ ಕೊಡುವರು. ಇದು ಭಕ್ತಿಯೇ ? ವೀರಶೈವರು 'ಏಕೋ ದೇವೋ ನ ದ್ವಿತೀಯಃ' ಎಂಬ ತತ್ವಕ್ಕನುಸರಿಸಿ ಸ್ವಸ್ವರೂಪದ ಇಷ್ಟಲಿಂಗ ವೊಂದನ್ನು ಬಿಟ್ಟು ಅನ್ಯ ದೇವರುಗಳಿಗೆ ಸರ್ವಥಾ ತಲೆಬಾಗಿಸಬಾರದು, ಇಷ್ಟ ಲಿಂಗದಲ್ಲಿಯೇ ಮನವೊಂದಾಗಿರಬೇಕು. ಲಿಂಗಕ್ಕೆ ಹೊಲೆಯಿಲ್ಲ, ಲಿಂಗಕ್ಕೆ ಕುಲವಿಲ್ಲ, ಲಿಂಗಕ್ಕೆ ಮಡಿ ಮೈಲಿಗೆಯಿಲ್ಲ, ಲಿಂಗಕ್ಕೆ ದುರ್ಘಟನೆಗಳಿಲ್ಲ, ಲಿಂಗ ದಲ್ಲಿ ತಾರತಮ್ಯಗಳಿಲ್ಲ. ಇಂಥ ಲಿಂಗಭಕ್ತಿಯು ಅಧಿಕವಲ್ಲವೇ ?

ಹೊಲೆಯನಿಂದ ವಿಪ್ರನವರೆಗೂ ಲಿಂಗಾಂಗಿಗಳು ಸರಿಸಮಾನರು ಲಿಂಗವು ಸಮತಾವಾದದ ಚಿಹ್ನವಾಗಿದೆ. ನಿಜವಾದಭಕ್ತಿಯು ನಿಷ್ಕ್ರಿಯೆಯಲ್ಲ. ಅದು ಸೇವಾ ದಾಸೋಹಗಳಿಂದ ಕೂಡಿದ್ದಾಗಿದೆ. ಗುರುವಿಗೆ ತನುವನ್ನು, ಲಿಂಗಕ್ಕೆ ಮನವನ್ನು, ಜಂಗಮಕ್ಕೆ ಧನವನ್ನು ಸಮರ್ಪಿಸುವದೇ ನಿಜವಾದ ಭಕ್ತಿ. ಲಿಂಗದ ಸೂತ್ರವಿಡಿದೇ ಶರಣರು ಸಮಾಜದಲ್ಲಿ ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ ಸಮಾನತೆಯನ್ನು ಸ್ಥಾಪಿಸಿದರು. ಕ್ರಿಯೆಯು ತನುವನೇ ಬೆಳಗು ತ್ತಿದೆ. ಜ್ಞಾನವು ಮನವನೇ ಬೆಳಗುತ್ತಿದೆ. ಭಕ್ತಿಯು ತನು ಮನ ಭಾವ ಈ ಮೂರನ್ನೂ ಬೆಳಗುತ್ತಿದೆ. ಆದುದರಿಂದ ಭಕ್ತಿಗಿಂತ ಮಿಗಿಲಾದ ಶಕ್ತಿಯು ಜಗತ್ತಿನಲ್ಲಿ ಬೇರೊಂದಿಲ್ಲ.

ಲಿಂಗವು ಆತ್ಮೋದ್ಧಾರದ ಚಿಹ್ನವು. ಲಿಂಗವು ಕುಟುಂಬ ಸೌಖ್ಯದ ಆಗರವು. ಲಿಂಗವು ಸಮಾಜ-ರಾಷ್ಟ್ರಗಳ ಏಳಿಗೆಯ ಕುರುಹು. ಲಿಂಗವು ವಿಶ್ವ ಪ್ರೇಮದ ದ್ಯೋತಕ. ಲಿಂಗವು ಸುಖಶಾಂತಿಗಳ ನೆಲೆವೀಡು. ಲಿಂಗವು ಪರ ಬೊಮ್ಮವೇ ಆಗಿದ್ದು ಅದನ್ನು ಕಲ್ಲೆಂದು ಜರೆಯ ಬಹುದೇ ? ಮರುಳಾರ್ಯ, ನೀನೆಂಥ ಪಾಮರನು ! ಲಿಂಗವು ಜಗವನ್ನೆಲ್ಲ ವ್ಯಾಪಿಸಿದೆ. ಲಿಂಗದಲ್ಲಿಯೇ ಜಗವೆಲ್ಲ ಅಡಗಿದೆ. ಅಂಥಹ ಲಿಂಗಭಕ್ತಿಗೆ ಮಿಗಿಲಾದುದು ಯಾವುದುಂಟು ? ಲಿಂಗದ ಸಹಾಯದಿಂದಲೇ ಬಸವಾದಿ ಪ್ರಮಥರು ದೇಶದಲ್ಲಿ ನೆಮ್ಮದಿಯನ್ನು ನೆಲೆಗೊಳಿಸಿದರು. 'ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವಾ' ಎಂದು ಬಸವಣ್ಣನವರು ಅಪ್ಪಣೆ ಕೊಡಿಸಿದ್ದಾರೆ. ಹರಭಕ್ತಿಯೊಂದೇ ಸರ್ವಶ್ರೇಷ್ಠ ವೆಂದು ಆಗಮಗಳು ಸಾರಿವೆ. ಶಿವನ ಕೃಪೆಯಿದ್ದವರಿಗೆ ಶಿವಭಕ್ತಿಯುಂಟಾ ಗುವದು. ಶಿವಭಕ್ತಿಯನ್ನು ಸಾಧಿಸುವವರು ಶಿವನ ಕೃಪೆಗೆ ಪಾತ್ರರಾಗುವರು. ಶಿವಕೃಪೆ ಶಿವಭಕ್ತಿಗಳು ಬೀಜಾಂಕುರ ನ್ಯಾಯದಂತಿವೆ.

ಹಿಂದಕ್ಕೆ ನಾರದ, ಹನುಮಂತ, ಪ್ರಹ್ಲಾದ, ಧ್ರುವ, ರಾಧಾ, ಚೈತನ್ಯ ಮತ್ತು ಅನೇಕ ಸಾಧು ಸಂತರು ಭಕ್ತಿಯನ್ನು ಸಾಧಿಸಿ ಮುಕ್ತರಾದರು. ಆದುದರಿಂದ ಮುಪ್ಪಡರುವದಕ್ಕಿಂತ ಮುಂಚೆಯೇ ಭಕ್ತಿಯನ್ನು ಸಾಧಿಸಿ ಮುಕ್ತಿ ಪಡೆಯಬೇಕು. ಭಕ್ತ-ಭಕ್ತರೊಳು ಪ್ರೇಮ, ಐಕ್ಯ, ಸಹಕಾರ, ಸಂಘಟನೆಗಳು ಬೆಳೆಯಬೇಕಾದರೂ ಭಕ್ತಿ ಬೇಕು. ಬರೇ ಮೈಯಲ್ಲಿ ರೋಮಾಂಚನಗಳೆದ್ದು ಕಂಠವು ಗದ್ಗದಿತವಾದರಷ್ಟೇ ಭಕ್ತಿಯಲ್ಲ. ವೀರಶೈವರದು ವೈಚಾರಿಕ ಭಕ್ತಿಯು ಆ ಭಕ್ತಿಯಲ್ಲಿ ಜಗತ್ತಿನ ಶಾಂತಿ, ಪ್ರೇಮ, ಸಹಕಾರಗಳು ತುಂಬಿಕೊಂಡಿವೆ. ಹೀಗೆಂದು ಮರುಳಾರ್ಯನಿಗೆ ಬೋಧಿಸಿ ಆತನನ್ನು ಭಕ್ತಿ ಮಾರ್ಗಕ್ಕೆ ಹಚ್ಚಿ ಬೂದೀಶ್ವರರು ಮುಂದಕ್ಕೆ ಸಾಗಿದರು.

# ೧೮ನೆಯ ಸಂಧಿ

## ಕುರ್ತಕೋಟಿ

ಶ್ರೀ ಬೂದಿಯೋಗಿಗಳು ಸಂಚರಿಸುತ್ತ ಕುರ್ತಕೋಟಿಯೆಂಬ ಗ್ರಾಮಕ್ಕೆ ಬಂದು ಒಂದು ರಮಣೀಯವಾದ ಉದ್ಯಾನದಲ್ಲಿ ತಂಗಿ ಶಿವಪೂಜಾನುಷ್ಠಾನ ತತ್ಪರರಾದರು. ಅವರ ಮಹಿಮೆಯನ್ನರಿತ ಭಕ್ತಾದಿಗಳು ಅವರಿಗಾಗಿ ಅಲ್ಲಿ ಒಂದು ಪರ್ಣಕುಟಿರವನ್ನು ಕಟ್ಟಿಸಿಕೊಟ್ಟರು. ಬೇವಿನ ತೊಲೆಗಳನ್ನು ನಡಿಸಿ ಮೇಲೆಲ್ಲ ಹುಲ್ಲಿನ ಹೊದಿಕೆ ಮಾಡಿದರು. ಆ ಗುಡಿಸಲಲ್ಲಿ ಕೆಲದಿನ ಯೋಗಿಗಳು ವಾಸವಾಗಿರಲು ನಡಹಾಕಿದ ಬೇವಿನ ಕೊರಡೊಂದು ಚಿಗಿತು ಅವರ ಯೋಗ ಪ್ರಭಾವದಿಂದ ಹೆಮ್ಮರವಾಯಿತು. ಈ ಲೀಲೆಯನ್ನು ಕಂಡು ಜನರೆಲ್ಲ ಚಕಿತರಾದರು. ಆ ಊರಲ್ಲಿ ಎರಡು ಓಣಿಗಳಿದ್ದವು. ಒಂದು ಓಣಿಯ ಜನರು ಬಂದು "ಬುದ್ಧೀ, ನಾಳೆ ನಮ್ಮಲ್ಲಿ ಬಸವೇಶನ ಗಣಪರ್ವವಿದೆ, ತಾವು ದಯಮಾಡಿಸಿ ಸಾಂಗಗೊಳಿಸಬೇಕೆ"ಂದು ಬೇಡಿಕೊಂಡರು. ಅದಕ್ಕೆ ಯೋಗಿಗಳು ಆಗಲೆಂದು ಸಮ್ಮತಿಸಿದರು. ಅದರಂತೆ ಎರಡನೆಯ ಓಣಿಯವರು ಬಂದು, "ಬುದ್ಧೀ, ನಾವು ನಾಳೆ ಏರ್ಪಡಿಸಲಿರುವ ಗಣಪರ್ವಕ್ಕೆ ತಾವು ಆಗಮಿಸಬೇಕೆ"ಂದು ಪ್ರಾರ್ಥಿಸಿದರು. ಅವರಿಗೂ ಬರುತ್ತೇವೆಂದು ವಚನಕೊಟ್ಟರು. ಒಂದೇ ದಿವಸ ಏಕಕಾಲಕ್ಕೆ ಎರಡೂ ಓಣಿಗಳಿಗೆ ಹೋಗುವ ಸಂಭವವೆಂತು ?

ಮರುದಿನ ಒಂದು ಓಣಿಯವರು ಬಂದು ಸ್ವಾಮಿಗಳನ್ನು ಕರೆದು ಕೊಂಡುಹೋದರು. ಎರಡನೆಯವರು ಅವರಿದ್ದಲ್ಲಿಗೆ ಹೋಗಿ ತಮ್ಮ ಗಣಪರ್ವಕ್ಕೆ ದಯಮಾಡಿಸಬೇಕೆಂದು ಬೇಡಿಕೊಂಡರು. ಶ್ರೀಗಳು "ನೀವು ಹೋಗಿರಿ ನಾನು ಬರುತ್ತೇನೆ"ಂದು ಬಂದವರಿಗೆ ಹೇಳಿ ಕಳುಹಿದರು. ಅವರು ತಿರುಗಿ ತಮ್ಮ ಓಣಿಗೆ ಬಂದು ನೋಡಲು ಬೂದೀಶ್ವರರು ಮುಂಚಿತವಾಗಿಯೇ ಹೋಗಿ ವೇಳೆಗೆ ಸರಿಯಾಗಿ ಪೂಜಾ ಕಾರ್ಯವನ್ನು ಸಾಂಗಗೊಳಿಸಿದ್ದರು. ಏಕಕಾಲಕ್ಕೆ ಎರಡೂ ಕಡೆಗೆ ಹೋಗಿ ಗಣಪರ್ವವನ್ನು ಸಾಂಗಗೊಳಿಸಿದ್ದುದು ಸರ್ವರಿಗೂ ಸಾನಂದಾಶ್ಚರ್ಯವನ್ನುಂಟು ಮಾಡಿತು. ಅವರು ಯೋಗಿಯ ಲೀಲೆಗಳನ್ನು ಹಾಡಿ ಹರಿಸಿವರು.

ಒಂದು ದಿನ ಒಬ್ಬ ಜಂಗಮನು ಬಂದು ನಮಸ್ಕರಿಸಿ ಬೂದೀಶ್ವರರನ್ನು ಕುರಿತು "ಬುದ್ಧೀ, ನಾನು ಬಡವನು. ದೈವಹೀನನು. ನನ್ನ ಮಗನಿಗೆ ಮದುವೆ ಮಾಡಬೇಕಾಗಿದೆ. ಹತ್ತಿರ ಹಣವಿಲ್ಲ. ೫೦೦ ರೂಪಾಯಿಗಳು ಬೇಕಾಗಿವೆ. ಬಿಕ್ಕೆ ಬೇಡಿದರೆ ಯಾರೂ ಕೊಡಲೊಲ್ಲರು. ಹೇಗೆ ಮಾಡಲಿ ?" ಎಂದು ಸಪ್ಪೆ ಮುಖಮಾಡಿ ನಿಂತುಕೊಂಡನು. ಆಗ ಯೋಗಿಯು ಆ ಜಂಗಮನನ್ನು ಅಡವಿಗೆ ಕರೆದೊಯ್ದು ಒಂದು ನಾಗರಹಾವನ್ನು ಮಂತ್ರಶಕ್ತಿಯಿಂದ ಬರಮಾಡಿ ಕೊಂಡು "ಆ ಜಂಗಮನಿಗೆ ನಿನ್ನ ಹೆಡೆಯಲ್ಲಿರುವ ರತ್ನವನ್ನು ಕೊಡು" ಎಂದು ಹಾವಿಗೆ ಅಜ್ಞೆ ಮಾಡಲು ಅದು ಮೆಲ್ಲಗೆ ಹರಿದಾಡುತ್ತ ಆ ಜಂಗಮನ ಕಡೆಗೆ ಹೊರಟಿತು. ಆತನು ಅಂಜಿ ದಿಕ್ಕೆಟ್ಟು ಓಡಿ ಹೋದನು. ಕಡೆಗೆ ಯೋಗಿಗಳು ಆ ಸರ್ಪವನ್ನಾದರೂ ಕೈಯಿಂದ ಮುಟ್ಟೆಂದು ಅವನಿಗೆ ಹೇಳಲು ಅದಕ್ಕೂ ಆತನು ಹೆದರಿಬಿಟ್ಟನು. ಕಡೆಗೆ ಅವನ ಕೈಹಿಡಿದು ಜಗ್ಗಿ ಹಾವಿನ ಬಾಲ ಹಿಡಿಸಿದರು. ಅವನು ಮುಟ್ಟಿದಷ್ಟು ಬಂಗಾರದ ಗಟ್ಟಿಯಾಗಿ ಕಳಚಿ ಬಿದ್ದಿತು. ಜಂಗಮನು ಹಿಗ್ಗುತ್ತ ಆ ಬಂಗಾರವನ್ನು ತೆಗೆದುಕೊಂಡು ಯೋಗಿಗೆ ನಮಸ್ಕರಿಸಿ ಹೊರಟು ಹೋದನು.

## ಸಿದ್ಧರಮಟ್ಟಿ

ಬೂದೀಶ್ವರರು ಮುಂದೆ ಸಿದ್ಧರಮಟ್ಟಿಯೆಂಬ ಸ್ಥಳಕ್ಕೆ ಬಂದರು. ಅಲ್ಲಿ ಎಷ್ಟೋ ಸಿದ್ಧರು ತಪಸ್ಸನ್ನಾಚರಿಸುತ್ತಿದ್ದರಿಂದ ಅದಕ್ಕೆ ಸಿದ್ಧರಮಟ್ಟಿ ಯೆಂಬ ಹೆಸರು ಬಂದಿದೆ. ಮುಪ್ಪಿನಲ್ಲಿ ಬೂದೀಶ್ವರರು ಅಲ್ಲಿಯೇ ವಾಸ

ಮಾಡಿದರು. ಬೇರಾವ ಸ್ಥಾನವೂ ಅವರಿಗೆ ಒಗ್ಗಲಿಲ್ಲ. ಇಲ್ಲಿಯೇ ತಮ್ಮ ಸ್ಥೂಲ ದೇಹವನ್ನು ಕಳಚಿ ಲಿಂಗದಲ್ಲಿ ಐಕ್ಯವಾಗಬೇಕೆಂದು ನಿಶ್ಚಯಿಸಿದರು. ಒಂದು ದಿನ ಬೂದೀಶ್ವರರು ಸಿದ್ಧರಮಟ್ಟಿಯ ಆಶ್ರಮದಲ್ಲಿ ಕುಳಿತಾಗ ಸಂಗನಬಸಪ್ಪನೆಂಬ ಸದ್ಭಕ್ತನು ಬಂದು ಪಾದಕ್ಕೆ ವಂದಿಸಿ ಕೈಮುಗಿದು "ಬುದ್ಧೀ, ತಮ್ಮದು ಯಾವ ಊರು ? ತಮ್ಮ ಹೆಸರೇನು ? ಈ ಘೋರಾರಣ್ಯಕ್ಕೇಕೆ ಬಂದಿರಿ ?" ಎನ್ನಲಾಗಿ ಬೂದೀಶ್ವರರು "ತಮ್ಮಾ, ನಾನು ನಿರಾಳಪುರದವನು. ಜನರು ನನಗೆ ಬೂದಿಯೋಗಿ ಎನ್ನುತ್ತಾರೆ. ಈ ಸ್ಥಾನವು ರಮ್ಯವಾಗಿರುವದರಿಂದ ಈ ಮುಪ್ಪಿನಾವಸ್ಥೆಯಲ್ಲಿ ಇಲ್ಲಿಯೇ ಐಕ್ಯನಾಗಬೇಕೆಂದಿದ್ದೇನೆ," ಎಂದು ಉತ್ತರ ಕೊಟ್ಟರು.

ಬೂದೀಶ್ವರರು ಮತ್ತೂ ಅಪ್ಪಣೆ ಕೊಡಿಸಿದುದೇನಂದರೆ ಈ ಸಿದ್ಧರಮಟ್ಟಿಗೆ ನಾನೊಮ್ಮೆ ಬಹು ವರ್ಷಗಳ ಹಿಂದೆ ಬಂದಿದ್ದೆನು. ಆಗ ಇಲ್ಲಿ ಅನೇಕ ಯೋಗಸಿದ್ಧರು ತಪಗೈಯುತ್ತಿದ್ದರು. ಈಗ ಒಬ್ಬರೂ ಕಾಣಲೊಲ್ಲರು. ಈ ತಾಣವು ರಣರಣವೆನಿಸುತ್ತಿದೆ. ಈ ಸ್ಥಿತಿಯನ್ನು ನೋಡಿ ನನ್ನ ಮನಸ್ಸು ಮರ ಮರ ಮರಗುತ್ತಿದೆ. ಕಾಲಚಕ್ರವು ತಿರುಗಿದಂತೆ ತಿಪ್ಪೆಯು ಉಪ್ಪರಿಗೆಯಾಗುತ್ತದೆ. ಉಪ್ಪರಿಗೆಯು ತಿಪ್ಪೆಯಾಗುತ್ತದೆ. ಅದು ಈಶ್ವರೇಚ್ಛೆ. ಹಿಂದೆ ತಪೋವನವಿದ್ದ ಈ ಸ್ಥಾನವು ಈಗ ಕಾಡಾಗಿದೆ. ಶಿವನ ಇಚ್ಛೆಯನ್ನು ಮೀರಲು ಯಾರಿಗೆ ಸಾಧ್ಯ ? ಎಂದು ಹೇಳುತ್ತಿರಲು ಸಂಗಪ್ಪನು ಅವರನ್ನು ತನ್ನ ಮನೆಗೆ ಬಂದು ಲಿಂಗಾರ್ಚನೆ ಪ್ರಸಾದ ತೀರಿಸಿಕೊಳ್ಳಬೇಕೆಂದು ಬಿನ್ನಹ ಮಾಡಿಕೊಂಡನು. ಭಕ್ತನಾಜ್ಞೆಯೇ ಶಿವನಾಜ್ಞೆಯೆಂದು ತಿಳಿದು ಅವನ ಹಿತಾರ್ಥವಾಗಿ ಅವನೊಡನೆ ಹೊರಟರು.

ಚರವರನಿಗೆ ಸತಿಪತಿಗಳೀರ್ವರು ದಕ್ಷತೆಯಿಂದ ಸತ್ಕಾರ ಮಾಡಿದರು. ಶಿವಯೋಗಿಯು ತೃಪ್ತನಾಗಿ "ದಂಪತಿಗಳೇ, ನಿಮ್ಮ ಭಕ್ತಿ ಪುರಸ್ಸರವಾದ ಉಪಚಾರದಿಂದ ಸಂತುಷ್ಟನಾಗಿದ್ದೇನೆ. ಇನ್ನು ಸಕಲೈಶ್ವರ್ಯಗಳಿಂದ ನಿನ್ನ ಮನೆತನವು ಅಭಿವೃದ್ಧಿ ಹೊಂದುವದು. ನಿನ್ನ ಪುಣ್ಯ ಫಲದಿಂದ ನಿನಗೊಬ್ಬ ಧನಿಕ ಸತ್ಪುತ್ರನು ಜನಿಸುವನು. ನೀನು ಮನೆಗೆ ಬಂದ ಜಂಗಮರನ್ನು ಪ್ರಭುದೇವರಂತೆ ಕಂಡು ಆದರಿಸಬೇಕೆಂದು ಆಶೀರ್ವದಿಸಿ ಸಂಗಪ್ಪನೊಡನೆ ಊರ ಹೊರಗೆ ಹೋದರು. ಅಲ್ಲಿ ಒಂದು ಆಲದ ಮರವು ಕಾಣಿಸಿತು. ಯತಿವರರು ಅದರಡಿಯಲ್ಲಿ ಆಸನ ಹಾಕಿ ಕುಳಿತುಕೊಂಡರು. ಊರ ಭಕ್ತರು ಅವರಿಗೊಂದು ಆಶ್ರಮ ರಚಿಸಿದರು. ಆಗ ಸಂಗಪ್ಪನು ಅವರಿಗೆ "ಬುದ್ಧೀ,

ನಾನು ತಮಗೆ ಭೂದಾನ ಮಾಡಬೇಕೆಂದಿದ್ದೇನೆ, ಎಷ್ಟು ಬೇಕೆಂಬುದನ್ನು ಅಪ್ಪಣೆ ಕೊಡಿಸಿದರೆ ಅದರಂತೆ ಪಾದಕೃಪೆಯಿಂದ ನಡೆದುಕೊಳ್ಳುವೆನು" ಎಂದು ವಿನಯದಿಂದ ಬೇಡಿಕೊಂಡನು. ಆಗ ಅವರು ಈ ಕಮಂಡಲ ತುಂಬ ನೀರನ್ನು ತುಂಬಿ ಸುತ್ತಲೂ ಸುರಿದರೆ ನಡುವೆ ಎಷ್ಟು ಸ್ಥಳ ಬರುವದೋ ಅಷ್ಟನ್ನು ಮಾತ್ರ ಕೊಟ್ಟು ಬಿಡೆಂದು ಆಜ್ಞಾಪಿಸಿದರು. ಆ ಪ್ರಕಾರ ಕಮಂಡಲದ ನೀರನ್ನು ಹೊಯ್ಯಲು ೯॥ ಎಕರೆ ಭೂಮಿಯು ಯೋಗಿಯ ಪಾದಕ್ಕೆ ಅರ್ಪಣವಾಯಿತು. ಅದೇ ಸ್ಥಳದಲ್ಲಿ ಮಠ ಕಟ್ಟಿಸಿ ಬೂದೀಶ್ವರರು ನೂರಾರು ವರ್ಷ ಜೀವಿಸಿದರು.

ಅಲ್ಲಿ ಶಿವಯೋಗಿಗಳು ತರತರದ ಲೀಲೆಗಳನ್ನಾಡಿದರು. ಒಮ್ಮೊಮ್ಮೆ ನಿಶ್ಚಲ ಸಮಾಧಿ ಹೊಂದುವರು. ಒಮ್ಮೊಮ್ಮೆ ನಾದಬ್ರಹ್ಮದಲ್ಲಿ ತಲ್ಲೀನರಾಗುವರು. ಬೆಳಗಿನ ಶಿಶುವಾಗಿ, ಮಧ್ಯಾಹ್ನದಲ್ಲಿ ತರುಣನಾಗಿ, ಸಾಯಂಕಾಲದಲ್ಲಿ ಮುದುಕನಾಗಿ ಕಾಣುವರು. ಒಂದು ದಿನ ನಿಶ್ಚಲ ಸಮಾಧಿಯಲ್ಲಿದ್ದಾಗ ಚೆನ್ನಪ್ಪನೆಂಬ ಹುಂಬ ಭಕ್ತನು ಅವರ ಕೋಣೆಗೆ ಬೀಗ ಹಾಕಿ ತೋಟಕ್ಕೆ ಹೋಗಿ ಬಿಟ್ಟನು. ಅಲ್ಲಿ ಅವನ ದೃಷ್ಟಿಗೆ ನೂರಾರು ಬೂದೀಶ್ವರರು ಕಂಡರು. ಅದರಿಂದ ಅವನಿಗೆ ಭಯ ಹಾಗೂ ಪಶ್ಚಾತ್ತಾಪ ಹುಟ್ಟಿ ಬಂದು ಬಾಗಿಲು ತೆರೆಯಲು ಅಲ್ಲಿ ಯೋಗಿಗಳು. ಎಚ್ಚರವಾಗಿದ್ದರು. ಚೆನ್ನಪ್ಪನು ಪೊಡಮಟ್ಟು "ಬುದ್ಧೀ, ತಪ್ಪಾಯಿತು. ಕ್ಷಮಿಸಬೇಕೆ"ಂದು ಬೇಡಿಕೊಂಡನು. ಅವನಿಗೆ ಆನಂದದಿಂದ ಆಶೀರ್ವದಿಸಿ ಕಳಿಸಿದರು.

ಅಷ್ಟರಲ್ಲಿ ನಾಗಲಿಂಗಾರೂಢನು ಅನಿರೀಕ್ಷಿತವಾಗಿ ಅಲ್ಲಿಗೆ ಬಂದು ಬೂದೀಶ್ವರನಿಗೆ "ಇನ್ನೂ ನೀನು ಎಷ್ಟು ದಿನ ಬಾಳಬೇಕೆಂದಿರುವೆ ? ಯೋಗಿಗಳು ಬಲು ಜೀವಗಳ್ಳರು ನೋಡು. ಈ ಜೀರ್ಣ ದೇಹವನ್ನು ತಡ ಮಾಡದೆ ಕಳಚಿಬಿಡು" ಎಂದು ನುಡಿದನು. ಅದಕ್ಕೆ ಬೂದೀಶನು "ನಾನೂ ಅದನ್ನೇ ಆಲೋಚಿಸುತ್ತಿದ್ದೆ. ನೀನೂ ಅದನ್ನೇ ಹೇಳಿದೆ. ನೆಟ್ಟಗಾಯಿತು. ಇನ್ನು ವಿಳಂಬ ಮಾಡುದದಿಲ್ಲ" ಎಂದು ಹೇಳಿ ಭಕ್ತರನ್ನು ಕರೆದು "ಇನ್ನು ನಾವು ಶಿವನ ಸನ್ನಿಧಿಗೆ ತೆರಳುವೆವು. ನೀವು ಶರಣರ ಮಾರ್ಗ ಹಿಡಿದು ನಡೆಯಿರಿ. ಕಾಯಕ ದಾಸೋಹಗಳನ್ನು ಭಕ್ತಿಯಿಂದಾಚರಿಸಿರಿ" ಎಂದು ಹೇಳಿ ಇಚ್ಛಾಮರಣಿಗಳಾದ ಯೋಗಿಗಳು ೧೮೩೦ ನೆಯ ಶಕೆಯಲ್ಲಿ ಲಿಂಗದಲ್ಲಿ ಬೆರೆದು ಬಯಲಾದರು. ಹೊಸಹಳ್ಳಿಯಲ್ಲಿ ಅವರ ಸಮಾಧಿಯು ಜಾಗ್ರತ ಸ್ಥಾನವಾಗಿದ್ದು ಎಷ್ಟೋ ಭಕ್ತರು ಅದಕ್ಕೆ ನಡೆದುಕೊಂಡು ತಮ್ಮ ಇಷ್ಟಾರ್ಥ ಪಡೆದುಕೊಳ್ಳುತ್ತಿದ್ದಾರೆ.

ಪ್ರತಿ ವರ್ಷ ಬೂದೀಶ್ವರನ ರಥೋತ್ಸವವು ಶ್ರಾವಣ ಮಾಸದಲ್ಲಿ ನಡೆಯುವದು. ಒಂದು ತಿಂಗಳಗರೆಗೆ ಪುರಾಣ ಪ್ರವಚನವು ಸಾಂಗವಾಗುವದು. ದಿನಾಲು ಗಣಸಂತೃಪ್ತಿಗೆ ವಿಶೇಷ ಜನವು ಕೂಡುವದು. ಬೂದೀಸ್ವಾಮಿಗಳ ನಂತರ ಆ ಪೀಠಕ್ಕೆ ನಾಲ್ಕು ಜನ ಪುಣ್ಯ ಶರೀರಿಗಳು ಪೀಠಾಧಿಕಾರಿಗಳಾದರು. ಅವರು ಯಾರೆಂದರೆ ೧. ಶ್ರೀ ಬಸವಲಿಂಗ ಸ್ವಾಮಿಗಳು ೨. ಬೆಳದಡಿಯ ಹಿರೇಮಠದ ಪಟ್ಟಾಧ್ಯಕ್ಷರು ೩. ನವಿಲುಗುಂದದ ಕೋಣನಕೆರೆಯ ಶ್ರೀ ಸಿದ್ಧಲಿಂಗೇಶರು ೪. ಈಗಿನ ಶ್ರೀ ಪ್ರಭುಸ್ವಾಮಿಗಳು. ಶ್ರೀ ಸಿದ್ಧಲಿಂಗಸ್ವಾಮಿಗಳು ಮಠಕ್ಕೆ ಪಲ್ಲಕ್ಕಿ ಮೇಣೆಗಳನ್ನು ಮಾಡಿಸಿದರು. ಶ್ರೀ ಪ್ರಭುಸ್ವಾಮಿಗಳು ಅನುಭವ ಮಂಟಪ, ಯೋಗ ನಿಲಯಗಳನ್ನು ಕಟ್ಟಿಸಿದ್ದಲ್ಲದೆ ಮಠದ ಮಹಾದ್ವಾರವು ಸಹ ಅವರಿಂದಲೇ ನಿರ್ಮಾಣವಾಯಿತು.

ಈ ಪುರಾಣವನ್ನು ಹುನಗುಂದದ ಬ್ಯಾಳಿ ಕಲ್ಯಾಣಪ್ಪ ಕವಿಯು ಶಾಲಿವಾಹನ ಶಕೆ ೧೮೯೦ ಮಾಘ ಶುದ್ಧ ೫ ರಂದು ಸಮಾಪ್ತಗೊಳಿಸಿದನು. ಬೂದೀಶನ ಚರಿತ್ರವನ್ನು ಓದಿ ಕೇಳಿದವರಿಗೆ ಸಕಲ ಇಷ್ಟಾರ್ಥಗಳು ಸಿದ್ಧಿಸುವವೆಂದೂ ಅವರ ಆಯುಷ್ಯವು ಅಭಿವೃದ್ಧಿಸುವುದೆಂದೂ ಕವಿಯು ಫಲಶ್ರುತಿಯನ್ನು ಹೇಳಿದ್ದಾನೆ. **ಬೂದೀಶಲೀಲೆಯು** ಚಿರಕಾಲ ಧರಣಿಯಲ್ಲಿ ಬೆಳಗಲೆಂದು ಹಾರೈಸಿದ್ದಾನೆ.

ಧಾರವಾಡ

**ಗ್ರಂಥಕರ್ತ**

೧೦-೭-೭೨

ಶ್ರೀಗುರು ಬಸವಲಿಂಗಾಯನಮಃ

# ಶ್ರೀ ಬೂದೀಶ್ವರಲೀಲೆ

## ಶ್ರೀ ಬೂದಿ ಮಹಾಸ್ವಾಮಿಗಳ ಪುರಾಣ

## ಪೀಠಿಕಾಸಂಧಿ

(ಮಂಗಲಾಚರಣ)

**ಭಾಮಿನಿ ಷಟ್ಪದಿ**

ಸೂಚನೆ:- ದೇವನೊಬ್ಬನೆ ಜೀವಲೋಕಕೆ
ಸಾವಿರಾರುಂಟವಗೆ ಪೆಸರ್ಗಳು
ಆವ ಹೆಸರಿಂ ಕರೆದಡದು ಪರಶಿವಗೆ ಸಲ್ಲುವದು

ಮಂಗಲಂ ಚಿಲ್ಲಿಂಗಮೂರ್ತಿಗೆ
ಮಂಗಲಂ ಪರತತ್ವರಾಶಿಗೆ
ಮಂಗಲಂ ಶ್ರೀ ಸಚ್ಚಿದಾನಂದಂಗೆ ತ್ರಿವಿಧಂಗೆ
ಮಂಗಲಂ ಸತ್ಯಂಗೆ ಶಿವನಿಗೆ
ಮಂಗಲಂ ಸುಂದರಗೆ ನಿತ್ಯಗೆ
ಮಂಗಲಂ ಪರಿಪೂರ್ಣನಾದ ಮಹೇಶನಿಗೆ ನಿರುತ ೧

ಸರ್ವವಿದ್ಯಾನಿಳಯೆ ನಿರ್ಮಳೆ
ಸರ್ವಬುದ್ಧಿಯ ಕಣಿಯೆ ಕೋಮಳೆ
ಸರ್ವಸಿದ್ಧಿಗಳಾದಿಕಾರಣಳಾದ ಶರ್ವಾಣಿ
ಸರ್ವ ಜೀವರ ತೋರಿಕೆಗೆ ಮೇಣ್
ಸರ್ವಪ್ರಕೃತಿಗೆ ಮೂಲವಾಗಿಹ
ಸರ್ವಮಂಗಳೆ ನಿನ್ನಯಡಿದಾವರೆಗೆ ನತನಪ್ಪೆ ೨

ಒದಗಬಾರದು ವಿಘ್ನಗಳುಯೆಂ–
ದೊದವಿ ಸರ್ವಮತೀಯರೆಲ್ಲರು
ಮೊದಲು ಮಂಗಲಮೂರ್ತಿಯಾದ ಗಣೇಶನಳ್ತಿಯಲಿ
ಹೃದಯದೊಳ್ ಧ್ಯಾನಿಸುತೆ ನಿತ್ಯಂ
ಮುದದಿ ವಿದ್ಯಾಬುದ್ಧಿಗಳಿಸುತೆ
ಪದುಳದಿಂ ಬಾಳುತಿರೆ ನಾನಾ ಗಣಪತಿಗೆ ನಮಿಪೆ ೩

ಸನ್ನುತನು ಷಣ್ಮುಖನು ಶಿವಸುತ–
ನುನ್ನತದ ಶಕ್ತ್ಯಾಯುಧನು ತಾ
ಮುನ್ನ ತಾರಕನೆಂಬ ದೈತ್ಯನ ಹರಣ ನೀಗಿದನು
ತನ್ನ ಮಾತೆಯೊಲೆಲ್ಲ ಸ್ತ್ರೀಯರ
ಮನ್ನಿಸಿದ ಕಡು ಬ್ರಹ್ಮಚಾರಿಯು
ನನ್ನಿಯಿಂ ನಾನವನ ಶ್ರೀಪಾದಕ್ಕೆ ಕುಂಬಿಡುವೆ ೪

ವೀರಭದ್ರನು ರುದ್ರರೂಪನು
ತೋರಖಡ್ಗವ ಧರಿಸಿ ಕರದೊಳು
ಹಾರಿಸಿದ ಯಾಗದಲಿ ದಕ್ಷನ ಶಿರವ ರೋಷದಲಿ
ಕ್ರೂರಕರ್ಮಿಗಳನ್ನು ದಂಡಿಸಿ
ವೀರವ್ರತಿಗಳ ಮುದದಿ ರಕ್ಷಿಪ
ಧೀರನಾತಗೆ ವಂದಿಸುವೆ ಗಂಭೀರ ಮೂರುತಿಗೆ ೫

ಹಿಂದೆ ಕೃತಯುಗದಲ್ಲಿ ನಾಲ್ಕಡಿ–
ಯಿಂದೆ ತ್ರೈತಾಯುಗದಿ ಮೂರಡಿ–
ಯಿಂದೆ ದ್ವಾಪರ ಕಲಿಯುಗದಿ ತಾನೆರಡು ಒಂದಡಿಯಿಂ
ನಿಂದ ಶ್ರೀ ಸದ್ಧರ್ಮರೂಪಗೆ
ಇಂದುಶೇಖರವಾಹನಂಗಾಂ
ನಂದಿಗಭಿವಂದಿಸುವೆ ಬಹುಭಯಭಕ್ತಿಯುತನಾಗಿ ೬

ಭೃಂಗಿ ಶಿವನೊಡ್ಡೋಲಗದಿ ತಾ–
ನಂಗಚೇಷ್ಟೆಯ ಹಾಸ್ಯಗೈದು ಸು–
ಮಂಗಳೆಯು ಗೆದ್ದಿಹನು ಮಾಯೆಯ ನೀಗಿ ಮುಕ್ಕಾಲ
ಭೃಂಗಿಯಂತಾರಿಹರು ವಿಶ್ವದಿ
ಲಿಂಗವೇ ತಾನಾಗಿ ಕೇವಲ
ಮಂಗಲಾತ್ಮನು ಮೆರೆದನಾತನ ಪದಕೆ ಪೊಡಮಡುವೆ ೭

ವಸುಧೆಯಂ ಕೈಲಾಸ ಮಾಡಿದ
ಬಸವ ತಂದೆಯ ಪಾದಪದ್ಮಕೆ
ಒಸೆದು ನಾಂ ವಂದಿಸುವೆ ನಿತ್ಯವು ಮಂತ್ರ ಮೂರುತಿಗೆ
ಅಸಮ ಶಿವಯೋಗೀಶ್ವರರು ತಾವ್
ಬಸವ ಮಂತ್ರವ ಜಪಿಸುತಿರ್ಪರು
ಬಸವ ನೀನೆನ್ನಯ ಕೃತಿಗೆ ಮಂಗಲವ ನೀಡುವುದು ೮

ಸರಸ ಸುವ್ರತ ಶೀಲ ಜ್ಞಾನಿಯು
ಪರಮ ಷಟ್‌ಸ್ಥಲ ಚಕ್ರವರ್ತಿಯು
ಪರತರದ ಅನುಭಾವ ಗೋಷ್ಠಿಗೆ ಚರಮಸಿದ್ಧಾಂತಿ
ಕರುಣಿಸಿದ ಸಿದ್ಧೇಶಗಿಷ್ಟವ
ಹರನ ಚಿಕ್ಕಳಿ ಚೆನ್ನಬಸವನ
ಚರಣ ಪದ್ಮಂಗಳನು ಶಿರದೊಳೊತ್ತಿ ನಾ ಕುಣಿವೆ ೯

ಅಲ್ಲಮ ಪ್ರಭುರಾಯನಂತಹ
ಬಲ್ಲ ಜ್ಞಾನಿಗಳಿಲ್ಲ ಜಗದೊಳು
ಎಲ್ಲಿಯೂ ಹಿಂದಿಲ್ಲವಿಂದಿಲ್ಲಿನ್ನು ಮುಂದಿಲ್ಲ
ಉಲ್ಲಸಿತ ಮನದಿಂದಲಾತನ
ಸಲ್ಲಲಿತ ಪದಯುಗ್ಮಗಳಿಗಾಂ
ಸೊಲ್ಲುಸೊಲ್ಲಿಗೆ ನಮಿಸಿ ಸುಖಸಂತೋಷಗೊಳ್ಳುವೆನು ೧೦

ಸೊನ್ನಲಾಪುರ ಸಿದ್ಧರಾಮನು
ತನ್ನಯಾ ಹಠಯೋಗ ಸಾಧನೆ–
ಯನ್ನು ಳಿದು ಪ್ರಭುಬೋಧೆಗಾನತನಾಗಿಯುವನೊಡನೆ
ನನ್ನಿಯಿಂ ಕಲ್ಯಾಣ ಬಸವನ
ಸನ್ನಿಧಿಯೊಳೈತಂದು ಶ್ರೀಗುರು
ಚೆನ್ನಬಸವನ ಶಿಷ್ಯನಾದನು ನಮಿಪೆನವನಡಿಗೆ ೧೧

ಬಸವ ತಂದೆಯು ಕೀರ್ತಿಲತೆ ತಾ
ದಿಸೆದಿಸೆಗೆ ಕುಡಿವರಿದು ಹಬ್ಬಿರೆ
ರಸಿಕ ಕಾಶ್ಮೀರಾಧಿಪತಿ ಮಾದೇವ ಭೂಪಾಲ
ಎಸೆದು ರಾಜ್ಯದ ಭೋಗಮಂ ಮನ–
ಮೊಸೆದು ಮೋಳಿಗೆ ಕಾಯಕದಿ ಸಲೆ
ಅಸಮ ಚರದಾಸೋಹಿಯೆನಿಸಿದನವಗೆ ನತನಪ್ಪೆ ೧೨

ವೀರಭದ್ರೇಶಸ್ವರೂಪನು
ವೀರಮಡಿವಳ ಮಾಚಿದೇವನು
ಸಾರಿ ಗಣಪಥವನ್ನು ಶರಣದ್ರೋಹದಂಡನೆಗೆ
ಘೋರ ಶಾಸನಗೈದು ವೈರಿಗೆ
ವೀರಶೈವ ಧ್ವಜವ ಮೆರೆಸಿದ
ಧೀರ ಮಡಿವಳ ಮಾಚಿ ತಂದೆಗೆ ಶರಣು ಶರಣೆಂಬೆ ೧೩

ಪೊಡವಿಪತಿ ಕೌಶಿಕನ ಕರವಂ
ಪಿಡಿಯದಾತನ ಧಿಕ್ಕರಿಸಿ ತಾ
ಕಡೆಗೆ ಶ್ರೀಶೈಲಾಧಿನಾಥನೆ ತನ್ನ ಪತಿಯೆಂದು
ಪಡೆದು ತತ್ಕರುಣವನು ಬಸವನ
ಎಡೆಗೆ ಭಕ್ತಿಯು ಸೊದೆಯನೀಂಟಲು
ನಡೆದ ಮಾದೇವಕ್ಕ ವಿರತೆಗೆ ಶರಣು ಶರಣಾರ್ಥಿ ೧೪

ವರಸಚಿವ ಸಿದ್ದಣ್ಣ ತನುಜೆಯು
ಶರಣ ಬಸವೇಶ್ವರನ ಮಡದಿಯು
ಶರಣೆ ಶ್ರೀಮತಿ ನೀಲಲೋಚನೆ ಲಿಂಗನಿಷ್ಠೆಯುಲಿ
ಚರಮ ಸೀಮೆಯ ತಾಳ್ದ ಮಹಿಮಳು
ಅರಿದು ನಿಜ ಪತಿಯೈಕ್ಯಮಂ ತಾ-
ನಿರದೆ ಲಿಂಗದೊಳಡಗಿದಳು ಶರಣೆಂಬೆನವಳಡಿಗೆ ೧೫

ಚೆನ್ನಬಸವೇಶ್ವರನ ಮಾತೆಯು
ಉನ್ನತಾತ್ಮ ಸುಯೋಗ ಸಿದ್ಧಳು
ಪೊನ್ನತಿಕೆಯಿಂ ಮೆರೆದಳನುಭವಮಂಟಪದಿ ಸಾಧ್ವಿ
ಸನ್ನುತಾತ್ಮಳ ದಿವ್ಯ ಚರಣಕೆ
ನನ್ನ ಪ್ರಣಿಪಾತಂಗಳಂ ಕಡು
ನನ್ನಿಯಿಂದರ್ಪಿಸುವೆ ನಾಗಮ್ಮನಿಗೆ ನಲವಿಂದೆ ೧೬

ಹಡಪದಪ್ಪಣ್ಣಗಳ ಮಡದಿಯು
ನಡೆನುಡಿಯೊಳತಿ ಶುದ್ಧ ಚರಿತಳು
ಪಡೆದು ದಿವ್ಯಜ್ಞಾನವನ್ನನುಭಾವಮಂಟಪದಿ
ಸಡಗರದಿ ವಚನಗಳ ವಿರಚಿಸಿ
ನುಡಿದಿಹಳು ಲಿಂಗಮ್ಮ ಶರಣೆಯು
ಪೊಡಮಡುವೆ ನಾನವಳ ಪಾದಕೆ ಪರಮ ಭಕ್ತಿಯೊಳು ೧೭

ಎಂದಿಗಿಂ ಹೆಚ್ಚಾಗಿ ಅಕ್ಕಿಯ
ತಂದಿರಲು ತಾನಾಯ್ದು ಗಂಡನು
ನೊಂದು ತಾನಾಯ್ದಕ್ಕಿಮಾರಯ್ಯಂಗೆ ಮುನಿಸಿನಲಿ
ಕುಂದು ನೋಡಾ ಹೆಚ್ಚಿನಾಶೆಯು
ತಂದಿರೇತಕೆ ಸುರಿದು ಬನ್ನಿರಿ-
ಯೆಂದು ಪೇಳಿದ ಲಕುಮ ತಾಯಿಯ ಪದಕೆ ಶರಣೆಂಬೆ ೧೮

ಶರಣ ಬಸವೇಶ್ವರನ ಭಕ್ತಿಗೆ
ಪರವಶಳು ತಾನಾಗಿ ಪತಿಯೊಡ-
ನಿರದೆ ಕಾಶ್ಮೀರಾಧಿಪನ ವರಮಹಿಷಿ ಮಾದೇವಿ
ದೊರೆಯ ಪೋಳಿಗೆ ಕಾಯಕಕೆ ಸಲೆ
ನೆರವನಿತ್ತನು ದಿನವು ತಪ್ಪದೆ
ಚರರ ಸೇವೆಯ ಗೈದ ಮಹಿಮಳ ಪದಕೆ ಶರಣಾರ್ಥಿ ೧೯

ಅಡಿಯ ಹಲಗೆಯು ಬ್ರಹ್ಮನೆಂದುಂ
ನಡುವೆ ತೋರಣ ವಿಷ್ಣುವೆಂದುಂ
ಸಡಗರದಿ ನಿಂದಿರ್ದಬೊಂಬೆಯು ರುದ್ರನೆಂದರಿದು
ಅಡಿಗಡಿಗೆ ರಾಟಿಯನು ತಿರುಹುತೆ
ಒಡಲ ಭಕ್ತಿಯ ನೂಲ ತೆಗೆದಾ–
ಮೃಡ ಶರಣೆ ಶ್ರೀ ಕದಿರ ರೆಮ್ಮವ್ವಂಗೆ ವಂದಿಸುವೆ ೨೦

ಬಸವನೋಳ್ ಸದ್ಭಕ್ತಿಯೆಸಗುತ–
ಲೊಸೆದು ಗುರುಚರಲಿಂಗಸೇವೆಯೊ–
ಳಸಮ ದಾನವ ನೀಡಿ ತಾ ವರದಾನಿಯೆಂದೆಂಬ
ಪೆಸರ್ವಡೆದ ದಾನಮ್ಮ ಶರಣೆಯು
ಎಸೆದಳಾ ಗುಡ್ಡಾಪುರದಿ ಮನ–
ವೊಸೆದವಳ ದಾಸೋಹ ಭಕ್ತಿಗೆ ಮಣಿವೆನೊಲವಿಂದೆ ೨೧

ಶರಣ ಬಸವನ ಭಕ್ತಿಯಾಲಿಸಿ
ಅರಿದು ದೇಹದಸಾರತೆಯ ತಾಂ
ವಿರತಿಭಾವವ ತಾಳ್ದು ಕೌದಿಯ ಹೊದೆದು ನಡೆತಂದು
ಭರದಿ ಕಲ್ಯಾಣಕ್ಕೆ ಮಾದೇ-
ವರಸನನುಜೆಯು ಶರಣಸಂಗದಿ
ಮೆರೆದ ಬೊಂತಾದೇವಿಪಾದಾಂಬುಜಕೆ ಶರಣೆಂಬೆ ೨೨

ಪರಮ ಕಲ್ಯಾಣದೊಳು ಬೆಳಗಿದ
ಶರಣ ಶರಣೆಯರೆಲ್ಲರಡಿದಾ–
ವರೆಗೆ ಶಿರಬಾಗುವೆನು ನಾಂ ಶಿವಶರಣ ಸೇವಕನು
ಅರಿತು ಮರೆತಾಂ ತಪ್ಪುಗೈದೊಡೆ
ಕರುಣದಿಂ ಸಲೆ ತಿದ್ದಿ ಬುದ್ಧಿಯ
ಮರೆಯದಿತ್ತೆನ್ನನ್ನು ರಕ್ಷಿಪುದೆಂದು ಬೇಡುವೆನು ೯

ಶಿವನನುಂ ಶಿವಶರಣರಂ ಮಿಗೆ
ಕವನದೊಳ್ ಬಣ್ಣಿಸುತೆ ಸ್ಫುರಣದಿ
ತವೆ ವಿಮಲತತ್ವಂಗಳಂ ಕಾವ್ಯದೊಳು ಮಂಡಿಸುತೆ
ಭುವನದೊಳ್ಬೆಳಗಿರ್ದ ನಮ್ಮಯ
ಶಿವ ಕವಿಗಳಂ ಸ್ಮರಿಸಿ ಸನ್ನೀ–
ಕವನಕಾಶೀರ್ವಾದವಂ ಕೋರುವೆನು ವಿನಯದಲಿ ೧೦

ಹರಿಹರಗೆ ಮೇಣ್ ರಾಘವಾಂಕಗೆ
ಕೆರೆಯ ಪದ್ಮರಸಗೆ ಷಡಕ್ಷರಿ–
ವರಗೆ ಮೇಣ್ ಪಾಲ್ಕುರಿಕೆ ಸೋಮಗೆ ಚಾಮ ಭೀಮರಿಗೆ
ಸರಸಕವಿ ವಿರುಪಾಕ್ಷನಿಗೆ ಮೇ-
ಣುರುತರದ ಕವಿ ಮಗ್ಗಿಮಾಯಿಗೆ
ಪರಮ ತೋಂಟದ ಸಿದ್ಧಲಿಂಗಾರ್ಯರಿಗೆ ನತನಪ್ಪೆ ೧೧

ಪರಮ ನಿಜಗುಣ ಸರ್ಪಭೂಷಣ
ನರೆ ಮೆರೆದ ಮುಪ್ಪಿನ ಷಡಕ್ಷರಿ
ವರನಿರಂಜನ ಬಾಲಲೀಲಾ ಮಹಾಂತಶಿವಯೋಗಿ
ಸರಸಗನ್ನಡನಾಡ ಸಿರಿಯೆನೆ
ಮೆರೆದ ಸರ್ವಜ್ಞಾದಿ ಕವಿಗಳ
ಚರಣ ಧೂಳಿಯನಾಂತು ಸಿರದೊಳು ನಲಿವೆನಾಂ ಮುದದಿ ೧೨

ಹರುಷದಿಂ ಕಲ್ಮಠದ ಪ್ರಭುವನು
ಗುರುಬಸವ ಕವಿಯನ್ನು ಮನ್ನಿಸಿ
ಹರಸಲೆಂದೆನ್ನನ್ನು ಮನದೊಳು ಬೇಡಿಕೊಂಬುವೆನು
ಪರಮ ಪಂಡಿತ ಗುಬ್ಬಿ ಮಲ್ಲಣ
ಕರಿಬಸವ ಬಸವಪ್ಪ ಶಾಸ್ತ್ರಿಗ–
ಳೊರೆದ ಕೃತಿಗಳ ಸ್ಮರಿಸಿ ಕೊಂಡಾಡುವೆನು ಮನದುಂಬಿ ೨೭

ಚೆನ್ನಕವಿ ದ್ಯಾಂಪುರದ ಸಿರಿ ಮೇ–
ಣುನ್ನತದ ಹುಕ್ಕೇರಿ ಶಾಸ್ತ್ರಿಗ–
ಳನ್ನು ಬಳ್ಳಾರಿಯ ಸುಕವಿ ನಾಗೇಶಶಾಸ್ತ್ರಿಗಳ
ಮನ್ನಣೆಯ ದಾವಣಗೆರೆಯ ಕವಿ
ರನ್ನ ಧೀಮಾನ್ ಚಂದ್ರಶೇಖರ–
ರನ್ನುಳಿದ ಶಿವಕವಿಗಳಂ ಧ್ಯಾನಿಸುವೆನಾಂ ಮುದದಿ ೨೮

ಮಂಗಲಂ ಶಿವಲಿಂಗಯೋಗಿಗೆ
ಮಂಗಲಂ ಶಿವಯೋಗನಿದ್ರಗೆ
ಮಂಗಲಂ ಭವಜಾಡ್ಯಜಯಿಸಿದ ವೀರಶೈವನಿಗೆ
ಮಂಗಲಂ ಪರತತ್ವಶೀಲಗೆ
ಮಂಗಲಂ ಸಂಸಾರಪಾರಗೆ
ಮಂಗಲಂ ಮುರುಘೇಂದ್ರ ಶ್ರೀ ಶಿವಯೋಗಿಪುಂಗವಗೆ ೨೯

ಶ್ರೀಗುರೂತ್ತಮಶೈವಧಾಮ
ತ್ಯಾಗ ಭೋಗಾದಿಗಳ ಸುಂದರ
ಯೋಗದೊಳು ಶಿವಯೋಗ ಮಧುರವ ಕಂಡು ತಾನುಂಡು
ಆಗಮೋಕ್ತ ಶಿವಾನುಭವ ಸುಧೆ–
ಗಾಗರವದಾಗಿರ್ದ ಪರಶಿವ–
ಯೋಗಮಂದಿರ ಕರ್ತ ಸುಕುಮಾರಂಗೆ ಶಿವಶರಣು ೩೦

ತಾಯಿಯುಂದದೊಳೆಮ್ಮ ಸಲಹಿದ
ಕಾಯಕದ ಮಹತಿಯನು ತೋರಿದ
ಬಾಯಿಯೋಳ್ ಶಿವಯೋಗಿ ನಾಮವ ಜಪಿಸಹಚ್ಚಿರ್ದ
ಕಾಯ ವಾಙ್ಮನದಿಂದ ಸೇವೆಯ
ಆಯತವ ಬೋಧಿಸುತೆ ಬಾಲನಿ-
ಕಾಯವನ್ನುದ್ಧರಿಸಿದಾ ಮೃತ್ಯುಂಜಯಗೆ ಶರಣು ೩೧

ಗುರುವರೇಣ್ಯನ ಚರಣಸೇವೆಯ
ಚರಿಸಿ ತಪ್ಪದೆ ದೀರ್ಘಕಾಲವು
ಕರುಣಮಂ ಪಡೆದವರ ಹಸ್ತದಿ ತೇಜದಿಂ ಬೆಳಗಿ
ಪರಮ ಮುರುಘಾಮಠದಧೀಶರು
ಚರವರೇಣ್ಯರು ಧಾರವಾಡದಿ
ಮೆರೆವ ಶ್ರೀ ಮೃಂತಪ್ಪಗಳ ಪಾದಾಂಬುಜಕೆ ಮಣಿವೆ ೩೨

ಶ್ರೀಮದಖಿಲ ಕಲಾವತಂಸನ
ನಾಮರೂಪಕ್ರಿಯೆಗತೀತನೆ
ಪ್ರೇಮದಿಂ ಸದ್ಭಕ್ತವೃಂದವ ಪೊರೆದ ಕರುಣಾಳು
ಕಾಮಿತಾರ್ಥವನೀವ ಬೂದಿಯ
ಸ್ವಾಮಿ ನಿನ್ನಯ ಮಹಿಮೆಯಂ ಸಲೆ
ನಾಂ ಮುದದಿ ಸ್ಮರಿಸುವೆನು ಮಂಗಲ ನೀಡುಮತ್ಕೃತಿಗ ೩೩

ಎಲ್ಲ ಶಿವಗಣವನ್ನು ಭಕ್ತಿಯೊ-
ಳೆಲ್ಲ ಶರಣರನೆಲ್ಲ ಶರಣೆಯ-
ರೆಲ್ಲ ಹರಗುರುಚರವರೇಣ್ಯರ ನೆನೆದು ಮನದಲ್ಲಿ
ಸಲ್ಲಲಿತಮಾದೆನ್ನಯೀಕೃತಿ
ಗೆಲ್ಲಿಯೂ ವ್ಯತ್ಯಯವು ಬರದೂ
ತೆಲ್ಲರಂ ಮರೆಹೊಕ್ಕು ಬೇಡುವೆ ತತ್ಕೃಪಾಶಿಷವ ೩೪

## ಕಥಾನಿರ್ದೇಶ

ಕೇಳಿರೀ ಬೂದೀಶ ಚರಿತೆಯ
ಪೇಳುವೆನು ಸದ್ಭಕ್ತಿಯಿಂದಲಿ
ಏಳುನೂರೆಪ್ಪತ್ತು ಮೇಣ್ಮುಂದೈದು ವರ್ಷಗಳ
ಬಾಳಿದಾ ಶಿವಯೋಗಿಮಹಿಮರ
ಆಳಿನಾಳಾಗೀ ಪುರಾಣವ
ಭಾಳನೇತ್ರನ ನೆನೆದು ರಚಿಸುವೆ ಮಂಗಳವ ಕೋರಿ ೩.೫

ಸರಸ ಭಾಮಿನಿಷಟ್ಪದಿಯ ಬಹು
ಸರಳ ಶೈಲಿಯೊಳೊರೆದಿಹೆನು ನಾಂ
ಪರಮಪೂಜ್ಯ ಶ್ರೀಪ್ರಭುಸ್ವಾಮಿಗಳ ಮತದಂತೆ
ವರಕವಿಯು ನಾನಲ್ಲ ಕಾವ್ಯದಿ
ಬರುವ ರಸಗಣ ಪ್ರಾಸಲಕ್ಷಣ
ವಿರದಿರಲು ಶಿವಯೋಗಿಚಾರಿತ್ರ್ಯಕ್ಕೆ ಕುಂದಿಲ್ಲ ೩.೬

ಪರಮಪಂಡಿತನಲ್ಲವೈ ನಾಂ
ವರಕವಿಗಳಾ ಸೇವಕನು ದಿಟ
ಬರಿದೆ ಬೂದೀಶ್ವರನ ಚರಿತೆಯನೊರೆವ ಸಾಹಸಕೆ
ಕರವ ನೀಡಿದೆ ಕರುಣಿಸುವರಾರ್ ?
ಚರವರೇಣ್ಯನೆ ಬೂದಿಯೋಗಿಯು
ಹರಸಬೇಕಲ್ಲದಲೆ ಮತ್ತಿನ್ನಾರು ಕಾಯ್ವವರು ? ೩.೭

ಸ್ವಾಮಿವರ್ಯರದೆತ್ತ ಶಿವ ! ಶಿವ !
ಪಾಮರನು ನಾನೆತ್ತ ಪೂಜ್ಯರ
ಭೂಮಿಕೆಯ ಸೊಗಸಾಗಿ ಚಿತ್ರಿಪೊಡೆನ್ನಳವೆ ಶಿವನೆ
ಆ ಮಹಿಮರಾ ನಾಮಸ್ಮರಣೆಯ
ಪ್ರೇಮದಿಂ ನಾಂಗೈದು ಮನದೊಳು
ನೇಮವಿಡಿದವರಮಳಚರಿತೆಯನೊರೆವೆನಳ್ತಿಯಲಿ ೩.೮

ಅಷ್ಟಮಾದಾವರಣಯುಕ್ತರ
ಅಷ್ಟವಿಧಪೂಜಾನುರಕ್ತರ
ಇಷ್ಟಲಿಂಗದ ಪೂಜೆಯನುಸಂಧಾನತನ್ಮಯರ
ಸ್ಪಷ್ಟವಾದಾಸತ್ಕಥೆಯನಾಂ
ಕ್ಲಿಷ್ಟಶೈಲಿಗೆ ಇಂಬುಗೊಡದಲೆ
ಸೃಷ್ಟಿಸುವೆ ಬಹು ಸುಲಭಸುಲಲಿತವಾದ ಕನ್ನಡದಿ ೨೯

ಕೃತಿಯು ಶ್ರೀಬೂದೀಶಲೀಲೆಯು
ಕೃತಿಗಧೀಶ್ವರ ಬೂದಿಯೋಗಿಯು
ಕೃತಿಯ ಕವಿ ಕಲ್ಯಾಣಪನು ಹುನಗುಂದಪುರವಾಸಿ
ಮತಿಯುತರು ಹೊಸಹಳ್ಳಿ ಗ್ರಾಮದ
ವಿತತ ಬೂದೀಮಠದಧೀಶರು
ಕೃತಿಗೆ ಕಳೆಯನ್ನಿತ್ತವರು ಪ್ರಭುಸ್ವಾಮಿಗಳು ನೋಡಾ ೩೦

ಜಿಲ್ಲೆ ಹಾಸನದೊಳಗೆ ಚೆಲುವನ-
ಹಳ್ಳಿಯೆಂಬೂರಲ್ಲಿ ನೆಲಸಿದ
ಒಳ್ಳೆಮಠವಿಹುದೊಂದು ಶ್ರೀ ಬಸವಾರ್ಯ ಬಸವಾಂಬೆ
ಅಲ್ಲಿ ಸ್ಮರಹರಭಕ್ತಿ ಸಂಪದ-
ವುಳ್ಳ ದಂಪತಿಯೊಡಲೊಳುದಿಸಿದ-
ನುಲ್ಲಸಿತ ಸುಕುಮಾರನೋರ್ವನು ಸಿದ್ಧವೀರಾರ್ಯ ೩೧

ಬಳಿಕ ದೊಡ್ಡವನಾಗಲಾತನ
ಕಳುಹಿದರು ಶಿವಯೋಗಮಂದಿರ-
ಕಳಿಯುದಾ ಸದ್ಭಕ್ತಿಯೋಗಜ್ಞಾನಮಂ ಪಡೆಯೆ
ಕಲಿತು ವಿದ್ಯಾಭ್ಯಾಸವೆಲ್ಲವ
ತಳೆದು ಜಂಗಮ ದೀಕ್ಷೆಯಲ್ಲಿಯೆ
ಬೆಳಗಿದರು ಪ್ರಭುನಾಮದಿಂ ಹೊಸಹಳ್ಳಿ ಮಠವನು ೩೨

ವೀರ ಶರಣರ ವಚನಸಾರವ
ಹೀರಿ ಗ್ರಂಥದ ರೂಪದಿಂ ಸಲೆ
ತೋರಿ ವಿಶ್ವಸ್ತೋತ್ರವಚನಾಚರಣವಚನಗಳ
ಸಾರವನು ಸಲೆ ನೀಡಿ ಜನಕುಪ-
ಕಾರವನು ನೆರೆಗೈದು ಪೀಠಾ
ಚಾರ ಶೀಲವ ಮೆರೆದಿಹರು ಕಣ್ಮಣಿಯು ತಾವಾಗಿ ೪೩

ಶ್ರೀ ಪ್ರಭುಸ್ವಾಮಿಗಳ ಆಜ್ಞೆಯೊ-
ಳೀ ಪ್ರಯತ್ನಕೆ ಕೈಯಹಾಕಿದೆ
ಆ ಪ್ರಮಥ ಬಸವಾದಿಗಳ ಸತ್ಕೃಪೆಯು ನನಗಕ್ಕು
ಸುಪ್ರಸಂಗವದೊದಗಿರಲು ನಾ-
ನಪ್ರಬುದ್ಧನೆ ಹಿಂಜರಿವುದಕೆ ?
ಸುಪ್ರಸನ್ನತೆಯಿಂದೆ ಕಾವ್ಯವ ರಚಿಸತೊಡಗುವೆನು ೪೪

ಜಸವು ಬಂದೊಡೆ ಬರಲಿ ಪೋಗಲಿ
ಉಸುರದೇನುಂ ಹಿಗ್ಗುಕುಗ್ಗುಗ-
ಳಸಮಭಾವವ ಮನದಿ ತಾರದೆ ಬೂದಿ ಶಿವಯೋಗಿ
ರಸಿಕತನದಿಂ ತಾನೆ ತನ್ನಯ
ಹೆಸರು ಮಸಳಿಸದಂತೆ ಕಾಯುವ
ಹೊಸ ಹೊಣೆಯು ಹೊರಲೆಂದು ತತ್ಪಾದಕ್ಕೆ ನತನಪ್ಪೆ ೪೫

ಬೂದಿಮಠ ಹೊಸಹಳ್ಳಿ ಪೀಠದ
ಮೋದವುಕ್ಕುವ ನಗೆಮೊಗದ ಶ್ರೀ
ಪಾದಪೂಜ್ಯರು ಪ್ರಭುಮಹಾಸ್ವಾಮಿಗಳು ಮನದಂದು
ಬೂದಿಯೋಗಿಯ ಸತ್ಪ್ರಚೋದನೆ-
ಯಾದ ಕೂಡಲೆ ತಚ್ಚರಿತ್ರವ
ಮೇದಿನಿಗೆ ಪ್ರಕಟಂಗೊಳಿಪ ಮಹದಾಸೆ ಮಾಡಿಬರೆ ೪೬

ಬೇಗದಿಂದೈತಂದು ಹರ್ಷದಿ
ಯೋಗಿ ನೆಲಸಿದ ಧಾರವಾಡದ
ತ್ಯಾಗ ಮೂರುತಿ ಶ್ರೀ ಮಹಾಂತಪ್ಪಂಗಳಂ ಕಂಡು
ಆಗಮನ ಕಾರಣವ ಪೇಳುತೆ
ಹೇಗೆ ಬೂದೀಶ್ವರಚರಿತ್ರವು
ರಾಗದಿಂ ಭೂತಲದಿ ಮೆರೆಯುವದೆಂದು ಬೆಸಗೊಳಲು ೪೭

ಎಲ್ಲ ಬಲ್ಲವರಿಲ್ಲ ನಿಜವಿದು
ಬಲ್ಲವರು ಬಹಳಿಲ್ಲ ದಿಟವೈ
ಬಲ್ಲಿದರು ತಾವಿರ್ದುಬಲವಿಲ್ಲೆಂಬ ಸ್ಥಿತಿಯಿರಲು
ಮೆಲ್ಲನಾಲೋಚಿಸುತೆ ಸ್ವಾಮಿಯು
ಉಲ್ಲಸಿತವದನಾರವಿಂದದಿ
ಇಲ್ಲಿ ಸಮ್ಮಯ ಬ್ಯಾಳಿ ಕಲ್ಯಾಣಪ್ಪನಿರ್ದಪನು ೪೮

ಕೂಟರಿಯಾತಗೆ ಬೂದಿಯೋಗಿಯ
ಕಡು ಸೊಗದ ಚರಿತಾಂಶಗಳ ಗಡ-
ಬಿಡದೆ ಸಲೆ ಸತ್ಕಾವ್ಯರೂಪದೊಳೊರೆವನೆಂದೆನಲು
ನುಡಿದ ಸ್ವಾಮಿಯ ಮಾತನಾಲಿಸಿ
ಒಡೆಯ ಶ್ರೀ ಪ್ರಭುಸ್ವಾಮಿಗಳು ಮುದ-
ದೊಡನೆ ನನ್ನಂ ಕರೆಸಿಕೊಂಡಿಂತೆನಗೆ ಪೇಳಿದರು ೪೯

ನೋಡಿರೀ ಬೂದೀಶ ಮಹಿಮರು
ನಾಡಿನಾದ್ಯಂತವನು ಚರಿಸುತೆ
ನಾಡೆ ಬಹು ವಿಧಲೀಲೆಗಳ ಸಲೆ ಯೋಗಬಲದಿಂದ
ಮಾಡಿಹರು ತಚ್ಚರಿತಸಾರವ
ನೀಡುವೆವು ನಿಮಗಿಂದು ನೀವದ
ನೋಡಿ ಭಾಮಿನಿಷಟ್ಪದಿಯ ರೂಪದಲಿ ರಚಿಸುವದು ೫೦

ನಿಮಗೆ ಶ್ರೀಮಾಂತಪ್ಪಗಳು ಸಲೆ
ಮಮತೆಯಿಂದಾಜ್ಞಾಪಿಸಿರ್ಪರು
ವಿಮಲ ಚರಿತರ ಕಾವ್ಯ ರಚಿಸುವ ಭಾಗ್ಯ ನಿಮಗಿಹುದು
ನಮಗೆ ನಂಬುಗೆಯುಂಟು ನಿಮ್ಮೊಳು
ಸುಮನದಿಂದೀ ಸೇವೆಗೈವುದು
ನಿಮಗೆ ಶ್ರೀ ಬೂದೀಶಯೋಗಿಯ ಕೃಪೆಯು ತಾನಕ್ಕು ೫೧

ಕತೆಯ ಸಾರವ ಹೇರಿ ಮೊದಲಿಂ-
ದತಿಸುಗಮವಪ್ಪಂತೆ ಕಾವ್ಯವ
ವಿತತಗೊಳಿಸಿರಿ ನಿಮ್ಮ ರೀತಿಯೊಳೆಂದನುಜ್ಞೆಯನು
ಮತಿಯುತರು ನನಗಿತ್ತು ನನ್ನಿಂ-
ದತಿಮುದದೊಳೀ ಕೃತಿಯ ಶ್ರೀಘ್ರಂ
ಹಿತಮಿತವು ತಾನಪ್ಪವೋಲ್ ಸಲೆ ಬರೆಯ ಹಚ್ಚಿದರು ೫೨

ಶಾಲಿವಾಹನ ಶಕೆಯೊಳಾಶ್ವಿಜ
ಲೋಲಮಾನೌಮಿಯ ತಿಥಿಯೊಳಾಂ
ಕಾಲಪದಿನೆಂಟ್ನೂರು ತೊಂಭತ್ತನೆಯ ವತ್ಸರದಿ
ಭಾಲನೇತ್ರನ ರೂಪಯೋಗಿಯ
ಲೀಲೆಗಳ ಚಾರಿತ್ರ್ಯಮಂ ಗಡ
ತಾಳಮೇಳದಿ ಬರೆಯಲುಜ್ಜುಗಿಸಿದೆನು ತತ್ಕೃಪೆಯಿಂ ೫೩

ಸಿದ್ಧಯೋಗಿಯ ಸಚ್ಚರಿತ್ರವ
ಶುದ್ಧ ಮನದಿಂ ಬರೆದೆನಲ್ಲದೆ
ಬುದ್ಧಿಪಾಂಡಿತ್ಯವ ಪ್ರದರ್ಶಿಪ ಶಕ್ತಿಯೆನಗುಂಟೇ ?
ಶುದ್ಧ ಸಿದ್ಧ ಪಸಿದ್ಧ ಪುರುಷರ
ಮುದ್ದು ಮುದ್ದಾದೀ ಚರಿತ್ರೆಯ
ಸದ್ದುಮಾಡದೆ ಮೌನದಿಂ ಬರೆದಿರ್ದೆ ಭಕ್ತಿಯಲಿ ೫೪

ಆಡಿ ಶರಣರ ಕೂಡೆ ಕಾಯದ
ಪಾಡಿ ಶರಣರ ಕೂಡೆ ರಸನೆಯು
ನೋಡಿ ಶರಣರ ಕೂಡೆ ಕಂಗಳ ಶುದ್ಧಿಯಂ ಪಡೆದು
ರೂಢಿಯೊಳಗೀಯೋಗಿ ಬಹು ಚರಿ-
ಸಾಡಿ ಲೋಕವ ತಿದ್ದಿ ತೀಡಿದ
ನಾಡನಡತೆಗೆ ಬೆಳಕ ನೀಡದೆ ಬಿಡುವುದನುಚಿತವು ೫೫

ಹೊನ್ನು ದೊರಕದು ನೆಲವನಗಿಯದೆ
ಬೆಣ್ಣೆ ದೊರಕದು ಪಾಲಗಡಿಯದೆ
ಹಣ್ಣು ದೊರೆಯದು ಎಲೆಯ ಸರಿಸದೆ ನಾವಿದನು ತಿಳಿದು
ಅಣ್ಣ ಬಸವನ ತತ್ವಸತ್ಯವ
ಕಣ್ಣ ಮುಂದೆಯೆ ಕಾಣಬಯಸಲು
ಪುಣ್ಯರಾಶಿಯ ಬೂದಿಯೋಗಿಯ ಚರಿತೆ ಬೇಕೆಮಗೆ ೫೬

ಮೇರುಗಿರಿಯೊಳು ಮರುಜವಣಿಯನ-
ಪಾರಸಾಗರದಲ್ಲಿ ಸುಧೆಯನು
ಕೋರಿ ಶೋಧಿಸಿ ನಿತ್ಯಸುಖದೊಳು ಕಾಲ ಕಳೆವಂತೆ
ಧಾರುಣೀಜನವೃಂದ ಯೋಗಿಯ
ಚಾರು ಚರಿತೆಯ ಕೇಳಿಯಮೃತವ
ಹೀರಿ ಹಿಗ್ಗುತೆ ನಲಿಯಲೆಂದಾನಾಸಿಪೆನು ಮನದಿ ೫೭

ತನಗೆ ತನ್ನ ವಿನೋದಕಾಗಿಯೆ
ಮನಕೆ ಒಗ್ಗುವ ಹಾಗೆ ಚರಿತೆಯ-
ನೆನಗೆ ಬರೆಯಲು ಹಚ್ಚಿ ಸೇವೆಯ ಕೊಳ್ಳುತಿರುತಿರ್ಪ
ಅನುಪಮಾನಂದಾತ್ಮಪೂರನ
ಘನಪದಾಂಬುಜಭೃಂಗವಾಗುತ-
ಲನುಗೊಳಿಸಿದೆನು ಕಾವ್ಯಮಂ ಸದ್ಭಕ್ತಪಾಠಕರಾ ೫೮

ಶ್ರೀಮದಖಿಲ ವಿಶಾಲ ವಿಶ್ವವ-
ನಾ ಮಹಾದೇವನು ದಲಾಳ್ವನು
ಸೋಮಶೇಖರ ಪಾರ್ವತೀಧವ ಕಾಮಹರನೆಂದು
ಸ್ವಾಮಿಯಂ ಸಲೆ ಪೆಸರಿಸಿರ್ಪರು
ನಾಮವೇ ತಾನಾತ್ಮತತ್ವವು
ನೇಮದಿಂ ಶಿವರೂಪ ಬೂದೀಶ್ವರನ ನೆನೆಯುವದು ೫೯

**ಅಂತು ಪೀಠಿಕಾಸಂಧಿಯು ೫೯ ಪದ್ಯಕ್ಕೆ ಮಂಗಲಮುಕ್ಕಂ**

**— ಭದ್ರಂ ಶುಭಂ ಮಂಗಲಂ —**

ಶ್ರೀಗುರುಬಸವಲಿಂಗಾಯನಮಃ

# ಒಂದನೆಯ ಸಂಧಿ

## ವ್ಯಕ್ತಿಚಿತ್ರ

ಸೂಚನೆ:- ಶಿವನರೂಪದಿ ಧರೆಗೆ ಬಂದಿಹ
ಶಿವಮಹಾಯೋಗಿಗಳ ನಿಲವಂ
ಸವೆಯದಾ ಸದ್ಭಯಿಂದರಿಯುವುದೆ ಕರ ಲೇಸು

ಭಾರತವು ವಿಶ್ವವನು ಬೆಳಗಿದೆ
ಭಾರತವ ಕರುನಾಡು ಬೆಳಗಿದೆ
ಆರವೀಂದುಂ ಕನ್ನಡವು ಮೆರೆಯುತಿದೆ ಪೆರ್ಮೆಯಲಿ
ಕಾರಣಿಕ ಪುರುಷರ್ಕಳಿಲ್ಲಿಯೆ
ತೋರಿದರು ಮಹಿಮೆಯನು ವಿಶ್ವಕೆ
ಯಾರು ಬಲ್ಲರು ವಿಶ್ವಕೇ ಕರುನಾಡೆ ಕೈದೀಪ! ೧

ವೀರ ಪುರುಷರ ನಾಡು ಕನ್ನಡ
ಧೀರ ಕವಿಗಳ ಬೀಡು ಕನ್ನಡ
ಸಾರ ಶರಣರ ದಾಸರಾನೆಲೆವೀಡು ಕರುನಾಡು
ಭೂರಿ ಸಾಮ್ರಾಜ್ಯಗಳ ನೆಲವನೆ
ಚಾರುವನಸೌಂದರ್ಯದೆಲೆವನೆ
ನಾರಿ ನರರೌದಾರ್ಯದಾಶಿರಿವನೆಯು ಕರುನಾಡು ೨

ಯೋಗಸಿದ್ಧರ ನಾಡು ಕನ್ನಡ
ಭೋಗಿಗಳ ನೆಲೆವೀಡು ಕನ್ನಡ
ತ್ಯಾಗವೀರರ ತೌರು ಕನ್ನಡ ವಾಸ್ತುಶಿಲ್ಪಗಳ
ರಾಗರಂಜಿತ ಬೀಡು ಕನ್ನಡ
ವೇಗಳುಂ ತಲೆಯೆತ್ತಿ ಮೆರೆವುದು
ಬಾಗಿದಾ ತಲೆ ಮುಗಿದ ಕೈಗಳ ಭಕ್ತರಾಶ್ರಮವು ೩

ಕನ್ನಡದ ನಾಡನ್ಯಧರ್ಮಗ–
ಳುನ್ನತಿಗೆಯಾಶ್ರಯುವ ನೀಡಿದೆ
ಮುನ್ನ ಶಂಕರ ಮಧ್ವರಾಮಾನುಜರು ಬಂದಿಲ್ಲಿ
ಚೆನ್ನದಿಂ ಮಠಪೀಠ ವಿರಚಿಸಿ
ಪೊನ್ನತಿಕೆಯಿಂ ಮೆರೆದರೈ ಸಲೆ
ಕನ್ನಡರು ಸಲೆ ಸರ್ವಧರ್ಮಸಮನ್ವಯರು ದಿಟವು ೪

ಜೈನ ಮುಸ್ಲಿಂ ಕ್ರೈಸ್ತಧರ್ಮಕೆ
ಮೌನದಿಂದಾಸರವನಿತ್ತುರೆ
ತಾನು ತನ್ನೌದಾರ್ಯಮಂ ಬೆಳಗಿಹುದು ಜಗದಲ್ಲಿ
ಏನು ಪರಧರ್ಮದಿ ಸಹಿಷ್ಣುತೆ !
ಏನು ಬಂಧುಪ್ರೇಮುವೆಷ್ಮದು !
ಏನು ಬಣ್ಣಿಪುದನ್ಯರನು ತನ್ನಂತೆ ಕಾಂಬುದನು ೫

ನೋಡಿರೀ ಕರುನಾಡ ಸೊಬಗನು
ನೋಡಿ ನಲಿಯಿರಿ ಪ್ರಕೃತಿದೇವಿಯು
ರೂಢಿಸಿದ ಸೌಂದರ್ಯಮಂ ಮನವಾರೆ ಕಣ್ದಣಿಯೆ
ಹಾಡಿ ಕುಣಿಯಿರಿ ಹರ್ಷದಿಂದಲಿ
ನಾಡ ಚೆಲ್ವಿಕೆ ನಾಡಿಸೈಸಿರಿ
ನಾಡೆ ಮೈಮರೆದಾಡುತಿವೆ ತೊನೆಯುತ್ತೆ ನಲವೇರಿ ೬

ಕೋಗಿಲೆಯ ಕಲರುತಿಯು ಕೇಳ್ವುದು
ಸೋಗೆ ಗರಿಗೆದರಾಡುವದು ಗಿಳಿ
ಮಾಗಿರುವ ಫಲರಸವನೀಂಟುತ ಹರ್ಷದಿಂದುಲಿಗು
ಯೋಗಿಯಂದದಿ ಬಕವು ಕೊಳದಡಿ
ಬಾಗಿ ಧ್ಯಾನವ ಗೈಯುತಿದೆ ಮೇಣ್
ನಾಗರವು ಹೆಡೆಯೆತ್ತಿ ತೂಗುತೆ ತೊನೆಯುತಿರ್ದಪುದು ೭

ಬಾಳೆ ಪೇರಲ ಮಾವು ನೇರಿಲ
ಈಳೆ ನಾರಳ ನಿಂಬ ತರುಗಳ
ಓಳಿಗಳು ಬನದಲ್ಲಿ ಕಂಗೊಳಿಸುವವು ಫಲದುಂಬಿ
ಬಾಳು ಸೊಗಸೀ ಬನದಿ ವಾಸಿಪ
ಹಾಳು ಸಂಸಾರದೊಳಗೇನಿದೆ
ಪೇಳಿರೆಂದುರೆ ಯೋಗಿಗಳು ಬನವನ್ನೆ ಮೆಚ್ಚಿದರು ೮

ಸಂಪಗೆಯು ಮಲ್ಲಿಗೆಯು ಕಣಗಿಲೆ
ಕಂಪಿಡಿದ ಸೇವಂತಿಗೆಯು ಮೇಣ್
ಸೊಂಪಿನಾ ದಾಸಾಳ ಬಕುಲ ಗುಲಾಬಿ ತಾವರೆಯು
ತಂಪುಮಾಮರದಡಿಯೆ ಕುಳಿತಿರೆ
ಜಂಪು ಬರುವದು ಕಣ್ಣಿಗಹಹಾ !
ಇಂಪು ಪೆಂಪುರೆ ಕಂಪಿನಾ ಪೂಲತೆಗಳಿಹವಿಲ್ಲಿ ೯

ಕಾಳು ಕಡಿಗಳ ಕಣಜ ತುಂಬಿದೆ
ಪೇಳಲೇಂ ಬೊಕ್ಕಸದ ಪೆರ್ಮೆಯ
ತಾಳಲಯದಾ ನಾಟ್ಯ ಸಂಗೀತಾದಿ ಸುಕಲೆಗಳು
ಮೇಳುಗೂಡಿವೆ ಚೆಲ್ವ ನಾಡೊಳು
ತೋಳಶಕ್ತಿಗೆ ಕುಂದದೆಲ್ಲಿದೆ ?
ಆಳುವಂಥ ಬಲಾಢ್ಯರಾಷ್ಟ್ರಗಳಿಲ್ಲಿ ನೆಲಸಿವವು ೧೦

ಹತ್ತಿ ಬೆಳ್ಳಿಯು ಗಟ್ಟಿಯಂತಿದೆ
ಮುತ್ತಿನಂತಿವೆ ಜೋಳದೆನೆಗಳು
ರತ್ನಮಾಣಿಕದಂತೆ ಗೋದಿಯು ಕಡಲೆ ತೊಗರಿಯಿವೆ
ಬತ್ತ ಬಂಗಾರದ ಕಣಂಗಳ
ಹೊತ್ತು ಮೆರೆವಂತಿರಲು ಧಾನ್ಯದ
ಮೊತ್ತ ಜೀವನ ಸತ್ವದಿಂದೀ ನಾಡು ರಂಜಿಸುಗು ೧೧

ಜುಳು ಜುಳನೆ ಡೊಂಕಾಗಿ ಹರಿಯುವ
ಹೊಳೆಗಳಾ ಸೊಬಗನ್ನು ನೋಡಿರಿ
ಥಳ ಥಳಿಪ ಥಾಟಿನಲಿ ಕುಣಿಯುತ ಮಂಜುಲಸ್ವನದಿ
ಇಳೆಯ ಕಣ್ಮನಗಳನು ಸೆಳೆಯುತೆ
ಹೊಳೆವ ಗುಡಿಗಳು ತಟದಿ ರಂಜಿಸೆ
ಜಲಧಿನಾಥನ ನೆರೆಯ ಸಾರಿದ ಸೊಬಗನೇನೆಂಬೆ ೧೨

ಮುತ್ತು ಮಾಣಿಕ ರತ್ನ ಹವಳಗ–
ಳುತ್ತಮೋತ್ತಮ ಜರದ ವಸ್ತ್ರಗ–
ಳೆತ್ತನೋಡಿದಡತ್ತ ರಜತಸುವರ್ಣ ಪೇಟೆಗಳ
ಮುತ್ತು ರತ್ನಗಳಳೆಯುತಿರ್ಪರು
ಬತ್ತದಂದದಿ ಬಳ್ಳದಿಂ ಸಲೆ
ವಿತ್ತವೈಭವವೆಷ್ಟು ಬಣ್ಣಿಪುದೆಮ್ಮ ಕರುನಾಡ ೧೩

ಕನ್ನಡದ ನುಡಿ ಸರಸಮಾಗಿದೆ
ಮನ್ನಣೆಯೊಳೆಂದೆಂದು ಮೆರೆದಿದೆ
ಕನ್ನಡದ ಸಂಸ್ಕೃತಿಯು ವಿಶ್ವದ ಕಣ್ಣು ಕುಕ್ಕಿಸಿದೆ
ಕನ್ನಡಕೆ ಸರಿದೊರೆಯೆ ಸಂಸ್ಕೃತ ?
ಕನ್ನಡಕೆ ಮಿಗಿಲೆನಿಪ ಭಾಷೆಯು
ಮುನ್ನವೇ ತಾನಿಲ್ಲ ಕನ್ನಡ ನುಡಿಯು ಕೇವಳವು ? ೧೪

ಸುಲಿದ ಬಾಳೆಯ ಹಣ್ಣು ಕನ್ನಡ
ಕಳೆದ ಸಿಬಿಕೆಯು ಕಬ್ಬು ಕನ್ನಡ
ಅಳಿವ ಉಷ್ಣದ ಹಾಲು ಕನ್ನಡ ಮಧುರವೇ ಮಧುರ
ಲಲಿತಪೂಗಳ ಕಂಪು ಕನ್ನಡ
ವಿಲಿಸಿತದ ಕತ್ತುರಿಯು ಕನ್ನಡ
ಮಲಯಜವು ಸಿರಿಗನ್ನಡವು ಮಿಗೆ ಸೊಂಪುವೆಂಪಿಂಪು ೧೪

ಕನ್ನಡದ ನುಡಿಯಮರವಾಗಿದೆ
ಉನ್ನತೋನ್ನತವಾಗಿ ನಲಿದಿದೆ
ರನ್ನದಂತಹ ವಚನಸಾಹಿತ್ಯವನು ತಾ ಹೊತ್ತು
ಚಿನ್ನರನ್ನದ ಕಬ್ಬುಪಾಡುಗ–
ಳನ್ನು ಹೊಂದಿ ಪ್ರಸಿದ್ಧವಾಗಿದೆ
ಪೊನ್ನತಿಕೆಯಂ ತಾಳ್ದು ನಿಂತಿದೆ ವಿಶ್ವತಲದಲ್ಲಿ ೧೫

ಇಂತು ಕರುನಾಡಿನೊಳು ಜನಿಸಿದ–
ಸಂತ ಶರಣರ ಮಧ್ಯದಲಿ ಗುರು
ಶಾಂತಯುತಿ ಬೂದೀಶ್ವರನು ಮಿಗೆ ಪೊಳೆಯುತಿರ್ದಪನು
ಸಂತಸವ ಮೇಣ್ ಶಾಂತಿಯಂ ಜಗ–
ಕಂತು ಪೆರ್ಚಿಸಲೆಂದು ಸಾಕ್ಷಾತ್
ಕಂತುಹರನೇ ಬೂದಿಯೋಗಿಯ ರೂಪದಿಂ ಬಂದ ೧೬

ಕನ್ನಡದ ಕೋಗಿಲೆಯು ಪಾಡಿತು
ಕನ್ನಡದ ನವಿಲಾಗ ಕುಣಿಯಿತು
ಕನ್ನಡದ ಗಿಳಿ ಸ್ವಸ್ತಿಕವ ಪಠಿಸಿತ್ತು ಸುಸ್ವರದಿ
ಕನ್ನಡದ ಕೋಳಿಯು ಪ್ರಭಾತದ
ಉನ್ನತಿಯ ಉದಯುವನು ಕೂಗಿತು
ಸನ್ನುತ ಶ್ರೀಬೂದಿಯೋಗಿಗೆ ಸ್ವಾಗತವ ಕೋರಿ ೧೭

ನೊಸಲಿನೋಳೆಸೆಯುತಿದೆ ಭಸ್ಮವು
ಮಿಸುಪ ರುದ್ರಾಕ್ಷಿಯ ಸರವು ತಾ-
ನೊಸೆದು ಕಂಠದಿ ಶೋಭಿಸುತ್ತಿದೆ ಇಷ್ಟಲಿಂಗವದು
ಅಸಮ ಮಹಿಮನ ಉರವನಪ್ಪಿದೆ
ಎಸೆವ ಕಾವಿಯ ವಸನ ಮೈಯೊಳು
ರಸನೆಯೋಳ್ ಬಸವೇಶ ನಾಮವು ಒಪ್ಪುತಿಹವೈಸೆ ೧೯

ಜಡೆಯು ಶಿರವನ್ನೆಲ್ಲ ವ್ಯಾಪಿಸೆ
ಬಿಡದೆ ಗಡ್ಡವು ಎದೆಯನುಡುಗಿರೆ
ಪಿಡಿದ ಬಲಗೈಯೊಳು ಕಮಂಡಲು ರೀವಿಯಿಂ ಬೆಳಗೆ
ಎಡದ ಕೈಯೊಳು ಯೋಗದಂಡವು
ಒಡನೆ ಬಗಲೊಳು ವಚನ ಗ್ರಂಥವು
ಅಡಿಯೊಳಾವುಗೆ ಶೋಭಿಸುತ್ತಿರೆ ಯೋಗಿ ಕಣ್ಗೆಸೆದ ೨೦

ಕಾಂತಿ ಕಂಗಳೊಳುಣ್ಮುತಿದೆ ಪರ
ಶಾಂತಿ ಚಿತ್ತವ ತೊಳಗುತಿದೆ ಭವ-
ಭ್ರಾಂತಿಬಿಟ್ಟೋಡುತಿದೆ ಮಾನಸಹಂಸನಾ ಮನದಿಂ
ಅಂತು ಚಿತ್ಕಳೆಯನ್ನು ಮೊಗದಲಿ
ನೋಂತು ಲಿಂಗಾಂಗೈಕ್ಯ ಭಾವವ-
ನಾಂತರಿಕ ಪ್ರಸ್ಫುರಣದಿಂ ಶಿವಯೋಗಿ ರಂಜಿಸಿದ ೨೧

ಶಿವನೆ ತಾ ಶಿವಯೋಗಿರೂಪದಿ
ಭವದ ಬವಣೆಯ ತವಿಸಲೋಸುಗ
ಅವತರಿಸಿ ಸಲೆ ಲೋಕಸಂಗ್ರಹಕಾರ್ಯವೆಸಗುವನು
ಇವನೆ ಗುರು ತಾನಿವನೆ ಲಿಂಗವು
ಇವನೆ ಜಂಗಮಮೂರ್ತಿ ಸತ್ಯವು
ಶಿವನ ಅಪ್ಪಣೆಯನ್ನು ಪಾಲಿಸ ಬಂದ ತಾನಿಳೆಗೆ ೨೨

ಭಕ್ತಿಯನ್ನೀಯುವನು ಜನತೆಗೆ
ಮುಕ್ತಿಮಾರ್ಗವ ತೋರುತಿರ್ಪನು
ಯುಕ್ತಿಯಂ ಕಲಿಸುವನು ಜಡಮತಿಗಳಿಗೆ ಕರುಣಾಳು
ಶಕ್ತಿಯಂ ದುರ್ಬಲರಿಗೀವ ವಿ–
ರಕ್ತಿಗುಣಸಂಪನ್ನನಾತನು
ವ್ಯಕ್ತಿ ತಾನಲ್ಲಯ್ಯ ಶಕ್ತಿಯ ಪುಂಜ ಶಿವಯೋಗಿ ೨೩

ಬಹು ದಿನದ ತಪಕಾಂತಿ ಮೊಗದಲಿ
ಸಹನಶೀಲತೆ ಶಾಂತಿ ಮನದಲಿ
ಸಹಕರಿಸಿ ಬೆಳಗುವವು ತದ್ವ್ಯಕ್ತಿತ್ವಮಂ ಸೊಗದಿ
ಇಹಪರಂಗಳ ಭೋಗಭಾಗ್ಯವ
ಬಹು ಮುದದಿ ಚಿಲ್ಲಿಂಗಕರ್ಪಿಸಿ
ಮಹಿತಮಹಿಮನು ರಾಜಿಪನು ಸುಜ್ಞಾನತೇಜದಲಿ ೨೪

ನೋಡೆ ಶ್ರೀ ಶಿವಯೋಗ ಸಿದ್ಧನು
ನಾಡೆ ಶ್ರೋತ್ರಿಯ ಬ್ರಹ್ಮನಿಷ್ಠನು
ಬೇಡನಾರನು ಕಾಸನೊಂದನು ಸ್ವಂತ ಹಿತಕಾಗಿ
ನೋಡುವನು ತನ್ನಿಷ್ಟಲಿಂಗವ
ಮಾಡುವನು ತಲ್ಲಿಂಗಪೂಜೆಯ
ಕೂಡುವನು ಲಿಂಗದಲಿ ಮನವೊಂದಾಗಿ ಧ್ಯಾನಿಸುತೆ ೨೫

ವರ ಭಕುತಿ ಸಂಪನ್ನನೈ ದಿಟ
ಪರಮ ಸುಜ್ಞಾನಿಯು ವಿಚಾರಿಸೆ
ಪರತರದ ವೈರಾಗ್ಯ ಮೂರ್ತಿಯು ಯೋಗಸಿದ್ಧನಲಾ
ಶರಣ ಬಸವನೊಳಿಟ್ಟು ಭಕ್ತಿಯ
ಗುರುವು ಪ್ರಭುವೆಂದರಿದು ಮನದೊಳು
ಚರಿಸಿಹನು ಚಿರಕಾಲ ತಪಮಂ ನಿಷ್ಠೆಯಿಂ ಚರನು ೨೬

ಬಸವಮಂತ್ರವು ಸತತ ಯೋಗಿಯ
ರಸನೆಯೊಳೋಲಾಡುತಿರ್ಪುದು
ಬಸವ ಬಸವಾ ಬಸವ ಶಿವನೇ ಎಂದು ಗದ್ಗದಿಸಿ
ಉಸುರುತಿರಲಿದೆದುಂಬಿ ಕಂಬನಿ–
ಯೊಸರುತಿರೆ ಮೈನವಿರು ಮೂಡಿರೆ
ಅಸಮ ಮಹಿಮನ ಬಸವಭಕ್ತಿಯ ಸೊಬಗನೇನೆಂಬೆ ೨೭

ಪರಮ ಗುರುಪ್ರಭುದೇವರಂ ಸಲೆ
ಸ್ಮರಿಸಿ ಮನದೊಳ್ಪೋಪೆಡೆಗಳೊಳ್
ಗುರುವಿನಾ ಗದ್ದುಗೆಯ ವಿರಚಿಸಿ ತಪವನೆಸಗುವನು
ಪುರದ ಜನಗಳು ಮಠವ ಕಟ್ಟಿಸಿ
ಕರೆದು ಬೂದೀಮಠದ ಪೆಸರಿಂ
ಸರಸ ಭಕ್ತಿಯ ವ್ಯಕ್ತಪಡಿಸುವರೆಮ್ಮ ಯತಿವರಗೆ ೨೮

ಇಂತು ನೂರಾರ್ ಬೂದಿಮಠಗಳು
ಸಂತತಂ ನಲಿದಾಡುತಿರ್ಪವು
ಕಂತುಹರನಿಚ್ಛೆಯೊಳು ನಾಡಿನ ತುಂಬ ಕುಡಿವರಿದು
ಸಂತಸದಿ ಸದ್ಭಕ್ತಸಂಕುಳ
ಚಿಂತೆಯಿಲ್ಲದೆ ಕಾಲ ಕಳೆಯುವು–
ದಂತು ಬೂದೀಯೋಗಿ ಸದ್ಬೋಧಾಮೃತದಿ ತಣಿದು ೨೯

ಹೋದಹೋದಲ್ಲೆಲ್ಲ ನಂದಿಯ–
ನಾದಿಮೂರ್ತಿಯ ಸ್ಥಾಪಿಸುವರತಿ
ಮೋದದಿಂ ಬೂದೀಬಸವನೆಂದೆಂಬ ಪೆಸರಿಟ್ಟು
ಬೂದಿಬಸವಗಳೆನಿತೊ ನಾಡಿನ
ಆದಿಮಧ್ಯಾಂತದೊಳು ರಂಜಿಸಿ
ಮೇದಿನಿಗೆ ಮಳೆ ಬೆಳೆಯ ಸಂಪದವಿತ್ತು ಸಲಹುವವು ೩೦



ಶ್ರೀ ಬೂದೀಸ್ವಾಮಿ ಸಂಸ್ಥಾನ ಮಠದ ನೂತನ ಮಹಾದ್ವಾರ

ಮುನ್ನ ಬೂದೀಯೋಗಿವರ್ಯನು
ಹನ್ನೆರಡನೆಯ ಶತಕದೊಳ್ಳಲೆ
ಸನ್ನಿಯಿಂ ಪ್ರಭುರಾಯನಿಂ ತಾ ಪಡೆದನುಗ್ರಹವ
ಉನ್ನತದ ಶಿವಯೋಗಸಂಪದ
ವನ್ನು ಪೊಂದಿದನವರ ಕೃಪೆಯಿಂ
ತನ್ನ ಹಠಯೋಗವನು ಶಿವಯೋಗದೊಳು ಸಮಾವೆರಸಿ ೩೧

ಬೆಳೆಯಿತಲ್ಲಿಂ ಮುಂದೆ ಯೋಗದ
ಹೊಳಹು ಹಠಶಿವಯೋಗ ಸಮರಸ-
ವುಳಿಯಿತ್ತೈ ಸ್ಥಿರವಾಗಿ ಯೋಗಾನಂದ ಲೀಲೆಯೊಳು
ಬೆಳೆದುದವರಾಯುಷ್ಯಸಂಪದ
ವ್ವೊಳಹೊರಗೆ ಪರ ಬ್ರಹ್ಮಚರ್ಯಾದಿ
ತೊಳಪ ನೀತಿ ವಿಶಾಲಮಾರ್ಗದಿ ಕೀರ್ತಿ ಪೆರ್ಚಿಹುದು ೩೨

ಒಮ್ಮೆ ಚನ್ನಬಸವೇಶ್ವರನು ತಾ
ನಮ್ಮಯೀ ಬೂದೀಶಯೋಗಿಗೆ
ಒಮ್ಮನದಿ ಭಸ್ಮದ ಹಸಬಿಯನ್ನೀಯೆ ಕೃಪೆದೋರಿ
ನೆಮ್ಮಿ ಬೂದಿಯ ಪಡೆದ ಯೋಗಿಯ
ಸೊಮ್ಮು ಸಿದ್ಧಿಯ ರೂಪತಾಳಿರೆ
ಸುಮ್ಮನದಿ ಜನರಾತನಾಮಹಿಮೆಯನು ಬೆಳಗಿದರು ೩೩

ಶರಣ ಕರುಣಿಸಿಕೊಟ್ಟ ಬೂದಿಯ
ಪರ ಮಹಿಮೆಯಿಂದಾಮಹಾತ್ಮನು
ಧರೆಯೊಳಾಂತನು ಬೂದಿಯೋಗಿಯೆಂಬ ನಾಮವನು
ಚರಿಸಿ ಕನ್ನಡ ತೆಲಗು ತಮಿಳರು
ನೆರೆಮರಾಟರು ಗುರ್ಜರರು ನಲೆ-
ಸಿರುವ ನಾಡೊಳು ಪತಿತರಂ ಪಾವನವ ಮಾಡಿದರು ೩೪

ಬೂದಿ ಶ್ರೀ ಶಿವಯೋಗಿವರ್ಯನ
ಬೂದಿಶಕ್ತಿಯನೆಂತು ಪೇಳ್ವುದು
ಹೋದ ಹೋದಲ್ಲೆಲ್ಲ ರೋಗಪಿಶಾಚಬಾಧೆಗಳ
ಬೂದಿ ಮಂತ್ರಿಸಿ ಕೊಟ್ಟು ಕಳೆವರು
ಬೂದಿಯಿಂ ಮಕ್ಕಳನು ಕೊಡುವರು
ಬೂದಿಯಿಂ ನೀಗುವರು ಭಕ್ತರ ದುರಿತಕಂಟಕವ ೩೫

ಬೂದಿಯೌಷಧಿ ಸರ್ವರೋಗಕೆ
ಬೂದಿ ಸುರತರು ಸರ್ವಕಾಮಕೆ
ಬೂದಿಯಂ ಬಡಕೊಂಡು ಪರಶಿವ ಪೂಜ್ಯನೆನಿಸಿದನು
ಬೂದಿಯಂ ಮೈಗೆಲ್ಲ ಪೂಸುತೆ
ಸಾಧುಸಂತರು ಯೋಗಿಶರಣರು
ವೇದ ಕಾಲದ ಋಷಿಮುನಿಗಳತಿ ಸೊಗದಿ ಬಾಳಿದರು ೩೬

ಚಾಡಿ ಸಿದ್ಧಾಟಿಕೆಗಳೆಲ್ಲವು
ಮೋಡಿ ಜನವಶ್ಯಾದಿ ಮಾಟಗ–
ಳಾಡುತಿರ್ಪವು ಬೂದಿ ಮಂತ್ರದ ಬಲದಿ ನೋಡಿಹದಿ
ಬೂದಿ ಬೂದಿಯಿದೆಂದು ಮನದೊಳ–
ನಾದರದಿ ಬೀಳ್ಗಳೆವರೇತಕೆ ?
ನಾಡೊಳಿಹ ಗಾವಿಲರು ಪಾಖಂಡಿಗಳು ನಾಸ್ತಿಕರು ೩೭

ಪನ್ನೆರಡನೆಯ ಶತಕದಿಂ ತಾ
ವಿನ್ನು ಹತ್ತೊಂಭತ್ತರೀಚೆಗೆ
ಉನ್ನತಿಯೊಳೇಳ್ನೂರುಯೆಪ್ಪತ್ತೈದು ವರ್ಷಗಳ
ಸನ್ನುತರು ಬಾಳಿಹರು ನೋಡಾ !
ಚೆನ್ನ ಹರಿಹರ ರಾಘವಾಂಕರ
ಇನ್ನುಳಿದ ಶಿವಶರಣಕವಿಗಳ ಕಂಡು ತಣಿದಿಹರು ೩೮

ಮುಂದೆ ಪದಿನೈದನೆಯ ಶತಕವಿ
ಸಂದ ಲಕ್ಕಣ ಜಕ್ಕಣರ ನೂ-
ರೊಂದು ವಿರತರ ದರ್ಶನದೊಳನುಭಾವಗೋಷ್ಠಿಯೊಳು
ಇಂದುಧರನಿತ್ತಾಯುಮಂ ಸಲೆ
ಚೆಂದದಿಂ ಕಳೆದಿಹರು ನೋಡಿರಿ
ಸಂದ ಸಮಯದೊಳೆಸಗಿ ಸದನುಷ್ಠಾನವಿಧಿಯನ್ನು ೩೯

ಭೀಮಕವಿ ಮುಪ್ಪಿನ ಷಡಕ್ಷರಿ
ಸೋಮನಾರ್ಯರ ಗುಬ್ಬಿಮಲ್ಲಣ
ಚಾಮರಸ ಕಲ್ಮಠದ ಪ್ರಭುವಾ ತೋಂಟದಾಯತಿಯು
ಮಾಮಹಿಮ ಗುರುಬಸವ ನಿಜಗುಣಿ
ಸ್ವಾಮಿ ಮಗ್ಗಿಯಮಾಯಿ ಮೊದಲಾ-
ದಾ ಮಹಾತ್ಮರ ಬೂದಿಯೋಗಿಯು ಕಂಡು ನಲಿದಿಹನು ೪೦

ಗರಗದಾ ಮಡಿವಾಳಯೋಗಿಯ
ಮರುಳನಂತಿಹ ನಾಗಲಿಂಗನ
ನೆರೆಯ ಸಾರ್ದರನೇಕ ಹರಗುರುಚರರ ದರ್ಶನದಿ
ಪರಮ ಸಂತೋಷವನು ತಾಳ್ದರು
ಇರದೆ ಹತ್ತೊಂಭತ್ತನೆಯ ಶಕ-
ವರುಷದೊಳ್ ಹೊಸಹಳ್ಳಿ ಗ್ರಾಮಕೆ ಬಂದು ನೆಲಸಿದರು ೪೧

ಗುರುವರೇಣ್ಯರು ರೇಣುಕರು ಸಲೆ
ಮೆರೆದಿಹರು ಪದಿನಾಲ್ಕು ಶತವ-
ತ್ಸರವ ಯೋಗಾಭ್ಯಾಸಬಲದಿಂ ಗಿರಿಗುಹಾಂತರದಿ
ಪರಮ ಯೋಗಿಗಳನಿಬರುಂ ಸಾ-
ವಿರ ವರುಷ ಬಾಳಿದರು ದಿಟವಿದು
ಪಿರಿದಹುದು ಶ್ರೀಬೂದಿಯೋಗಿಯ ಯೋಗದಾಬಲವು ೪೨

ಪರಮಯೋಗಿಯು ತಳೆದಿಹನು ನಿಜ
ಕರಪರುಷ ವಾಕ್ಪರುಷ ಮಾನಸ–
ಪರುಷ ಚಾಕ್ಷುಷಭಾವಪರುಷಗಳೆಂತು ಪಂಚಕವ
ಪರಮಭಕ್ತರ ಹಿತಕೆಯವುಗಳ
ಕರುಣದಿಂ ವಿನಿಯೋಗಿಸುತ್ತಿಹ–
ನರಿದ ಮಾತಿದು ಶರಣರಿಂ ಜಗದಾಟ ನಡೆದಿಹುದು ೪೩

ಶಿವನು ಭುವಿಗವತರಿಸಿ ಲೋಕದ
ಭವವ ನೀಗುತೆ ಶಾಂತಿಯೊಯುತೆ
ಭುವನಜನವನು ಯೋಗಿರೂಪದಿ ಪೊರೆಯುತಿಹನೈಸೆ
ಶಿವನೆ ಬೂದೀಶ್ವರನು ಜಂಗಮ–
ನಿವನೆ ಜನಹಿತಕರ್ತನೆಂಬರು
ಭುವಿಯೊಳಿಹ ಸದ್ಭಕ್ತರಾತನ ನಿಲವ ಕಂಡರಿದು ೪೪

## ನಿತ್ಯಕ್ರಮ

ಬೆಳಗಿನೊಳು ಬೇಗೆದ್ದು ಮುಖಮಂ
ತೊಳೆದು ಭಸ್ಮವ ಹೂಸಿ ನೊಸಲಿಗೆ
ಬಳಿಕ ಪ್ರಾತರ್ವಿಧಿಯ ತೀರಿಸಿ ದಂತಮಂ ಬೆಳಗಿ
ತೊಳತೊಳಪ ಮುಖಕಾಂತಿಯಿಂ ತಾವ್
ತಿಳಿಮನದಿ ಶಿವನಾಮಮಂತ್ರವ–
ನೊಳಗೊಳಗೆ ಸಲೆ ಜಪಿಸುತುತಿರ್ದರು ನಿತ್ಯ ಯತಿವರರು ೪೫

ಆಸನಂಗಳ ಹಾಕಿ ಯೋಗದ
ಶ್ವಾಸಮಂ ಬಿಗಿಹಿಡಿದು ಪ್ರಾಣವ
ಭಾಸುರದ ಷಟ್ಚಕ್ರಗಳೊಳುರೆ ತಿರುಗಿಸುತ್ತಿಹರು
ಆ ಸದಾಶಿವ ಚಿತ್ಪ್ರಕಾಶವ
ಸೋಸಿ ನೋಡುತೆ ಹೃದಯಪಟಲದಿ
ಧ್ಯಾಸದಿಂ ಸುಸಮಾಧಿಯಂ ಪೊಂದುವರು ಯೋಗಿಗಳು ೪೬

ಮಿಂದು ಮಡಿಯನ್ನುಟ್ಟು ನಂತರ
ಚೆಂದದಿಂ ಹರನಾಮ ಪಠಿಸುತೆ
ಬಂದು ಪದ್ಮಾಸನದಿ ಮುಂಡಿತರಾಗಿ ಲಿಂಗವನು
ಅಂದವಾದಂಗೈಯೊಳಿಟ್ಟುರೆ
ಒಂದೆಮನದಿಂದೀಕ್ಷಿಸುತ್ತದ–
ನೊಂದುಗೂಡಲು ಲಿಂಗದೊಳ್ಲಲೆ ಪೂಜೆಯೆಸಗುವರು ೪೭

ಕಂಬನಿಗಳಿಳಿಯುತಿರೆ ದೇಹದ
ತುಂಬ ನವಿರುಗಳೇಳುತಿರೆಯೆದೆ–
ಹಂಬಲವು ಹೂವಾಗಿ ಭಕ್ತಿಯ ಕಂಪ ಬೀರುತಿರೆ
ತುಂಬಿಯುಬ್ಬುದ ತನಿರಸವ ನೆರೆ
ನಂಬಿ ಮಿಗೆ ಮೈ ಮರೆಯುವಂದದಿ
ಸಾಂಬರೂಪದ ಲಿಂಗದೊಳೊಡಗೂಡಿ ನಲಿಯುವರು ೪೮

ಲಿಂಗರೂಪದ ದೇವನೆನ್ನಯ
ಕಂಗಳೈಸಿರಿ ಹೃದಯ ಕಮಲದ
ಭೃಂಗ ಮಸ್ತಕನಿಲಯಜ್ಯೋತಿರ್ಲಿಂಗ ಭವಭಂಗ
ಲಿಂಗ ನಿನ್ನಂ ನಚ್ಚಿ ಮೆಚ್ಚಿದೆ
ಮಂಗಲದ ತವ ರೂಪದೋರಾ
ಸಿಂಗರದಿ ಮೈದಡವಿ ಮುದ್ದಾಡೆಂದು ಹಂಬಲಿಪರ್ ೪೯

ಮಾಟಿ ಭಕ್ತಿಯನಿಂತು ಗೈಯುತೆ
ನೋಟ ಭಕ್ತಿಯನಂತು ಮರೆಯುತ
ಕೂಟ ಭಕ್ತಿಯೊಳಾತುರದಿ ತಲ್ಲೀನ ತಾನಾಗಿ
ಬೇಟದಿಂ ಸಲೆ ಲಿಂಗಪೂಜೆಯ
ಆಟವಾಡುತೆ ತನ್ಮಯನು ಸಲೆ
ದಾಟಿದನು ಬಹುವರ್ಷಗಳ ಶಿವಯೋಗಸಾಧನೆಯೊಳ್ ೫೦

ನಿತ್ಯ ಪಾದೋದಕ ಪ್ರಸಾದವು
ನಿತ್ಯಲಿಂಗಾನುಭವಗೋಷ್ಠಿಯು
ನಿತ್ಯ ಭಕ್ತರನುದ್ಧರಿಪ ಸದ್ಬೋಧೆ ನಡೆಯುವವು
ಸತ್ಯ ಸಾಂಬನ ಸ್ಮರಣೆಯುಂ ಜನ-
ರತ್ಯಧಿಕ ಭಕ್ತಿಯಲಿ ಸಾಗಿಸಿ
ಸ್ತುತ್ಯಮಾದಾಚಾರಶೀಲವ ಕಾಯ್ದುಕೊಂಡಿಹರು ೫೧

ನಿಚ್ಚಲುಂ ಶಿವರಾತ್ರಿಯುಂ ನಾ-
ನಚ್ಚಳಿಯದಲೆ ಮಾಳ್ಪನೆನ್ನುವ
ಉಚ್ಚಗುಣಮಣಿ ಬಸವ ತಂದೆಯ ನುಡಿಯನನುಕರಿಸಿ
ಎಚ್ಚರದಿ ಸುವಿವೇಕ ಮುಂ ಮೇ-
ಣಚ್ಚರಿಯ ವೈರಾಗ್ಯಮುಂ ಜನ
ಮೆಚ್ಚುವಂದದಿ ನಡೆದು ಶಿವಕೃಪೆವಡೆದು ಶೋಭಿಪರು ೫೨

ಶಿವನ ಧ್ಯಾನವಗೈಯುತಿರ್ಪರು
ಭವ ಸಮುದ್ರವ ದಾಂಟುತಿರ್ಪರು
ತವಕದಿಂ ಪ್ರತಿನಿತ್ಯ ತನ್ನಯ ರೂಪಲಿಂಗವನು
ಅವಿರತಂ ಮನದಲ್ಲಿರಿಸಿ ಮಿಗೆ
ಭುವಿಗೆ ಸನ್ಮಾರ್ಗವನು ತೋರ್ಪರು
ಭವಹರನ ರೂಪಿಗಳು ನಮ್ಮಯ ಬೂದಿಯೋಗಿಗಳು ೫೩

ಶಿವನೆ ಸದ್ಯೋಜಾತನೈ ನೀಂ
ಭವನೆ ನೀಂ ಶ್ರೀವಾಮದೇವನು
ತವೆ ಅಘೋರನು ತತ್ಪುರುಷನುಂ ಮೇಣ್ ವಿಚಾರಿಸಲು
ಶಿವನೆ ನೀನೀಶಾನಮೂರ್ತಿಯು
ಭವನೆ ನಿನ್ನಾ ಪಂಚಮುಖಗಳು
ಭುವನದೊಳ್ಮೆರೆದಿಹವು ಪಂಚ ಬ್ರಹ್ಮರೆಂದೆನಿಸಿ ೫೪

ನೋಡಲಾಗದೆ ದೇವನೆನ್ನಂ
ಮಾಡಲಾಗದೆ ಕೃಪೆಯನೆನ್ನೊಳು
ನೀಡಲಾಗದೆ ಶಕ್ತಿ ಸೈರಣೆ ಧೈರ್ಯ ಸ್ಥೈರ್ಯಗಳ
ಬೇಡೆನಗೆ ತ್ರಿವಿಧಂಗಳಾಸೆಯು
ದೂಡಿ ಮಾಯಾಮೋಹವೆನ್ನಯ
ಕೂಡಿಕೊಂಡಿರು ನನ್ನೊಳಗೆ ನಿರುತಂ ವಿರೂಪಾಕ್ಷ ೫೫

ಜಗಕೆ ಕಾರಣ ಕರ್ತ ನೀನೇ
ಜಗವ ರಕ್ಷಿಪ ಮೂರ್ತಿ ನೀನೇ
ಜಗದ ಭಾರವ ತವಿಸಿ ಶಾಂತಿಯ ಬೀರುಪವ ನೀನೇ
ಜಗದೊಡೆಯ ನೀನೆಂಬುದಂ ನಾಂ
ಬಗೆದು ಬಣ್ಣಿಪೆ ತವ ಮಹಾತ್ಮೆಯ
ನಿಗಮಗೋಚರ ಸರ್ವಗುಣಸಂಪದವ ನೀಡೆನಗೆ ೫೬

ನೀನು ಮಾಡಿದೊಡಾಯ್ತು ಜಗವಿದು
ನೀನು ಜಗವಲ್ಲೆಂಬುದಿದು ನಿಜ
ತಾನೆ ಘಟಮಂ ನಿರ್ಮಿಸಿದ ಕುಂಬಾರ ಘಟವಲ್ಲ
ಏನು ಚಿತ್ರವೊ ದೇವ ನಾನಾ
ಯೋನಿಯೊಳು ಜನಿಸಿರ್ಪ ಜಂತುಗ–
ಳೇನನರಿಯದಲಿರ್ದಪವು ನೀನಿರಲು ಎಲ್ಲರೊಳು ೫೭

ಬೀಜವೊಂದೇ ಮೂಲ ತರುವಿಗೆ
ಬೀಜದಿಂ ತರು ಬೇರೆಯಾಗಿದೆ
ಬೀಜವೇ ತರುವಾಗಿ ಹುಟ್ಟಿದೆ ಶಾಖಪರ್ಣಗಳಿಂ
ಬೀಜ ಬೇರೆಯೆ ? ತರುವುಬೇರೆಯೆ ?
ಬೀಜ ವೃಕ್ಷದ ತೊಡಕನರಿಯದೆ
ಸಾಜದಿಂ ಶಿವಜೀವರೊಂದೆಂದರಿವರ್ಕೈ ಕೆಲರು ೫೮

ಹಾಲು ಮೊಸರಾಗಿಹುದು ನಿಜವಿದು
ಹಾಲು ಕೆಟ್ಟೇ ಮೊಸರು ಆಗಿದೆ
ಹಾಲು ಮೊಸರಿಂ ಭಿನ್ನವಪ್ಪುದು ಹಾಲು ಮೊಸರಲ್ಲ
ಲೀಲೆಯಿದು ಪರಶಿವನೆ ನಿನ್ನದು
ಲೀಲೆಯಿಂ ನೀ ವಿಕೃತಿಹೊಂದುತೆ
ಲೀಲೆಯಿಂ ಜಗವಾದೆ ಜಗದಿಂ ಭಿನ್ನ ನೀನಾದೆ ೫೯

ಯಾರು ಬಲ್ಲರು ನಿನ್ನ ಲೀಲೆಯ
ತೋರುವುದು ಪುಸಿಯೆಂಬರನಿಬರು
ತೋರುವುದು ದಿಟವೆಂದು ಕೆಲವರು ಸಾಧಿಸುತ್ತಿಹರು
ತೋರುವುದು ಸಟೆಯಾದೊಡೂ ಸಹ
ತೋರುತಿದೆ ದಿಟವಾಗಿ ಜಗವಿದು
ಪಾರಮಾರ್ಥದ ತೊಡಕ ಬಿಡಿಸಲು ಬಾರದೈ ಶಿವನೆ ೬೦

ಅರಿವರಾರ್ ನೀನಿರ್ಪೆಯೆಂಬುದ–
ನರಿತರಾರ್ ನೀನಿಲ್ಲವೆಂಬುದ
ಹರನೆ ನಿನ್ನಸ್ತಿತ್ವಮಂ ನೆರೆ ನಂಬಿ ನಡೆದಿಹರು
ಹರನು ಇಲ್ಲೆಂಬವರ ಮಾತನು
ಜರೆಯುವರು ತಾವರಿಯುವೇನುಂ
ಹರನೆ ನೀನಿರ್ದಪೆಯೊ ಇಲ್ಲಪ್ಪೊ ನರರಿಗೇಂ ಗುರುತು ? ೬೧

ನಂಬಿ ನಡೆವುದೆ ಭಕ್ತಿಮಾರ್ಗವು
ನಂಬಿ ನಡೆವರಿಗುಂಟು ಶಾಂತಿಯು
ನಂಬಿ ನಡೆವರಿಗುಂಟು ಬೇಡುವ ಭೋಗಭಾಗ್ಯಗಳು
ನಂಬಿದವರಿಗೆ ಸರ್ವಸುಖಗಳು
ತುಂಬಿ ಬರುತಿಹವೆಂದು ತಿಳಿವುದು
ನಂಬಿಗೆಯು ಸಲೆ ಕಾರಣವು ಶಿವಸಾಂಬನೊಲಿವುದಕೆ ೬೨

ಮನದಿ ವಿಷಯಂಗಳನು ನೆನೆಯುತೆ
ಚಿನುಮಯನ ಬಾಯಲ್ಲಿ ಸ್ಮರಿಸುತೆ
ಕೊನೆತನಕ ಸಾಗಿದೊಡೆ ಶಿವ ತಾನೆಂತು ಫಲವೀವ ?
ಮನವ ವಿಷಯಗಳಿಂದ ತಿರುಗಿಸಿ
ಘನಮಹಿಮ ಶಿವನಲ್ಲಿ ಬೆರೆಸಲು
ಮನಕೆ ಶಾಂತಿಯು ಮನೆಗೆ ಶಾಂತಿಯು ಶಾಂತಿ ಸಾಮ್ರಾಜ್ಯ ೬೩

‘ಬಸವ’ ಎಂಬೀ ಮೂರು ವರ್ಣದ
ಪೆಸರು ಹರಿಹರಬ್ರಹ್ಮರೂಪವು
ಒಸೆದು ಜಪಿಸುವ ಜನಕೆ ಬಸವಾಕ್ಷರದ ಮಂತ್ರವನು
ಬಸವಭಾನುವು ಹಿಂಗಿ ತಮಪನು
ಅಸಮನೇತ್ರನ ರೂಪದೋರ್ವನು
ವಸುಮತಿಯೊಳಾರ್ ಸರಿಯು ಬಸವಗೆ ಬಸವ ಶರಣಾರ್ಥಿ ೬೪

ಬಸವ ಭಕ್ತರ ಕಾಮಧೇನುವೆ
ಬಸವ ದೀನರ ಕಲ್ಪವೃಕ್ಷವೆ
ಬಸವ ದಲಿತರ ಪರುಷಮಣಿಯೇ ಬಸವ ಕರುಣಾಳೊ
ಬಸವ ಬಾರೈ ನೀನು ವಸುಧೆಗೆ
ಬಸವಳಿದು ಬಿಸುಸುಯ್ವ ಜನತೆಗೆ
ಪೊಸತರದ ಕಳೆಯಿತ್ತು ರಕ್ಷಿಸು ನಂದಿಯವತಾರ ೬೫

ಇಂತು ಶಿವಬಸವೇಶಮಹಿಮೆಯ
ಸಂತಸದಿ ಕೊಂಡಾಡಿ ನಮ್ಮಿ
ಶಾಂತ ಮೂರುತಿ ಬೂದಿಯೋಗಿಯು ಶಕ್ತಿಯೊಡಗೂಡಿ
ಕಂತುಹರಸೇವೆಯೊಳು ನಿತ್ಯವು
ನಿಂತು ತಾಂ ನಡಕಟ್ಟಿ ಶಿವಕೃಪೆ
ಯಾಂತು ನಲಿವನು ಭಕ್ತಜನ ಮುದದಿಂದ ನಲವೇರೆ ೬೬

ನಿತ್ಯಪೂಜೆಯು ನಿತ್ಯಸ್ಮರಣೆಯು
ನಿತ್ಯತನ್ಮಯನಾಗಿ ನಲಿವುದು
ಸ್ತುತ್ಯಕಾರ್ಯವನರಿದು ಗೈವುದು ಹಿತವ ಸರ್ವರಿಗೆ
ಸತ್ಯನಿಷ್ಠೆಯೊಳಾಚರಿಸಿ ಸಲೆ
ಉತ್ತಮೋತ್ತಮ ತತ್ವವಿದರಾ-
ಗೆತ್ತಲುಂ ಮರೆಯುವರು ಶ್ರೀಬೂದೀಶಯೋಗಿಗಳು ೬೭

**ಅಂತು ಒಂದನೆಯ ಸಂಧಿಗೆ ೧೨೬ ಪದ್ಯಕ್ಕೆ ಮಂಗಲಮಕ್ಕುಂ**

**— ಭದ್ರಂ ಶುಭಂ ಮಂಗಲಂ —**

ಶ್ರೀಗುರುಬಸವಲಿಂಗಾಯನಮಃ

# ಎರಡನೆಯ ಸಂಧಿ

## ಅನುಭಾವಮಂಟಪ

ಸೂಚನೆ:- ಅನುಭವವೆ ಘನವಸ್ತು ಜಗದಲಿ
ಮನನದಿಂ ದೊರಕೊಳ್ವುದದು ದಿಟ
ಘನಮಹಿಮ ಶಿವಶರಣರದ ತಾವೊಂದಿ ಸುಖಿಸಿದರು

ಜಗದೊಳೈಹಿಕ ಪಾರಮಾರ್ಥಿಕ
ಬಗೆಯು ಸೊಗಗೊಳಲೆಂದು ಬಸವನು
ಜಗಿಪ ಶ್ರೀ ಕಲ್ಯಾಣದೋಳನುಭಾವಮಂಟಪವ
ಸೊಗಸಿನಿಂ ರಚಿಸಿರ್ದನದರೊಳು
ಮಿಗಿಲು ಮಿಗಿಲಾದೆಲ್ಲ ಶರಣರು
ಬಗೆಬಗೆಯ ಶರಣೆಯರು ತತ್ತ್ವಂಗಳನು ಚರ್ಚಿಪರು ೧

ಶರಣರೆಲ್ಲನುಭಾವಿಗಳು ದಿಟ
ಚರವರೇಣ್ಯನು ಅಲ್ಲಮಪ್ರಭು
ಪರತರದ ಅನುಭಾವಮಂಟಪಕಾತನಧ್ಯಕ್ಷ
ನೆರೆಯುವರು ಮಂಟಪದಿ ಸರ್ವರು
ಸರುವ ವಿಷಯಂಗಳನು ಚರ್ಚಿಸಿ
ನೆರೆ ಮಥಿಸಿ ತೆಗೆದಂಥ ತತ್ತ್ವವ ಪ್ರಚುರಪಡಿಸುವರು ೨

ಸುರತರುವು ಮರವಲ್ಲವೈ ಕೇಳ್
ಸುರಭಿಯೊಂದಾವಲ್ಲ ನಿಜವಿದು
ಸುರಮಣಿಯು ಪಾಷಾಣವಲ್ಲವು ಶರಣ ನರನಲ್ಲ
ಧರೆಯ ಸ್ವಾರ್ಥ ದುರಾಶೆ ಪಾಪವ
ಪರಿಹರಿಸಬಂದಿಹ ಮಹಾತ್ಮರು
ಹರನಿಗಿಂ ಮಿಗಿಲೆನಿಸಿಕೊಂಡರು ಶುದ್ಧ ನಡೆನುಡಿಯಿಂ ೩

ಶರಣ ಚರಿಸುವ ಭೂಮಿ ಕ್ಷೇತ್ರವು
ಶರಣ ಮಿಂದಾ ಜಲವು ತೀರ್ಥವು
ಶರಣ ನುಡಿದಿಹ ಮಾತೆ ಜ್ಯೋತಿರ್ಲಿಂಗವಾಗಿಹುದು
ಶರಣ ಮುಟ್ಟಿದ ಕಲ್ಲು ಪರುಷವು
ಶರಣ ಪಿಡಿದಿಹ ಮಣ್ಣು ಚಿನ್ನವು
ಶರಣನುದ್ಧರಿಸಿರ್ದ ಹೊಲೆಯನು ಕುಲಜನೆನಿಸುವನು ೪

ಪರಶಿವನ ರೂಪಿಗಳು ಶರಣರು
ಧರೆಯೊಳಗೆ ಬಹು ಪುಣ್ಯಚರಿತರು
ಪರಮ ಸುಖಶಾಂತಿಯನು ಬೀರಿದ ಭಾಗ್ಯಶಾಲಿಗಳು
ಕುರುಹ ತೋರಿಸಿ ಅರುಹ ಜಾಗ್ರತ–
ವಿರಿಸಿದರು ಸದ್ಭಕ್ತಗಣಗಳ
ಕರುಣಶಾಲಿಗಳವರು ಸರ್ವರ ಲೇಸ ಬಯಸುವರು ೫

ಶರಣಗಣ ನಕ್ಷತ್ರಪುಂಜವು
ಶರಣಬಸವೇಶ್ವರ ಕಲಾನಿಧಿ
ಪಿರಿಯ ಗಗನವೆ ಧರಣಿ ಕಲ್ಯಾಣವದು ಕೈಲಾಸ
ಶರಣರನುಭವಮಂಟಪವು ಸಲೆ
ಹರನ ಪಿರಿಯೊಡ್ಡೋಲಗವು ತಾ
ಪರಮ ಭಕ್ತರು ಹರನ ಪ್ರಮಥ ಗಣಂಗಳಾಗಿಹರು ೬

ಶರಣರಿಹದೊಳು ಶಿವನ ರೂಪವ
ಕರಗಿಸುತೆ ಕಳೆದುಂಬಿ ಚುಳುಕಾ–
ಗಿರಿಸಿದರು ಕರದಿಷ್ಟಲಿಂಗವ ಮಾಡಿ ಜನಹಿತಕೆ
ಅರಿಯಣೋರಣಿಯಾನ್ ತದಿಷ್ಟವು
ಒರೆಯೆ ತಾ ಮಹಿತೋ ಮಹೀಯಾನ್
ಶರಣರಂ ಬಿಟ್ಟರಿದರಾರೀ ಲಿಂಗಚಿತ್ಕಳೆಯ ೭

ಕಾಲವೆಷ್ಟೋ ಗತಿಸಿ ಹೋಗಿದೆ
ಕಾಲವೀಗಳು ನಡೆದಿಹುದು ಫಲೆ
ಕಾಲ ತುದಿಮೊದಲಿಲ್ಲದಲೆ ತಾ ಮುಂದೆ ಸಾಗುವದು
ಕಾಲದಲಿ ಕರ್ಮಗಳು ನಡೆದಿವೆ
ಕಾಲದಲಿ ಲಯವಾಗಿ ಹೋಗಿವೆ
ಕಾಲಮಹಿಮೆಯ ಬಲ್ಲವನು ಶಿವಶರಣನೋರ್ವನಲಾ ೮

ಘನ್ನ ಶಾಸನದಲ್ಲಿ ಪ್ರಭುವರ
ಸನ್ನಹಿತನಾಗಿರಲು ಎಡಬಲ–
ದಿನ್ನುಳಿದ ಶಿವಶರಣಶರಣೆಯರೊಪ್ಪುತಿರ್ದಪರು
ಚೆನ್ನ ಭಕ್ತಸ್ಥಲವು ಮೊದಲಾ–
ಗಿನ್ನಿತರ ಷಟ್‌ಸ್ಥಲಗಳೆತ್ತರ–
ವನ್ನು ಮೀರಿದ ಶೂನ್ಯಪೀಠದೊಳೆಸೆದನಾ ಪ್ರಭುವು ೯

ಬಸವ ಮಡಿವಳ ಚೆನ್ನಬಸವನು
ಅಸಮ ಶ್ರೀ ಸಿದ್ಧೇಶ ಸೊಡ್ಡಳ
ರಸಿಕಗುಣಿಯುಪ್ಪಣ್ಣ ಮೋಳಿಗೆ ಮಾರಿ ತಂದೆಗಳು
ಎಸೆವ ಕಿನ್ನರಿ ಬೊಮ್ಮನಗ್ಗದ
ಮಸಣಿದೇವನು ಮರುಳಶಂಕರ–
ರೊಸೆದು ಬಲಭಾಗದಲಿ ಸೊಗದಿಂ ಮಂಡಿಸಿರ್ದಪರು ೧೦

ಆಯುದಕ್ಕಿಯ ಮಾರಿತಂದೆಯು
ರಾಯಸದ ಮಂಚಣ್ಣ ಪೆದ್ದಿಯು
ಸ್ವಾಯತದ ಘಟಿವಾಳ ನುಲಿಚೆಂದಯ್ಯನುಂ ಮತ್ತೆ
ಕಾಯಕದ ಕೇತಯ್ಯ ಚೌಡಯ–
ನಾಯತದ ನಾಗಯ್ಯ ಕಂಬಳಿ
ದಾಯಿಗರು ಕಕ್ಕಯ್ಯ ಹರಳಾದಿಗಳು ಎಡಕೆಸೆಯೆ ೧೧

ಬೇರೆ ಕಡೆಯಲಿ ಕುಳಿತಿಹರು ಸಲೆ
ವೀರ ಶರಣೆಯರಸಮಪ್ರಭೆಯರು
ನಾರಿಮಣಿ ನೀಲಮ್ಮ ಗಂಗಾಂಬಿಕೆಯು ಮಾದೇವಿ
ಧೀರಗುಣಿ ನಾಗಮ್ಮ ಲಕ್ಕಮ
ಭೂರಿ ಧೀಮತಿ ಲಿಂಗಮನು ಮೇಣ್
ಸೇರಿಹರು ನೂರಾರು ಶರಣೆಯರಲ್ಲಿ ಮಂಟಪದಿ ೧೨

ಶರಣ ಸಂಕುಳವತಿ ಮುದಂಗೊಳೆ
ಪರಮ ಪಿಂಡಸ್ಥಲವು ಮೊದಲಾ–
ಗಿರಲು ಚರಮ ಜ್ಞಾನಶೂನ್ಯಸ್ಥಲದ ಪರ್ಯಂತಂ
ಸರಸದಿಂ ನೂರೊಂದು ಸ್ಥಲಗಳ
ಪರಿಯನಾ ಪ್ರಭುದೇವನತಿವಿ–
ಸ್ತರಿಸಿ ಪೇಳಿದನಾ ಶಿವನುಭವಾಲಯದೊಳಾಗ ೧೩

ಪರಿಪರಿಯ ಕಾಯಕದ ಶರಣರು
ಗುರುಬಸವನೀ ಮಂಟಪದಿ ಸಲೆ
ಪರಮ ಪರತರ ತತ್ವಸಂವಾದದಲಿ ದಿನಗಳೆಯೆ
ಶರಣರತುಲಿತ ಭಕ್ತಿಮಾರ್ಗದ
ಪರಿಯನೊಲವಿಂ ಕೆಲರು ಜಂಗಮ–
ರರಿಪಿ ಜಗದೊಳು ಚಿತ್ತರಿಸಿದರು ಜ್ಞಾನಪ್ರಭೆಯಿಂದ ೧೪

ಕನ್ನಡದ ನುಡಿಯಲ್ಲಿ ಶ್ರುತಿಗಳ
ಚಿನ್ನದಂತಹ ತತ್ವಗಳ ಮಿಗೆ
ಚೆನ್ನಬಸವಾದ್ಯಖಿಲ ಶರಣರು ಮಥಿಸಿ ತೆಗೆದಿರಲು
ಉನ್ನತದ ಲಿಂಗಾಂಗಿಮತಮಂ
ಮನ್ನಿಸುತೆ ಪರಧರ್ಮಿಗಳು ಕಡು
ನನ್ನಿಯಿಂ ಸ್ವೀಕರಿಸಿದರು ಸದ್ದೀಕ್ಷೆಯಂ ಪೊಂದಿ ೧೫

ಹರನ ಶರಣನಿಗೋರ್ವದೇವನು
ಪರಮ ಪತಿವ್ರತೆಗೊಬ್ಬ ಗಂಡನು
ಎರಗಿದೊಡೆ ಮತ್ತೊಂದಕಾತನು ಮೂಗಕೊಯ್ಯುವನು
ಪರಮ ವಸ್ತುವು ಕ್ರಿಯೆಯ ಭೇದದಿ
ಗುರುವು ಲಿಂಗವು ಜಂಗಮವುಯೆಂ–
ದಿರದೆ ತ್ರಿವಿಧಗಳಿಂದೆ ಲೋಕವನುದ್ಧರಿಪುದಲ್ತೇ ೧೬

ಕಂಡದೈವಕೆ ಶಿರವ ಬಾಗದೆ
ಕಂಡವರ ಗುರುಚರರುಯೆನ್ನದೆ
ಗಂಡುಹೆಣ್ಣುಗಳೊಂದೆ ಮನದಿಂ ತ್ರಿವಿಧಸೇವೆಯನು
ಕೊಂಡು ಕಾಯಕವಿಡಿದು ತಮ್ಮೊಳು
ಮಂಡಿಸುತೆ ನಂಟುತನವಂ ಮೇಣ್
ಖಂಡಿಸುತಲೊಳಪಂಗಡಂಗಳ ಬಳಕೆಗೈಯುವದು ೧೭

ಗುರುವಿನಿಂ ದೀಕ್ಷೆಯನು ಹೊಂದಿದ
ನರನು ನಾರಿಯು ಸರಿ ಸಮಾನರು
ಅರಸಬಾರದು ಪೂರ್ವ ಕುಲಜಾತಿಗಳ ಭಕ್ತರೊಳು
ಪರಮ ವಿಶ್ವಪ್ರೇಮದಿಂ ಮೇಣ್
ಧರೆಯೊಳುರುತರ ಶಾಂತಿಮತದಿಂ
ಪಿರಿಯ ನಿಸ್ವಾರ್ಥದಲಿ ಸಹಕಾರವನು ಪೆರ್ಚಿಪುದು ೧೮

ಮಿಸುಪ ಶರಣರ ತತ್ವ ಕಾಂತಿಯು
ವಸುಧೆಯೊಳ್ ಗೌರವದಿ ಪಸರಿಸೆ
ಕಸವಿಸಿಯು ಮನದಲ್ಲಿ ಕರ್ಮಠರಾಂತು ಚಚ್ಚರದಿ
ಬಸದಿಯಾಣ್ಮನ ಸನ್ನಿಧಿಗೆ ಬಂ–
ದೆಸಗುವರು ಬಹುವಿಧದ ಚಾಡಿಯ
ಎಸೆವ ವರ್ಣಾಶ್ರಮವ ಶರಣರು ಘಾತಿಸಿದರೆಂದು ೧೯

ಧೊರೆಯೆ ನೀ ಸದ್ಧರ್ಮರಕ್ಷಕ–
ನಿರುತಿರಲು ವಿಪರೀತವೇ ಹಾಯ್ !
ಮರುಳರಂ ದಂಡಿಸದೆ ಬಿಟ್ಟರದೇನು ಮಾಡುವರೋ !
ಕರಳು ಕೊರೆಯುತಿದೆಮ್ಮ ಜೀಯಾ
ಹರಣ ಹಾರುತಿದೆಮ್ಮ ಪ್ರಭುವೇ
ಮರೆಯ ಹೊಕ್ಕೆವು ಪೊರೆವುದೆಂದುರುಳಾಡಿದರು ಮುಂದೆ ೨೦

ವಸುಧೆಯೊಡೆಯನು ದೊರೆಯನಾಲಿಸಿ
ಬಸವಮಂತ್ರೀಶ್ವರನ ಕರೆಯಿಸಿ
ಬಸವರಾಜರೆ ವರಸನಾತನಧರ್ಮವಂ ನೀವು
ಹಿಸುಕಿ ಬಿಡುವುದೆ ? ನಿಮ್ಮದಾದೀ
ಹೊಸಮತವ ಹಬ್ಬಿಸಲು ಧರೆಯೊಳು
ಕಸವ ತುಳಿವಂತಕಟ ತುಳಿವರೆ ವೈದಿಕತ್ವವನು ? ೨೧

ಅರಸನೀ ನುಡಿಗೇಳಿ ಬಸವನು
ಒರೆದನರಸಿಗೆ ಧೈರ್ಯದಿಂದಲಿ
ದೊರೆಯೆ ಕರ್ಮಠರೀಪರಿಯ ದೂರುವುದ ನಾ ಬಲ್ಲೆ
ಕರೆಸು ನನ್ನೊಡನವರು ವಾದಿಸಿ
ಹರಮತದೊಳಿರುವಂಥ ದೋಷವ
ಪರಿಕಿಸುತ ತೋರಿಸಲಿಯೆಂದಾಹ್ವಾನವನ್ನೀಯೆ ೨೨

ಹಾರುಳ ಪಂಡಿತರಾಗ ಬಸವನ
ನೆರೆಗೆ ಬಾರದೆ ಹೆದರಿ ಸುಮ್ಮನೆ
ಸರಿದರಾಕ್ಷಣ ವಾದಿಸಲು ಬಲವಿಲ್ಲದೆಳ್ಳಿನಿತು
ಹರಮತವು ಶ್ರುತ್ಯಾಗಮಂಗಳ
ಪರಮ ತತ್ವಗಳಿಂದೆ ಕೂಡಿದೆ
ಕೊರತೆಯಿಲ್ಲಿವಕೆಂದು ನುಡಿದನು ಭೂಪತಿಗೆ ಬಸವ ೨೩

ಬಸವನಂ ಮನ್ನಿಸಿದನಾ ಪ್ರಭು
ಕಸಕು ಬುದ್ಧಿಯ ಕುಹಕರಂ ಸಲೆ
ಎಸೆದುಬಿಟ್ಟನು ಪೊಳ್ಳು ದೂಷಕರೆಂದು ಹೀಗಳೆದು
ಬಸವ ತಂದೆಯ ಕೀರ್ತಿ ಹಬ್ಬಲು
ವಿಷವ ಕಾರಿದರಯ್ಯ ವೈದಿಕ–
ರಸಮ ಭಕ್ತಾಗ್ರೇಸರನ ಬಸವೇಶ್ವರನ ಮೇಲೆ ೨೪

ಬಸವನಂ ಪ್ರಭುದೇವನಂ ಜನ
ಬಸವ ಮೊದಲಾದೆಲ್ಲ ಶರಣರ–
ನೊಸೆದು ನೋಡಿದನಾಗ ಬೂದೀಶ್ವರನು ಕಣ್ತುಂಬ
ಬಸವಭಕ್ತಿಯ ಸ್ಮರಿಸಿ ಮನದೊಳು
ಮಿಸುಪ ಜ್ಞಾನವನರಿದು ಚೆನ್ನನ
ಲಸಿತ ವೈರಾಗ್ಯವನು ಪ್ರಭುವಿನ ಕಂಡು ತಣಿದಿಹನು ೨೫

ವಹಿಸಿದನು ಬಸವನೊಳು ಭಕ್ತಿಯ
ಮಹಿತ ಚನ್ನನ ಜ್ಞಾನ ಪಡೆದನು
ಸಹಜ ಶುದ್ಧ ವಿರಕ್ತಿಯಂ ಪ್ರಭುವಿಂದೆ ಗ್ರಹಿಸಿದನು
ಗಹನಮಾದಾ ಯೋಗಸಿದ್ಧಿಯ
ಮಹಿಮೆಯೆಲ್ಲರ ಮುಂದೆ ತೋರಿಸಿ
ಬಹು ಪ್ರಶಸ್ತಿಯ ಪಡೆದು ಶರಣರ ಮಾರ್ಗವಿಡಿದಿಹನು ೨೬

ಆಸನಂಗಳನೇಕ ಹಾಕುತೆ
ಸೋಸಿ ಪ್ರಾಣಾಯಾಮವೆಸಗುತೆ
ಬೇಸರಿಯದಾಕಾಶಗಮನವ ದರ್ಶಿಸುತೆ ಜನಕೆ
ಆಸೆಯಾಮಿಷಕೆಳಿಸದಲೆ ಮನ
ಲೇಸುಲೇಸೆಂದೆನಿಸಿ ಶರಣರ
ಕೂಸು ತಾನೆನೆ ಮೆರೆದನನುಭವಮಂಟಪದಿ ಯೋಗಿ ೨೭

ಮುಂದೆ ಹರಳೀಶ್ವರನ ಮಗನಿಗೆ
ನಂದನೆಯ ಮಧುವರಸನಿತ್ತನು
ನಂದದಿಂ ಬಸವಾದಿ ಶರಣರನುಜ್ಞೆಯಂ ಪಡೆದು
ಮುಂದಮತಿ ಬಿಜ್ಜಳನು ಪಿಸುಣರ
ಸಂದ ಚಾಡಿಯ ಕೇಳಿ ಬಹುಮುನಿ–
ಸಿಂದೆಯವರೀರ್ವರಿಗೆ ದೇಹಾಂತವನು ವಿಧಿಸಿದನು ೨೮

ಜಾರಿಹೋದುದು ಧರ್ಮದೀಪವು
ಸಾರಿಬಂದುದು ಕರ್ಮಕತ್ತಲೆ
ದೂರ ಸರಿಯಿತು ಸತ್ಯಪಕ್ಷವಿಚಾರಮಾಲಿಕೆಯು
ಜಾರಹತ್ತಿತು ಶರಣಸ್ಯೈರಣೆ
ತೀರಿಹೋಯಿತು ನೃಪನ ವಧೆ ತಾ
ಮಾರಮರ್ದನ ತಂದನೈ ನಗರಕ್ಕೆ ದುರ್ಗತಿಯ ೨೯

ಹರಳಮಧುವಾರ್ಯರನು ಬಿಜ್ಜ–
ದೊರೆಯು ಕೊಲ್ಲಿಸೆ ನಂಟುತನಕಾ
ಗಿರದೆ ಕಲ್ಯಾಣವನು ಶರಣರನೇಕ ತೊರೆದಿಹರು
ಶರಣಚೆನಬಸವೇಶನೊಂದಿಗೆ
ಚರವರೇಣ್ಯನು ಬೂದಿಯೋಗಿಯು
ತೆರಳಿದನು ಏಳ್ನೂರುಯೆಪ್ಪತ್ತಮರಗಣಸಹಿತ ೩೦

ಉಳುವಿಕೊಳ್ಳಕೆ ಬಂದರೆಲ್ಲರು
ತಳುವದೇರ್ಪಡಿಸಿದರು ಪರ್ವವ
ಬೆಳೆದುವಲ್ಲಿ ಪ್ರಸಾದಮಹಿಮೆಯು ತಣಿದರೈ ಗಣರು
ಬಳಿಕ ಶ್ರೀ ಚೆನ್ನೇಶ ಬೂದಿಗೆ
ತೊಳಪ ಮುಖಕಾಂತಿಯಲಿ ಪೇಳ್ದನು
ಇಳೆಯೊಳೆಲ್ಲೆಡೆ ಸಂಚರಿಸಿ ಧರ್ಮವನು ಸಾರಲ್ಕೆ ೩೧

ಬಸವ ತಂದೆಯ ತತ್ವಗಳ ನೀ–
ಪೊಸೆದು ಎಲ್ಲೆಡೆಗಳಲಿ ಹಬ್ಬಿಸಿ
ಪೊಸಕಳೆಯ ಜನರಲ್ಲಿ ತುಂಬುತೆ ಸಾಗುವುದು ಮುಂದೆ
ವಸುಧೆಯೋಳೇಳ್ನೂರುಯೆಪ್ಪ–
ತ್ತೈಸೆವ ಸಂವತ್ಸರವ ದಾಂಟಿಸಿ
ಮಿಸುಪ ಲಿಂಗದೊಳೈಕವಾಗುವುದೆಂದು ಬೆಸಸಿದನು ೩೨

ಕೆಟ್ಟ ದಿನಗಳು ಮುಂದೆ ಬರುವವು
ಶಿಷ್ಟರಿಗೆ ಜಯವಿಲ್ಲ ಲೋಕದಿ
ದುಷ್ಟರಾ ಹಾವಳಿಯು ಬೆಳೆವುದು ಗೋಳು ಬಡವರಿಗೆ
ಮೆಟ್ಟಿ ತುಳಿವರು ದೀನದಲಿತರ–
ನಟ್ಟಹಾಸದಿ ದುರ್ಮದಾಂಧರು
ಸುಟ್ಟು ಪೋಪವು ದಿಟವು ಧರ್ಮಾಚಾರನೀತಿಗಳು ೩೩

ಪಾಳುಗೊಳ್ವವು ಮಾನ್ಯ ಮಠಗಳು
ಬೀಳು ಬೀಳ್ವವು ದೇಗುಲಂಗಳು
ಕೂಳು ಕಾಣದೆ ನರಳುವರು ಗಡ ಪಂಡಿತೋತ್ತಮರು
ಕೀಳು ಮೇಲೆಂಬಾ ವಿವಾದದಿ
ಕೀಳಿಗೊಯ್ವರು ನಮ್ಮ ನಾಡನು
ತಾಳಮೇಳವು ಕಾಣದಿಪ್ಪುದು ನಾಡನಡತೆಯೊಳು ೩೪

ಅಗುಳಿನಾಸೆಗೆ ನಾಯ ಬಾಳಿನ
ಹೊಗಳುಭಟ್ಟರ ನುಡಿಯು ಮೋಹಕೆ
ಜಗವು ಸಿಲುಕುವದಾಲಸಿಗಳಾ ಮೇಳ ಬೆಳೆಯುವದು
ಬೊಗಳುವರು ಶಿವಭಕ್ತರಿಗೆ ಮೇಣ್
ತೆಗಳುವರು ಷಟ್‌ಸ್ಥಲದ ಮಾರ್ಗವ
ನಗೆಯ ಆಟವನಾಡುವರು ಲಿಂಗಾಂಗಿಗಳ ಕಂಡು ೨೫

ಉಂಟು ಆಸ್ಪದ ಚಾರವಾಕರಿ–
ಗಂಟು ಮಾನವು ಮೋಡಿಕಾರರಿ–
ಗುಂಟು ಗೌರವ ಕುಟಿಲ ಶಾಸ್ತ್ರಿಗೆ ಕಳ್ಳಕಾರರಿಗೆ
ಉಂಟು ನ್ಯಾಯವು ಸುಳ್ಳುವಾದಿಗೆ
ಉಂಟು ವಿಜಯವು ವಕ್ರಮಾರ್ಗಿಗೆ
ಉಂಟು ಸರ್ವವು ಲೋಕಕಂಟಕರಾದ ದೈತರಿಗೆ ೨೬

ಓದಿ ವೇದವ ಕುರಿಯ ತಿನ್ನುವ–
ರೋದಿ ಶಾಸ್ತ್ರವ ಬಂಗಿ ಸೇದುವ–
ರೋದಿ ಸೂತ್ರವ ಜಾರ ಚೋರರ ತೆರದಿ ವರ್ತಿಪರು
ಸಾಧು ಮಾರ್ಗವ ಮೀರಿ ನಡೆವರು
ಕಾದಿಹರು ಪರನಾರಿಸಮಯವ
ಸ್ವಾದಗೆಡುವದು ಮೇದಿನಿಯ ಪರಿ ಪೇಳಲೇನದನು ೨೭

ಜಗದ ಪಾಪವು ತುಂಬಿ ಬರುವದು
ಒಗೆಯುವದು ಲೋಕಾಂತ್ಯ ಪ್ರಳಯವು
ಸೊಗದಿ ಭಾವಿಕ ಜೀವಿಗಳು ಬಾಳುವರೆ ಕರಕಷ್ಟ
ಬಗೆಬಗೆಯ ಪರಿಯಲ್ಲಿ ದುಷ್ಟರು
ಜಗವ ಧಗ್ದುಳಿಯುವರು ಮದದಿಂ
ಮಿಗಿಲು ಸ್ವಾರ್ಥಾಡಂಬರಂಗಳು ಮೇರೆಮೀರುವವು ೨೮

ಜಾತಿಕೋತಿಗಳೆಂಬ ಭೀಕರ
ಭೂತಗಳು ಥೈಯೆಂದು ಕುಣಿವವು
ಪ್ರೀತಿ ಐಕ್ಯಗಳಿಂದೆ ಬಾಳರು ದೇಶಬಾಂಧವರು
ನೀತಿಧರ್ಮವಿಹೀನರಾಗಿಯೆ
ಭೂತಲದಿ ಜನ ವರ್ತಿಸಿಪ್ಪುದು
ಪೂತರೆಂಬವರೆಲ್ಲ ಘಾತಕರಾಗಿ ನಡೆಯುವರು ೩೯

ಕೀಳು ಕುಲದವರೆಲ್ಲ ದುಷ್ಟರ
ಆಳಿಕೆಗೆ ಒಳಪಟ್ಟು ದೈನ್ಯದಿ
ಊಳಿಗವ ಮಾಡುವರು ಸೊಕ್ಕಿನ ಸ್ವಾರ್ಥಲಂಪಟರ
ಬಾಳಲಾಸ್ಪದವಿಲ್ಲ ಸುಜನರು
ಬೀಳುಗಳೆವರು ನೀಚರವರನು
ಹಾಳುಪೋಪುದು ಶರಣರುಳಿಸಿದ ಸಂಸ್ಕೃತಿಯ ಸಿರಿಯು ೪೦

ಅದರೊಳೀ ಕರುನಾಡ ದೇವಿಯ
ಹೃದಯ ಬಗಿಯುವ ಪರರ ನೀತಿಗೆ
ಬಿದಿಯೆ ತಾನನುಕೂಲವಾಗುವದೆಂಬುದಿದು ಸತ್ಯ
ಸದಮಳನೆ ಬೂದೀಶ ಯೋಗಿಯೆ
ಇದಕುಪಾಯವ ಕಂಡು ಬೇಗನೆ
ಕುದಿವ ನಾಡನು ಶಾಂತಗೊಳಿಸು ಕೃಪಾಕಟಾಕ್ಷದೊಳು ೪೧

ಧರೆಯ ಭವಿತವ್ಯವನು ಗಡ ನೀ–
ನರಿದು ಸದ್ವರ್ತನೆಯ ಜನತೆಗೆ
ಕರವಿಡಿದು ತೋರಿಸುವುದೊಳ್ಳಿತು ಚರವರೋತ್ತಮನೆ
ಮರೆಯಬೇಡಿರಿ ಪೂಜ್ಯಪಾದರೆ
ಶರಣು ನಿಮ್ಮಡಿಗೆಂದು ಚೆನ್ನೇ–
ಶ್ವರನು ಬೆಸಸಿದನಾಜ್ಞೆಯನು ಬೂದೀಶಯತಿವರಗೆ ೪೨

ಚೆನ್ನಬಸವೇಶ್ವರನ ಆಣತಿ–
ಯನ್ನು ಶಿರಸಾವಹಿಸಿ ಬೂದಿಯು
ಸನ್ನುತಾತ್ಮನಿಗಾಗ ಪೇಳ್ದನು ವಿನಯದೊಡಗೂಡಿ
ನಿನ್ನ ಕೃಪೆಯಿಂದಾನು ತಂದೆಯೆ
ಚೆನ್ನದಿಂ ಸಂಚರಿಸಿಯೆಲ್ಲೆಡೆ
ನನ್ನ ಮಣಿಹವನಿನ್ನು ಪ್ರಾರಂಭಿಸುವೆ ಶೀಘ್ರದಲಿ ೪೩

ಎಲ್ಲಿ ಪೋಗುವೆನಲ್ಲಿ ಬಸವನ
ಚೆಲ್ವವಿಗ್ರಹವನ್ನು ಸ್ಥಾಪಿಸಿ
ಲಲ್ಲೆಯಿಂ ಶ್ರೀಬೂದಿಬಸವನುಯೆಂಬ ಪೆಸರಿಟ್ಟು
ಎಲ್ಲರಿಗೆ ಲೀಲೆಯನು ತೋರಿಸಿ
ಎಲ್ಲರಿಗೆ ಭಕ್ತಿಯನು ಬೋಧಿಸಿ
ಎಲ್ಲೆಡೆಯೆ ಪ್ರಭುಗದ್ದುಗೆಯ ಮಠಗಳನು ಬೆಳೆಸುವೆನು ೪೪

ಶರಣರನುಭವಮಂಟಪದಿ ಪರ
ತರದ ಭಕ್ತಿಜ್ಞಾನವಿರತಿಯ
ದೊರಕಿಸಿದ ಶ್ರೀಬೂದಿಯೋಗೀಶ್ವರನು ನಮಗೆಲ್ಲ
ಹರುಷದಿಂ ಸದ್ಭಕ್ತಿಸಂಪದ–
ವಿರದೆ ತಾನಿತ್ತೆಮ್ಮ ಸಲಹಲಿ
ಎರಗಿನಾವವರಡಿಗೆ ನಯದಿಂ ಬೇಡಿಕೊಳ್ಳೋಣ ೪೫

**ಅಂತು ಎರಡನೆಯ ಸಂಧಿಗೆ ೧೭೧ ಪದ್ಯಕ್ಕೆ ಮಂಗಲಮಕ್ಕುಂ**

**— ಭದ್ರಂ ಶುಭಂ ಮಂಗಲಂ—**

ಶ್ರೀಗುರುಬಸವಲಿಂಗಾಯ ನಮಃ

# ಮೂರನೆಯ ಸಂಧಿ

## ಉಳುವಿ

ಸೂಚನೆ:- ಬಸವತತ್ವವು ಜಗದಿ ಬೆಳಗಲಿ
ವಸುಧೆಯುದನಳವಡಿಸಿಕೊಳ್ಳಲಿ
ಬಸವಳಿದು ಬಿಸುಸುಯ್ವ ಜನಮನ ಶಾಂತಿಗೆಡೆಗೊಡಲಿ

ಬಸವಮಂಟಪದಲ್ಲಿ ಭಕ್ತಿಯ-
ನೊಸೆದು ಸಾಧಿಸಿ ಶುದ್ಧಕಾಯಕ-
ವೆಸಗಿ ಷಟ್‌ಸ್ಥಲ ಸಾರವನು ಸವಿಸವಿದು ಉಳುವಿಯೊಳು
ವಸುಧೆಗೀವನು ಮತ್ತೆ ಸಂತಸ-
ದೊಸಗೆಯನು ತಾನಿತ್ತ ಯೋಗಿಯ
ಎಸೆವ ಪಾದಕೆ ಮಣಿವೆನಾಂ ಬಹುಭಕ್ತಿಯುತನಾಗಿ ೧

ಬಳಿಕಲಾ ಶ್ರೀ ಚೆನ್ನಬಸವನು
ಉಳುವೆಯೊಳ್ಐಕ್ಯನಾಗಲು
ತಳುವದಾ ಬೂದೀಶಯೋಗಿಯು ನಿಂದು ತಾನಲ್ಲಿ
ತಳೆದು ಸ್ಫೂರ್ತಿಯ ಬಸವತತ್ವವ
ಉಳುವೆಯಲ್ಲಿಯ ಸಿದ್ಧ ಜನಸಂ
ಕುಳಕೆ ಬೋಧಿಸಲೆಂದು ಸಜ್ಜಾಗಿಹನು ಮನದಾಮ ೨

ಗವಿಯೊಳಡಗಿದ ಸಿದ್ಧರೆಲ್ಲರ
ತವಕದಿಂ ತಾ ಕರೆದು ಯೋಗಿಯು
ಸವಿಸವಿಯ ವಚನಾಮೃತದ ಘನ ತಿಂಡಿತೀರ್ಥಗಳ
ಶಿವನ ಕೃಪೆಯಿಂದಿತ್ತು ಸಲೆ ತಾ–
ನವರ ಪ್ರೇಮಕೆ ಪಾತ್ರನಾದನು
ತಪಸಿಗಳ ಸನ್ಯಾಸ ತೊಲಗಿಸಿ ಯೋಗವಿಡಿಸಿದನು ೩

ಶುದ್ಧ ಮನದಿಂದೆನ್ನ ಮಾತನು
ಸಿದ್ಧರೆಲ್ಲರು ಕೇಳಿರೈ ಮನ
ಬುದ್ಧಿಯಿಂ ಶ್ರೀ ಬಸವವಚನಾಮೃತದಸಾರವನು
ಬದ್ಧರಾಗದೆ ತಪದ ಮಾರ್ಗದಿ
ಬುದ್ಧಿಗಲಿಯಿರಿ ತಿಳಿದು ತತ್ವವ
ಸಿದ್ಧಿವಡೆಯಿರಿ ಬಸವ ತತ್ವವ ಬೀರಿ ಜಗದಲ್ಲಿ ೪

ಕೆಲ ಮಹಾತ್ಮರ ಸಿದ್ಧರೆಂಬರು
ಕೆಲರನವತಾರಿಗಳುಯೆಂಬರು
ಪಲವರಿಗೆ ಸಾಧಕರುಯೆಂಬುವದುಂಟು ಜಗದಲ್ಲಿ
ಕೆಲರು ಶರಣರು ಸಿದ್ಧರೈ ನಿಜ
ಕೆಲರು ಸಾಧಕರಿರ್ದರಿದು ದಿಟ
ಕಲಿಯುಗದ ಅವತಾರಿ ಪುರುಷನು ಭಕ್ತಬಸವೇಶ ೫

ಬಸವ ವಚನದಿ ದಿವ್ಯ ತತ್ತ್ವವು
ಬಸವವಚನದಿ ಮೋಕ್ಷ ಮಾರ್ಗವು
ಬಸವವಚನದಿ ಭಕ್ತಿ ಶಕ್ತಿ ವಿರಕ್ತಿಸಂಪದವು
ಬಸವವಚನದಿ ಸತ್ವಕೋಶವು
ಬಸವವಚನದಿ ಲೋಕಸಂಸ್ಕೃತಿ
ಬಸವವಚನದಿ ಸಾರಸರ್ವಸ್ವವದು ತುಂಬಿಹುದು ೬

ವಿಶ್ವಧರ್ಮದ ಮೂಲ ದಾಯ ತಾ
ವಿಶ್ವಶಾಸ್ತ್ರಯುಮಾಗಿಹುದು ದಿಟ
ವಿಶ್ವದಾ ಬೆಳಕಿಂಗೆ ಭಕ್ತಿಜ್ಞಾನಕ್ರಿಯೆ ಬೇಕು
ವಿಶ್ವಬಂಧುತ್ವಾದಿ ಗುಣಗಳು
ವಿಶ್ವಧರ್ಮೋದ್ಧಾರ ಲಕ್ಷಣ-
ವಿಶ್ವರೂಪದ ಧರ್ಮರಚನೆಯ ಗೈದನಾ ಬಸವ ೭

ಬೇಕು ಅಷ್ಟಾವರಣ ಕ್ರಿಯೆಗಳು
ಬೇಕು ಪಂಚಾಚಾರಶೀಲವು
ಬೇಕು ಷಟ್‌ಸ್ಥಲಜ್ಞಾನಸಾಧನ ಲೋಕಹಿತಕಾಗಿ
ಬೇಕು ಸಮತೆ ಸಹಿಷ್ಣುತೆಗಳುರೆ
ಬೇಕು ಕಾಯಕನಿರತ ಭಾವವು
ಬೇಕು ಪವಿತ್ರವಾಗಿ ದ್ರವ್ಯಾರ್ಪಣವು ಜಂಗಮಕೆ ೮

ಇಳೆಗೆ ಸರ್ವೋದಯದ ನಿಯಮಾ-
ವಳಿಯನೊದಗಿಸುತೆಲ್ಲ ತರದಿಂ
ಬೆಳಗಲಾಸ್ಪದವಿತ್ತು ಸನ್ನುತ ವೀರಶೈವವನು
ಬಳಕೆಯೊಳು ತಂದೊಬ್ಬರೊಬ್ಬರಿ-
ಗೊಳಿತ ಗೈಯುವ ಕಾಯಕದಿ ಶಿವ-
ಕಳೆಯ ಪೆರ್ಚಿಸಿ ಬಾಳಹಚ್ಚಿದನಯ್ಯ ಬಸವೇಶ ೯

ರಾಜನೀತಿಯ ಮಂತ್ರಿಪದಕೆ ಸ-
ಮಾಜ ಗತಿಯ ಹಸಾದಗಟ್ಟಿಗೆ
ತೇಜವಿಡುವಾಧ್ಯಾತ್ಮವನುಭವಮಂಟಪಕೆ ಸಲಿಸಿ
ಸಾಜದಿಂ ಬಸವೇಶತತ್ತ್ವವು
ರಾಜಿಸಿರೆ ಜನ ಮೆಚ್ಚಿ ನಲಿದುದು
ರಾಜರಾಜಾಧೀಶರಾತನ ಹೊತ್ತು ಕುಣಿದಿಹರು ೧೦

ಜಗವು ಸುಳ್ಳೆಂಬುವುದು ಪುಸಿನುಡಿ
ಜಗವು ಜಗದೀಶಪ್ರಸಾದವು
ಬಗೆದು ವಸ್ತುವ ಭೋಗಿಪುದು ಶರಣರ್ಗೆ ಸಮ್ಮತವು
ಜಗದ ವರ್ಣಾಶ್ರಮದ ವಿಷಮತೆ-
ಯಗಿದು ಸಮತೆಯ ಭಾವ ಬೀರಿದ
ಪ್ರಗತಿಶೀಲನು ನಮ್ಮ ಬಸವೇಶ್ವರನು ನಂಬಿರೆಲಾ ೧೧

ಒಲೆಗೆ ಹಾಕಿದ ಕಾಷ್ಠವಗ್ನಿಯ
ಮಿಲನದಿಂ ತಾನಳಿದು ಮೂಲವ
ಚೆಲುದ ತೇಜವ ಪೊಂದುವುದು ನಿಜವೆಂಬ ತೆರನಂತೆ
ಒಲಿದು ದೀಕ್ಷೆಯ ಪೊಂದಿ ಗುರುವಿಂ
ಮಲವ ಮೂರನು ಕಳೆದ ಭಕ್ತಗೆ
ಹೊಲೆತನವನಂಟಿಪುದು ತಪ್ಪೆನ್ನುವನು ಬಸವೇಶ ೧೨

ಹಸನವಿಲ್ಲದ ಬಾಯ ವೇದದ
ಅಶನದಾಶೆಯ ಶಾಸ್ತ್ರವಾದದ
ಪಿಸುಣವಾದಿಯ ಬೋಧೆ ಪ್ರವಚನ ಕೀರ್ತನಾದಿಗಳ
ಎಸೆದು ನಡೆನುಡಿಶುದ್ಧ ಶರಣರ
ಅಸಮತರ ವಚನಂಗಳಾಲಿಸಿ
ವಿಷಮಭಾವವ ನೀಗಿರೆಂದನು ನಮ್ಮ ಬಸವೇಶ ೧೩

ಇಲ್ಲಿ ಸಲ್ಲುವರಲ್ಲಿ ಸಲ್ವರು
ಇಲ್ಲಿ ಸಲ್ಲದರಲ್ಲಿ ಸಲ್ಲರು
ಎಲ್ಲರೂ ಸಂಸಾರ ಕಮ್ಮಟದಲ್ಲಿ ಶ್ರಮಿಸುವುದು
ಒಲ್ಲೆನೆಂದುಳಿದೀ ಪ್ರಪಂಚವ
ಕ್ಷುಲ್ಲಕರು ಕಾನನವ ಸೇರ್ವರು
ಬಲ್ಲ ಯತಿಗಳು ಜನರ ಮಧ್ಯದೊಳಿರ್ದು ದುಡಿಯುವರು ೧೪

ನೀವು ತಪಗೈಯುವಿರಿ ಸ್ವಾರ್ಥಕೆ
ನೀವು ಜಪಮಾಡುವಿರಿ ಸ್ವಾರ್ಥಕೆ
ನೀವು ಗೈವಿರಿ ಯೋಗಸಾಧನವನ್ನು ನಿಜಸುಖಕೆ
ನೀವು ಸ್ವಾರ್ಥವ ಬಿಟ್ಟು ಲೋಕದ
ಸೇವೆಮಾಡಲು ಟೊಂಕಕಟ್ಟಿರಿ
ಸಾವಧಾನದಿ ಬಸವತತ್ತ್ವವ ಸ್ಮರಿಸಿ ಮನದಲ್ಲಿ ೧೫

ನೀವು ವರ್ಣಾಶ್ರಮದ ರೀತಿಯೊ-
ಳೀ ವನದಿ ಸನ್ಯಾಸಚರಿಸಿರಿ
ಭಾವಿಪೊಡೆ ಒಬ್ಬೊಂಟಿಗರು ನೀವಾಗಿ ನಿಂದಿಹಿರಿ
ಆವಗಂ ಕುಲಛಲಕೆ ಕಾದುವ-
ದೇವುದೈ ಸಲೆ ಭರತಖಂಡವು
ಆವ ಪಪಾದಿ ಜಾತಿಭೇದವನಿಲ್ಲಿ ನೆಲಸಿಹುದೊ ! ೧೬

ಮುನಿಯು ವ್ಯಾಸನು ಬೋಯಿತಿಯ ಮಗ
ಮುನಿಯುಗಸ್ತ್ಯನು ಕಬ್ಬಿಲನು ಮೇಣ್
ಮುನಿಯು ಮಾರ್ಕಂಡೇಯ ಮಾತಂಗಿಯ ಸುಪುತ್ರನಲಾ
ಮುನಿಯು ದುರ್ವಾಸನವ ಮೊಚ್ಚಿಗ
ಮುನಿವಶಿಷ್ಠನು ಡೊಂಬನೈ ನಿಜ
ಮುನಿಯು ಕಶ್ಯಪ ಕಮ್ಮರನು ಕೌಂಡಿನ್ಯ ನಾವಿದನು ೧೭

ಮುನಿಸರಿದ್ಗಳ ಹುಟ್ಟನೆಣಿಸದೆ
ಜನರವರ ಪರಿಶುದ್ಧವೆಂಬರು
ಘನಮಹಿಮ ಶಿವಶರಣರಾ ಕುಲಗೋತ್ರವೆಣಿಸುವರೇ ?
ಅನಘಮೂರ್ತಿಗಳೆಲ್ಲ ಕುಲದಲಿ
ಜನಿಸಿ ಜಗಮಂ ಬೆಳಗಿ ಜ್ಞಾನದಿ
ಮನುಜರಪ್ಪುದ ಕಂಡೊಡೂ ಕುಲಕಂಟಿಕೊಳ್ಳುವುದೇ ? ೧೮

ಬಿಡಿರಿ ನಿಮ್ಮಾಶ್ರಮದ ಹೆಮ್ಮೆಯ
ಹಿಡಿಯಿರೈ ಶಿವಶರಣಮಾರ್ಗವ
ಪಡೆಯಿರೈ ಶಿವಲಿಂಗದೀಕ್ಷೆಯನೊಂದೆ ಮನದಿಂದ
ಒಡೆಯ ಬಸವನ ತತ್ತ್ವಸಾರುತ
ನಡೆಯಿರೈ ಸಂಚಾರಕ್ರಮದಿಂ
ಮೃಡನು ನಿಮಗೀಯುವನು ಸದ್ಗತಿಯನ್ನು ಶೀಘ್ರದಲಿ ೧೯

ಲಿಂಗವಿರೆ ಕುಲವಿಲ್ಲವೆಂದುಂ
ಲಿಂಗ ಸಮತೆಯ ಚಿಹ್ನ ತಿಳಿಯಿರಿ
ಲಿಂಗಧರಿಸಿದ ಹೊಲೆಯನೂ ಸದ್ಭಕ್ತ ತಾನಹನು
ಲಿಂಗಧರಿಸಿದ ಮಂಗಲಾಂಗನ
ಲಿಂಗಶರಣರು ಮೆಚ್ಚಿಕೊಳ್ವರು
ಲಿಂಗಧರಿಸಿರಿ ಶರಣತತ್ತ್ವಪ್ರಚಾರಗೈವುದಕೆ ೨೦

ಎಂದೆನಲು ನೆರೆದಿರ್ದ ಸಾಧುಗ-
ಳೆಂದು ವಂದಿಸಿ ಬೂದಿಯೋಗಿಗೆ
ಚೆಂದದಿಂ ಲಿಂಗಾಂಗಿಮತವನ್ನಪ್ಪಿಕೊಂಡಿಹರು
ಕಂದುಗೊರಲನ ರೂಪ ತಾನಾ-
ನಂದದಿಂ ಸಾಧುಗಳಿಗೊಲವಿಂ-
ದಿಂದುಧರನಂ ಸ್ಮರಿಸಿ ದೀಕ್ಷೆಯನಿತ್ತು ಬೋಧಿಸಿದ ೨೧

## ಅಷ್ಟಾವರಣ

ಗುರುವು ಲಿಂಗವ ಧರಿಸುವಂ ಮೇಣ್
ಪರಮ ಲಿಂಗವು ಪೂಜೆಗೊಂಬುದು
ಪರಕಿಪನು ಜಂಗಮನು ಭಕ್ತರ ಭಕ್ತಿಕ್ರಿಯೆಗಳನು
ವರ ಭಸಿತ ರುದ್ರಾಕ್ಷಿ ಮಂತ್ರಗ-
ಳಿರದೆ ಪೂಜಾಸಾಧನಂಗಳು
ಪರಮ ಪಾದೋದಕ ಪ್ರಸಾದವು ಸಮರಸೋಪಾಯ ೨೨

ಲಿಂಗವೊಂದೇ ಪೂರ್ಣ ಮೊದಲೊಳು
ಅಂಗದೊಳ್ಮೂರಾಗಿ ತೋರ್ಪುದು
ಲಿಂಗವಿಷ್ಟ ಪ್ರಾಣ ಭಾವಗಳೆಂಬ ಪೆಸರಿಂದೆ
ತುಂಗಮಾಗಿರ್ದಿಷ್ಟಲಿಂಗವು
ಸಿಂಗರಿಸಿ ಸದ್ಭಕ್ತನಂಗೆಮ
ಮಂಗಲದೊಳಂಗೈಯ ಪೂಜೆಯ ಹೊಂದಿ ರಂಜಿಪುದು ೨೩

ಅರಿವೆ ಗುರುವನುಭವವೆ ಲಿಂಗವು
ಚರನು ಚಿನ್ಮಯಶಕ್ತಿಯೈ ಸಲೆ
ವರ ಪಾದೋದಕ ಪರಶಿವನ ಕಾರುಣ್ಯರಸಶರಧಿ
ಪರಭಸಿತ ಚಿತ್ಪ್ರಭೆಯು ಬಳಿಕಾ
ಪರಮನಕ್ಷಿಯು ದಿವ್ಯದೃಷ್ಟಿಯು
ಮಿರುಪ ಷಣ್ಮಂತ್ರವು ಪರಾತ್ಪರವಸ್ತುವಿನ ನಾಮ ೨೪

## ಪಂಚಾಚಾರ

ಲಿಂಗವೇ ಪರವೆಂದರಿದು ನೆರೆ
ಹಿಂಗಿ ಪರದೈವಂಗಳಂ ನಿಜ–
ಲಿಂಗಮಂ ಪೂಜಿಸುತೆ ಲಿಂಗಿಗಳನ್ನು ಮನ್ನಿಸುತೆ
ಭಂಗಗೊಳ್ಳದೆ ಸಮರಸದಿ ಲಿಂ–
ಗಾಂಗಿಗಳ ಸಂಗದಲಿ ಚರಿಸುವ
ಮಂಗಲಾಂಗನೆ ನಿಜದಿ ಲಿಂಗಾಚಾರಿಯೆನಿಸುವನು ೨೫

ಪರಸತಿಗೆ ತಾನಳುಪದಿರ್ದೊಡೆ
ಪರಧನಕೆಯುಳಿಯಾಸೆಹೊದ್ದದೆ
ಪರರ ಹಿಂಸೆಯ ಸರ್ವಥಾ ಮನದಲ್ಲಿ ಭಾವಿಸದೆ
ಪರತರದ ಸಚ್ಛೀಲಕಾಯಕ–
ವಿರದೆ ನಿಷ್ಠೆಯೊಳಾಚರಿಸುತಿಹ
ಪರಮ ಗುರುಚರಲಿಂಗದಾಸೋಹಿಯೆ ಸದಾಚಾರಿ ೨೬

ದೇವಭಕ್ತರು ಯಾರಿರಲಿ ಮನ-
ಭಾವದಿಂದವರನ್ನು ಮನ್ನಿಸಿ
ಆವಗಂ ಸಂಪ್ರೀತಿ ಸಹಕಾರದಲಿ ನಡೆವವನು
ನಾವು ಹೆಚ್ಚೆಂಬಹಮಿಕೆಯು ಮೇಣ್
ನೀವು ಕೀಳೆಂಬಧಮದೃಷ್ಟಿಯು
ಭಾವಿಸದೆ ಭಕ್ತ್ಯೈಕಸಾಧಕನೇ ಶಿವಾಚಾರಿ ೨೭

ಹರಮತವ ಹರಶರಣವೃಂದವ
ಜರೆದು ದ್ರೋಹವ ಗೈವ ಪಾಪಿಯ
ನೆರೆದು ಭಕ್ತರು ಪ್ರತಿಭಟಿಸಿ ಸಲೆ ತಕ್ಕಶಾಸನವ
ಜರಗಿಸುವುದದು ಲೇಸು ನಮ್ಮಯ
ವರ ಸಮಾಜದ ಭದ್ರರಕ್ಷೆಗೆ
ಪಿರಿಯ ಮತದಭಿಮಾನಿಯೇ ಸೈ ತಾ ಗಣಾಚಾರಿ ೨೮

ಕಿರಿಯ ನಾಂ ಭಕ್ತರಿಗೆ ಸರಿಯೇಂ ?
ಹಿರಿಯರೈ ಸದ್ಭಕ್ತರೆಲ್ಲರು
ಶರಣರೆಲ್ಲರ ಕಿಂಕರರ ಕಿಂಕರನು ನಾನೆಂಬ
ಅರಿದು ತಾನಾಚರಿಪ ಭಕ್ತನೆ
ಪರಮ ಭೃತ್ಯಾಚಾರಿಯಪ್ಪನು
ವರವಿನಯ ಸಂಪನ್ನ ಸದ್ಗುಣಿ ನಿಷ್ಕಪಟಹೃದಯ ೨೯

## ಷಟ್‌ಸ್ಥಲ

ಪರಮ ಲಿಂಗದೊಳಿಟ್ಟು ಶ್ರದೆಯ
ಚರಿಸಿ ತಾ ಕಾಯಕದಿ ಧನಮಂ
ನೆರೆಗಳಿಸಿ ಗುರುಲಿಂಗಚರ ದಾಸೋಹಗೈವವನು
ವರಭಕುತನೆಂದೆನಿಸಿಕೊಂಬನು
ಚರಿಸನಾತನು ಜಾತಿಭೇದವ
ಪರಭಕುತರೊಂದೆಂಬ ಭಾವದಿ ಬಳಕೆಗೈಯುವನು ೩೦

ತೊರೆದು ಪರಧನ ಪರವಧುಗಳಂ
ಜರೆದು ಕಿರುಕಳ ದೈವಗಳ ತಾಂ
ಪರರ ಹಿಂಸೆಗೆ ಮನವನೆಳಸದೆ ಲಿಂಗನಿಷ್ಠೆಯಲಿ
ಚರಿಪನವನೇ ವರ ಮಹೇಶನು
ಅರಿಯೆ ತಾ ಬಹು ನ್ಯಾಯನಿಷ್ಠುರ
ಪರಮ ನಿರ್ದಾಕ್ಷಿಣ್ಯ ನಿರ್ಭಯ ನಿಷ್ಕಪಟಹೃದಯ ೩೧

ಶಿವನ ವಸ್ತುವ ಶಿವನಿಗರ್ಪಿಸಿ
ಶಿವನ ಶೇಷಪ್ರಸಾದಮಂ ಸಲೆ
ತವೆ ಭುಕುತಿಯಿಂ ಸೇವಿಪನೆ ಪರಸಾದಿಯೆನಿಸುವನು
ಇವನಿಗುಂಟವಧಾನಭಕ್ತಿಯು
ಇವನು ಶಾಂತನು ಮಿತವಿಹಾರಿಯು
ಇವನು ಸಲೆ ಮಿತಭಾಷಿ ಮಿತಹಾರವನು ಸೇವಿಪನು ೩೨

ಲಿಂಗ ಪ್ರಾಣದಿ ಪ್ರಾಣ ಲಿಂಗದಿ
ಸಂಗೊಳಿಸಲವ ಪ್ರಾಣಲಿಂಗಿಯು
ಅಂಗದೊಳಗಣ ಆರು ಚಕ್ರದ ನೆಲೆಯ ತಾನರಿದು
ಲಿಂಗಪ್ರಾಣವ ಚಕ್ರಗಳೊಳುರೆ
ಅಂಗವಿಸಿ ಶಿವಯೋಗಮಾರ್ಗದಿ
ಲಿಂಗದೊಳನುಭಾವಭಕ್ತಿಯ ಚರಿಸುತಿಹನ್ನೈಸೆ ೩೩

ಮೂಗು ನಾಲಗೆ ಕಣ್ಣು ತ್ವಚ ಕಿವಿ–
ಯಾಗಿಹವು ಪಂಚೇಂದ್ರಿಯಂಗಳು
ಭೋಗಿ ಶರಣನು ಲಿಂಗಮುಖದಿಂ ಕೊಂಬ ದ್ರವ್ಯಗಳ
ಭೋಗಿಶರಣೇಂದ್ರಿಯವು ಲಿಂಗವ–
ದಾಗೆ ಶರಣಗೆ ಪತಿಯು ಲಿಂಗವು
ರಾಗದಿಂದಾನಂದಭಕ್ತಿಯೊಳಾಳ್ವನಾ ಶರಣ ೩೪

ನೀರು ನೀರೊಳು ಹಾಲು ಹಾಲೊಳು
ಸಾರಿರುವ ತೆರನಂತೆ ಅಂಗನು
ಸೇರಿ ಲಿಂಗದಿ ಬೇರೆಯಾಗದ ರೀತಿಯಲ್ಲಿರಲು
ಸಾರಸಜ್ಜನರೈಕ್ಯನೆಂಬರು
ಮೀರಿ ಸಮರಸ ಭಕ್ತಿಯೊಂದಿರೆ
ಯಾರು ಅಂಗನು ಲಿಂಗವಾರೆಂದರಿವರಾರಿಹರು ? ೩೫

ಮೀರಿದಷ್ಟಾವರಣಗಳ್ ಸಲೆ
ವೀರಶೈವನಿಗಂಗವೆಂಬರು
ವೀರಶೈವನ ಪ್ರಾಣ ಪಂಚಾಚಾರವಾಗಿಹುದು
ಸಾರ ಷಟ್‌ಸ್ಥಲ ತತ್ತ್ವ ನಿಜದಿಂ
ವೀರಶೈವನಿಗಾತ್ಮವೆನಿಪುದು
ವೀರಶೈವ ಮತಸ್ಥರೆಲ್ಲರು ತಿಳಿವುದೀ ಪರಿಯ ೩೬

ಪರಮ ಕ್ರಿಯೆ ಗುರು ಲಿಂಗವೆಂದೆಂ-
ಬೆರಡು ತೆರನಾಗಿರ್ದುದಿಷ್ಟವು
ಹರಣಲಿಂಗವು ತಾನೆ ಶಿವಚರಲಿಂಗವೆಂಬೆರಡು
ಪರಿಯೊಳಿರೆ ಭಾವವದು ತಾಂ ಸಲೆ
ಅರಿಸಿಕೊಂಬುದು ಸುಪ್ರಸಾದಂ
ವರಮಹಾಲಿಂಗೆಂಬೆರಡು ನಾಮದೊಳು ಕ್ರಮದಿಂದ ೩೭

ಬೇಕು ಶ್ರದ್ಧೆಯು ಕ್ರಿಯೆಯ ಲಿಂಗಕೆ
ಬೇಕು ಗುರುಲಿಂಗಕ್ಕೆ ನಿಷ್ಠೆಯು
ಬೇಕು ಶಿವಲಿಂಗಕ್ಕೆ ಸಲೆ ಅವಧಾನ ಭಕ್ತಿಯು ಮೇಣ್
ಬೇಕು ಚರಲಿಂಗಕ್ಕೆಯನುಭವ
ಬೇಕು ಆನಂದವು ಪ್ರಸಾದಕೆ
ಬೇಕು ಮಾಲಿಂಗಕ್ಕೆ ಸಮರಸಭಕ್ತಿಯೆಂಬುವರು ೩೮

ನಾಸಿಕವು ಆಚಾರ ಲಿಂಗವು
ಲೇಸೆನಿಪ ಗುರುಲಿಂಗ ನಾಲಗೆ
ಸೋಸಿ ನೋಡಲು ಕಣ್ಣು ತಾ ಶಿವಲಿಂಗವಾಗಿಹುದು
ಭಾಸುರದ ಚರಲಿಂಗ ತ್ವಚವಿದು
ಈ ಸುಕರ್ಣ ಪ್ರಸಾದ ಲಿಂಗವು
ಮೀಸಲದ ಮನವಾಗಿಹುದು ಮಾಲಿಂಗವೆಂದರಿಗು ೩೯

ಕರುಣದಿಂ ಮಸ್ತಕದ ಕಳೆಯಂ
ಶಿರಕಮಲದಿಂದಿಳುಹಿ ಸಲೆ ತಾ-
ನಿರದೆ ಹೃದಯದೊಳಿರಿಸಿ ನೇತ್ರದ್ವಾರದಿಂದನು
ಕರಕೆ ಕೊಟ್ಟುಪಕೃತಿಯ ಮಾಡಿದ
ಗುರುವರನ ಚರಣಾಂಬುಜಕೆ ಸಲೆ
ಹರುಷದಿಂ ಪೊಡಮಡುವುದೈ ಭಯಭಕ್ತಿಯುತರಾಗಿ ೪೦

ಕರದೊಳೊಪ್ಪುವ ನೀಲಮಣಿಯಂ-
ತಿರುವ ಪರಶಿವಚಿಹ್ನವಾಗಿಹ
ಸುರುಚಿರದ ಲಿಂಗವನು ಅಷ್ಟವಿಧಾರ್ಚನೆಗಳಿಂದ
ವರಭಕುತಿ ಹೊರಸೂಸುತಿರೆ ಮಿಗೆ
ಚರಿಸುವುದು ಪೂಜಾದಿ ವಿಧಿಯಂ
ನೆರೆ ತ್ರಿಕಾಲದಿ ಮನದ ಮಾಲಿನ್ಯವನು ಕಳೆಯಲ್ಕೆ ೪೧

ಪರಶಿವನೆ ಮೈವೆತ್ತು ಲೀಲೆಯೊ-
ಳಿರದೆ ಧರೆಗವತರಿಸಿ ಲೋಕದ
ಪರಿಪರಿಯ ತಾಪಂಗಳಂ ಪರಿಹರಿಸಿ ಶಾಂತಿಯನು
ಕರುಣದಿಂ ನೆಲೆಗೊಳಿಸಲೋಸುಗ
ಚರಿಸುವನು ಚರನಾಗಿ ತತ್ಪದ-
ಸರಸಿಜಂಗಳಿಗಾತ್ಮ ಮನವಾರಡಿಯ ಗೈಯುವದು ೪೨

ಸಕಲ ತಾನಾಗಿರುವ ಭಕ್ತಿಗೆ
ನಿಃಕಲನು ತಾನಪ್ಪ ಜ್ಞಾನಕೆ
ಸಕಲನಿಃಕಲನಾದ ತಾ ಶಿವಯೋಗಸಾಧನೆಗೆ
ಸುಕರಮಾಗಿಹ ಲಿಂಗಮೂರ್ತಿಯು
ಚಕಿಸುತಿದೆ ಭ್ರೂಮಧ್ಯದೊಳು ದಿಟ
ಭಕುತಿಯಿಂದದ ಕಂಡು ನೀವಾನಂದಿಪ್ಪುದು ಲೇಸು ೪೩

ಬೇಕು ಕ್ರಿಯೆ ಭಕ್ತಿಯನು ಗೈವೊಡೆ
ಬೇಕು ಭಕ್ತಿಯು ಜ್ಞಾನಪಡೆವೊಡೆ
ಬೇಕು ಸತ್ಕ್ರಿಯೆಭಕ್ತಿಜ್ಞಾನಗಳೆಲ್ಲ ಶಿವನರಿಯೆ
ಬೇಕು ಪೂಜೆಯು ಇಷ್ಟಲಿಂಗಕೆ
ಬೇಕು ಅನುಸಂಧಾನ ಪ್ರಾಣಕೆ
ಬೇಕು ಭಾವಕೆ ಸಾಮರಸ್ಯವು ಲಿಂಗವಂತಂಗೆ ೪೪

ಕೊಡುವನೆಲ್ಲವ ನಿಮಗೆ ಶಿವ ತಾ–
ನೊಡವೆ ವಸ್ತುಗಳವನವೇ ನಿಜ
ದುಡಿದು ಗಳಿಸಿರಿ ಲೋಕಸೇವೆಗೆ ಸ್ವಾರ್ಥಮಂ ಬಿಡಿರಿ
ಮೃಡನು ನಿಮ್ಮಂ ರಕ್ಷಿಪನು ದಿಟ
ನಡೆಯಿರೈ ಜಂಗಮರು ನೀವಿರೆ
ತಡವದೇತಕೆ ಭಕ್ತರಕ್ಷಣೆ ನಿಮ್ಮ ಹೊಣೆಯಪ್ಪುದು ೪೫

ಕೇಳಿ ಯೋಗಿಯ ಮಾತ ವಿನಯದಿ
ಪೇಳಿದರು ನವಜಂಗಮಾರ್ಯರು
ಊಳಿಗಕೆ ನಾವಿಂದೆ ಗಡ ಸಲೆ ಸಿದ್ಧರೈ ತಂದೆ
ಬಾಳು ಲೇಸಾಳಾಗಿ ದುಡಿವುದು
ಬಾಳು ಭೂಷಣ ಲೋಕಸೇವೆಗೆ
ಹಾಳು ಸನ್ಯಾಸದೊಳಗೇನಿದೆ ಸೇವೆ ಮಿಗಿಲೆನುತೆ ೪೬

## ಶ್ರೀಶೈಲ

ಬೂದಿಯೋಗಿಯು ಬಿಟ್ಟು ಉಳುವೆಯ
ಪೋದನೈ ಶ್ರೀಶೈಲಕ್ಷೇತ್ರಕೆ
ಮೋದದಿಂದಲ್ಲಮನು ಸಿದ್ಧೇಶ್ವರನು ಮಾದೇವಿ
ಪೋದ ತಾಣವದೆಂದು ಭಾವಿಸಿ
ನಾದ ಬಿಂದುಕಲಾಪ್ರಭಾನ್ವಿತ-
ನಾದರದಿ ಜಪತಪವನುಷ್ಠಾನವನು ಚರಿಸಲ್ಕೆ ೪೭

ಘೋರ ಕಾನನವಲ್ಲಿ ನೆಲಸಿದೆ
ಕ್ರೂರಮೃಗಗಳು ವಾಸಮಾಡಿವೆ
ತೋರ ತರುಲತೆಯಿಡಿಕಿಗಿದು ಗಾಢಾಂಧಕಾರವದು
ತೋರುತಿದೆ ಬನದಲ್ಲಿ ಎಲ್ಲೆಡೆ
ವೀರರಾದ ಕಿರಾತರಲ್ಲಿಯೆ
ಸೇರಿಹರು ಗುಡಿಸಿಲೊಳು ಹೆಂಡಿರುಮಕ್ಕಳೊಡಗೂಡಿ ೪೮

ಕರಡಿ ಹುಲಿ ಚಿರತೆಗಳು ಸಿಂಹಗ-
ಳಿರುತಿಹವು ಗವಿಗಳೊಳು ಪಗಲೊಳು
ಇರಳು ಸಂಚರಿಸುವವು ಬೇಂಟೆಯನರಸುತಲ್ಲಲ್ಲಿ
ನೆರೆ ಭಯಂಕರ ಸಿಂಹಗರ್ಜನೆ
ಭರದಿ ಕಿವಿಯೋಳ್ಬೀಳಲಾಕ್ಷಣ
ಕರಿ ಚಿಗರಿ ಸಾರಂಗಗಳ್ ದಿಕ್ಕೆಟ್ಟು ಓಡುವವು ೪೯

ಅಲ್ಲಿಗಲ್ಲಿಗೆ ಬಿದಿರಮೆಳೆಗಳು
ಅಲ್ಲಿಗಲ್ಲಿಗೆ ಪೂಗೊಳಂಗಳು
ಅಲ್ಲಿಗಲ್ಲಿಗೆ ಬಾಳೆ ತೆಂಗಿನ ಬನಗಳೊಪ್ಪುವವು
ಸಲ್ಲಲಿತ ಕೃಷ್ಣಾನದಿಯು ತಾ-
ನಲ್ಲಿ ಪರಿದಿದೆ ಕೊರೆದು ಗುಡ್ಡವ-
ನಲ್ಲಿ ಸಲೆ ಪಾತಾಳಗಂಗೆಯುಂಯೆಂಬಪೆಸರ್ವಡೆದು ೫೦

ತಿಳಿಗೊಳದಿ ರಾಜಿಸುವ ತಾವರೆ–
ಗಳೊಳು ಮಂಜುಳನಾದ ಗೈಯುವ
ಅಳಿಕುಲವು ರಂಜಿಪುದು ನೋಳ್ಪರ ಕಂಗಳಂ ತಣಿಸಿ
ಬಳಿಯೆ ತೀರದ ವೃಕ್ಷದೊಳ್ಸಲೆ
ಕೊಳನ ಸೊಬಗನ್ನಿಂಟಿ ಪಾಡುವ
ಎಳೆವರೆಸು ಶುಕಕೋಕಿಲಂಗಳು ಕಂಗೊಳಿಸುತಿಹವು ೫೧

ಬಕುಲ ಚಂಪಕ ಜಾಜಿ ಮಲ್ಲಿಗೆ
ವಿಕಸಿತಾಬ್ಜ ಗುಲಾಬಿ ಪಾಟಲಿ
ಮುಕುಲಿತಾಶೋಕಂ ಸುರಭಿ ಸುರಹೊನ್ನೆ ದಾಸಾಳ
ಚಕಿಪ ಸೇವಂತಿಗೆಯು ಕುಂದವು
ವಿಕಚ ಕಣಗಿಲೆ ಪಾರಿಜಾತದ
ನಿಕರ ಮೇಣ್ಮಂದಾರ ಪುಷ್ಪಗಳಲ್ಲಿ ರಂಜಿಸುಗು ೫೨

ಚೆಂದ ಪೂಗಳು ಕಂಪ ಬೀರಿವೆ
ಮಂದಮಾರುತ ತಂಪ ಸಾರಿದೆ
ನಂದನವನದ ಸೊಂಪು ಸಾರ್ದ್ದೆಸೆಯಲ್ಲಿ ಪರಿದಿದೆಲಾ
ಸುಂದರದ ಶ್ರೀಶೈಲಕೊಳ್ಳದ
ಅಂದಮಂ ನೋಡಲ್ಕೆ ಪ್ರೇಕ್ಷಕ–
ವೃಂದ ತಾಂ ಬರುತಿರ್ಪುದಲ್ಲಿಗೆ ಮೋದವೊಂದಲ್ಕೆ ೫೩

ಅಲ್ಲಿ ಕಣ್ಣಿಗೆ ಕಾಣುತಿರ್ಪುದು
ಮಲ್ಲಿಕಾರ್ಜುನ ಗುಡಿಯ ಶಿಖರವು
ಅಲ್ಲಿ ಭ್ರಮರಾಂಬೆಯ ಪ್ರಭಾಯುತ ಮೂರ್ತಿರಂಜಿಪುದು
ಅಲ್ಲಿ ಪೂನಂದಿಯ ಸರೋವರ–
ವಲ್ಲಿ ಜ್ಯೋತಿರ್ಲಿಂಗದರ್ಶನ–
ವಲ್ಲಿ ಯಾತ್ರಿಕವೃಂದ ಶೋಭಿಸುತಿಹುದು ಕಣ್ದಣಿಯೆ ೫೪

ಅದುವೆ ಕದಳಿಯು ಬನವು ಯೋಗಿಯು
ಪದುಳದಿಂ ಸಾರಿರ್ದ ತಾಣವು
ಅದಕೆ ಕದಳಿಯು ಬನವದೇಕೆನ್ನುವರು ಪೂರ್ವಜರು
ಇದರ ವಾಚ್ಯಾರ್ಥವದು ತಿಳಿವೊಡೆ
ಇದರ ಲಕ್ಷ್ಯಾರ್ಥವದು ಹೊಳೆವೊಡೆ
ಹೃದಯ ತುಂಬಿದ ಭಕ್ತಿಯನುಭವ ಬೇಕೆನುತೆ ಯೋಗಿ ೫೫

ಕದಳಿಶಬ್ದ ರಹಸ್ಯವುಂ ತಾ
ಮುದದಿ ತಿಳಿಯಲ್ಕೆಂದು ಜವದಿಂ
ಬದಿಯೆ ಬಿಲ್ವದ ತರುವಿನಡಿಯೊಳ್ಕುಳಿತು ಯೋಚಿಸಿದ
ಕದಳಿಯೆಂಬುದು ತರುವಿಶೇಷವು
ಕದಳಿಯೆಂಬುದು ಕಾನನವು ಸೈ
ಕದಳಿಯೇ ಶ್ರೀಶೈಲನಾಥನ ಕವಚವಾಗಿಹುದು ೫೬

ಕದಳಿಯೇ ಕೈಲಾಸವೆಂಬರು
ಕದಳಿಯೇ ಸುಕ್ಷೇತ್ರವೆಂಬರು
ಕದಳಿಯೇ ಮೋಕ್ಷಾರ್ಥಿಗಳ ಪರಧಾಮವೆಂಬುವರು
ಕದಳಿಯೇ ಮಾನವಶರೀರವು
ಕದಳಿಯೇ ಭವಶರಧಿಯೆಂಬರು
ಕದಳಿ ಶಬ್ದಕ್ಕಿಂತನೇಕಾರ್ಥಂಗಳಿಹವಲ್ಲಿ ೫೭

ಇಂತೆಸೆವ ಕದಳೀಬನದಿ ತಾ—
ನಂತು ಸಿದ್ಧರ ಸಂಗದೊಳ್ಸಲೆ
ಸಂತಸದಿ ಬೂದೀಶ್ವರನು ಜಪತಪವನೆಸಗಿದನು
ಕಂತುಹರಸ್ಮರಣದೊಳು ಮುಂದಿನ
ಹಂತವನ್ನಣಿಗೊಳಿಸಿ ಕಜ್ಜದ
ಚಿಂತೆಯಿಲ್ಲದೆ ಸಾಗಿರಲು ಮುಂದಕ್ಕೆ ಶಿವಯೋಗಿ ೫೮

ಯೋಗಿ ಬೂದೀಶ್ವರನು ನಡೆದಿರು-
ವಾಗ ಬಂದನದೋರ್ವ ಜಂಗಮ
ಬಾಗಿ ನಮಿಸಿದನಾತನಡಿದಾವರೆಗೆ ಬೂದೀಶ
ಆಗ ಕಣ್ಮುಂದಿರ್ದ ಮೂರ್ತಿಯು
ಯೋಗಿ ಪ್ರಭುವಲ್ಲಮನೆಯೆನ್ನುತೆ
ಬೇಗದಿಂ ಸಂಭ್ರಮದ ಪದಪೂಜೆಯನು ಗೈದಿದನು ೫೯

ಶ್ರೀಗುರು ಪ್ರಭುದೇವ ಶ್ರೀಶಿವ-
ಯೋಗಮಾರ್ಗವನರುಹಿ ಬೂದಿಗೆ
ರಾಗದಿಂತಾನಾಚರಿಸಲಾಣತಿಯನಿತ್ತವಗೆ
ತ್ಯಾಗಭೋಗಸಮನ್ವಯವ ಸಲೆ
ಯೋಗಿವರ್ಯಗೆ ತಿಳುಹಿ ಕಾಯಕ-
ಯೋಗವೇ ಸರ್ವೋತ್ತಮವು ನಿಜವೆಂಬುದನು ಬೆಸಸಿ ೬೦

ಮೂಲತತ್ತ್ವಾಧಾರದಿಂದಲಿ
ಮೇಲೆಯೆದ್ದಾಚಾರದೊಳ್ನೆರೆ
ಕಾಲಗತಿಯನು ನೂಕಿ ಲಿಂಗಪ್ರಾಣಿಯಾಗಿರ್ದು
ಶೀಲತನಮಂ ಬೆಳಗಿ ಸತತ ವಿ-
ಶಾಲ ಷಟ್‌ಸ್ಥಲಪದವಿಭವದೊಳು
ಲೋಲನಾಗಿರುಯೆಂದು ಬೋಧಿಸಿ ಕರುಣದಿಂ ನೋಡಿ ೬೧

ಪರಮ ಸಾತ್ವಿಕ ಕೋಮಲಾಂತಃ
ಕರಣ ನಿರ್ಮಲಹೃದಯನನುಪಮ
ಶರಣ ಗುಣಮಣಿ ಜಂಗಮಾರ್ಯನು ತಬ್ಬಿ ಬೂದಿಯನು
ಪರಮ ಯೋಗದ ಬಲವನಾತಗೆ
ಹರುಷದಿಂ ನೆರೆ ನೀಡಿ ಪ್ರಭುವರ-
ನರೆ ನಿಮಿಷದಾ ತಾಣದಿಂ ಸಲೆ ಮಾಯವಾಗಿಹನು ೬೨

ಗುರುವರೇಣ್ಯನು ಬಂದು ದರ್ಶನ–
ವಿರದೆ ಕೊಟ್ಟುದರಿಂದಲಾತನ
ಸ್ಮರಣೆಗಲ್ಲಿಯೆ ಪ್ರಭುವಿನಾ ಗದ್ದುಗೆಯ ಸಲೆ ರಚಿಸಿ
ಚರವರೇಣ್ಯನು ಬೂದಿಯೋಗಿಯು
ಚರಿಸಿ ಶಿವಯೋಗವನು ಸಹಜದಿ
ಚಿರಸುಖದಿ ಕಾಲವನು ಕಳೆದನು ಶಾಂತಿಯೊಡಗೂಡಿ ೬೩

ಯೋಗಿ ತಾ ಶ್ರೀಗಿರಿಯ ಕೊಳ್ಳದಿ
ರಾಗದಿಂ ತಪಗೈದ ತಾಣದಿ
ಈಗಲೂ ನೆಲಸಿರ್ಪುದೊಂದು ವಿಭೂತಿಮಠ ನೋಡಾ
ಪೋಗಿ ದರ್ಶನಪೊಂದಿ ಮಠಕನು–
ರಾಗದಿಂ ಯಾತ್ರಿಕರು ತಮ್ಮಯ
ರೋಗರುಜಿನಾದಿಗಳ ಬಾಧೆಯ ನೀಗಿಕೊಳ್ಳುವರು ೬೪

ಬಸವನೆಂಬುದು ವ್ಯಕ್ತಿಯಲ್ಲವು
ಬಸವನೆಂಬುದು ತತ್ತ್ವವೈ ನಿಜ
ಬಸವತತ್ತ್ವವು ಜಗಕೆ ಶಕ್ತಿಯ ಉಗಮವಾಗಿಹುದು
ಬಸವನಿಂದೇ ಜಗಕೆ ಶಾಂತಿಯು
ಬಸವನಿಂದೇ ಸೊಗವು ಲೋಕಕೆ
ಬಸವತತ್ತ್ವವನರಿದು ಆಚರಿಸಿದನು ಬೂದೀಶ ೬೫

**ಅಂತು ಮೂರನೆಯಸಂಧಿಗೆ ೨೩೬ ಪದ್ಯಕ್ಕೆ ಮಂಗಲಮಸ್ತು**

**— ಭದ್ರಂ ಶುಭಂ ಮಂಗಲಂ—-**

ಶ್ರೀಗುರುಬಸವಲಿಂಗಾಯ ನಮಃ

# ನಾಲ್ಕನೆಯ ಸಂಧಿ

## ಗೊಬ್ಬೂರು

ಸೂಚನೆ:– ಬೂದಿಯೋಗಿಯ ಲೀಲೆಗಳು ಸಲೆ
ಮೇದಿನಿಗೆ ಬಹು ಸೋಜಿಗವು ದಿಟ
ಸಾದರದಿ ಸದ್ಭಕ್ತಿಸನ್ಮಾರ್ಗವನೆತೋರುವವು

ತೊರೆದು ಶ್ರೀಶೈಲವನು ಯೋಗಿಯು
ತೆರಳಿದನು ಸಂಚಾರಕ್ರಮದಿಂ
ಧರೆಯ ಜೀವರ ಪಾವನಂಗೊಳಿಸಲ್ಕೆ ಸ್ಫೂರ್ತಿಯಲಿ
ಬರುತ ಗೊಬ್ಬೂರೆಂಬ ಗ್ರಾಮಕೆ
ನೆರೆ ಭಕುತರಾಶ್ರಯದೊಳಲ್ಲಿಯೆ
ವಿರಚಿಸಿದ ಬೂದೀಬಸವಮಂದಿರವನೊಂದನ್ನು ೧

ಜನರು ಭಕ್ತಿಯೊಳೊಂದು ತೇರ–
ನ್ನನುಗೊಳಿಸಿದರು ಬೂದಿಬಸವಗೆ
ಅನುನಯದಿ ಬಸವೇಶಯಾತ್ರೋತ್ಸವವನೆಸಗಲ್ಕೆ
ಮನಸಿನಿಂ ಗ್ರಾಮದ ಜನಂಗಳು
ಕನಕಕಲಶವನಿರಿಸಿ ತೇರೆಳೆ–
ವನಿತರೋಳ್ ದುರದೃಷ್ಟ ಬಂದೆಡೆಗೊಂಡಿಹುದು ನೋಡಾ ೨



ಬೂದೀಮಹಾಸ್ವಾಮಿಗಳವರ ಗದ್ದುಗೆಯ ಕಟ್ಟಡ

ಸೆಟ್ಟಿಗೌಡರ ನಡುವೆ ತೇರಿನ
ಅಟ್ಟಹಾಸದ ಪ್ರಥಮ ಪೂಜೆಗೆ
ಹುಟ್ಟಿಕೊಂಡಿಹ ಕದನ ಮೊದಲೊಳು ಬೆಳೆದು ನಿಂತಿಹುದು
ಕೆಟ್ಟ ಜನರಿಬ್ಬಣವ ನಿರ್ಮಿಸಿ
ಕಟ್ಟಿಕೊಂಡರು ವೈರಮಂ ಗಡ
ದುಷ್ಟರಾ ಬೂದೀಶನಂ ಮನದಲ್ಲಿ ಗಣಿಸದಲೆ ೩

ಇಬ್ಬಣದ ತುರುಸಿನಲಿ ಗ್ರಾಮವು
ಜಬ್ಬೆಯಾಯಿತು ಕುನಸು ಮುನಿಸಿಂ-
ದೊಬ್ಬರೊಬ್ಬರು ಜಗಳ ಹೋರಾಟಕ್ಕೆ ನಿಂದಿಹರು
ಮುಬ್ಬು ಜನಗಳು ಹಳ್ಳಿಪಳ್ಳಿಯೊ-
ಳಬ್ಬರದ ಪಕ್ಷಾಭಿಮಾನದೊ-
ಳುಬ್ಬಿ ಕೊಲೆಸುಲಿಗೆಗಳಗೈದು ವಿನಾಶವಾಗುವರು ೪

ನಾನು ಗೌಡನು ನಾನು ಸೆಟ್ಟಿಯು
ನಾನು ಮೊದಲಿಗೆ ತೇರ ಪೂಜಿಪ
ಮಾನಮನ್ನಣೆಯುಂಟೆನಗೆ ಬಹುಕಾಲದಿಂದೆಂದು
ಹೀನಮನದಿಂ ವಾದಿಸುತೆ ತಾ-
ವೇನ ಯೋಗಿಯ ಕೇಳದಿರುತಿರೆ
ತಾನೆ ತನ್ನಷ್ಟಕ್ಕೆ ನಿಂತಿತು ತೇರು ತಂಟೆಯಲಿ ೫

ಯೋಗಿಕಿವಿಗೀ ವಾರ್ತೆ ಮುಟ್ಟಲು
ಸಾಗಿ ಸುಮ್ಮನೆ ಬಂದು ತೇರನು
ರಾಗದಿಂ ಸಲೆ ಪೂಜೆಗೈದನು ಕಾಯಿಯನ್ನೊಡೆದ
ಬೇಗದಿಂದಾರತಿಗಳೊಂದಿಗೆ
ನಾಗವೇಣಿಯರನ್ನು ಕರೆಯಿಸಿ
ಸಾಗಗೊಳಿಸಲು ತೇರು ಮುಂದಕೆ ತಾನೆ ನಡೆದಿಹುದು ೬

ಕರಮುಗಿದು ಶಿರಬಾಗಿ ಭಕ್ತರು
ಗುರುವೆ ತಪ್ಪಾಯ್ತೆಮ್ಮ ಕ್ಷಮಿಪುದು
ಅರುಹ ನೀಡಿದೆ ಗರ್ವದಿಂ ಬೀಗಿರ್ದ ನಮಗೆಲ್ಲ
ಬರಿಸುವೆವು ಸಾವ್ ಸೆಟ್ಟಿಗೌಡರ
ಕರುಣಿಪುದು ನಮಗಿನ್ನು ತಂದೆಯೆ
ಬರಿದೆ ಕೆಟ್ಟೆವು ತಮ್ಮನೆನಿತುಂ ಲೆಕ್ಕಿಸದೆ ನಾವು ೭

ಎನುತಿರಲ್ಕಷ್ಟರೊಳು ಬಂದರು
ವಿನತರಾಗಿಯೆ ಸೆಟ್ಟಿಗೌಡರು
ವಿನುತ ಬೂದೀಶ್ವರಗೆ ಶಿರಸಾಷ್ಟಾಂಗವೆಸಗಿದರು
ವಿನಯದಿಂದೊಪ್ಪಿದರು ತಪ್ಪನು
ಮುನಿಗಳೆಮ್ಮಪರಾಧಮನ್ನಿಸಿ
ಸನುಮತದಿ ಸುರಕ್ಷಿಪುದುಯೆಂದಡಿಗೆ ಪೇಳಿದರು ೮

ಕ್ಷಮಿಸು ನಮ್ಮಯ ತಪ್ಪ ತಂದೆಯೆ
ಅಮಮ ! ನಮ್ಮಯ ಸೊಕ್ಕದೆಷ್ಟೈ !
ಸುಮನದಿಂ ತವ ಸೇವೆಗೈಯದೆ ಕೆಟ್ಟೆವಾಪಕಟಾ !
ತಮಗೆ ತೊಂದರೆ ನೀಡಿದೆವು ಹಾಯ್ !
ನಮಗೆ ಶೀಘ್ರದಿ ಬುದ್ಧಿಗಲಿಸಿದೆ
ವಿಮಲಮಾನಸದಿಂದೆ ನಡಕೊಳ್ಳುವೆವು ನಾವಿನ್ನು ೯

ಎಂದೊಡನೆಯವರನ್ನು ಮನ್ನಿಸಿ
ನಂದದಿಂ ಹರಸಿದನು ಯೋಗಿಯು
ಚೆಂದದಿಂದೂರವರು ಪ್ರೇಮೈಕ್ಯದೊಳು ನಡೆಯುವುದು
ಮಂದಮತಿಗಳ ಹಾಗೆ ಚರಿಸದೆ
ಮುಂದೆ ಸದ್ಭಕ್ತಿಯೊಳು ಸ್ವಾಮಿಯ
ಮುಂದೆ ಪೇಳಿದ ತೆರದಿ ಚರಿಸಿರಿ ಶಿವನ ಕೃಪೆಯಕ್ಕು ೧೦

ಶಿವನ ಕಾರ್ಯಕೆ ತುರಸುಯೇತಕೆ ?
ನೆರೆದು ಸರ್ವರು ಒಂದೆ ಮನದಿಂ
ಜರಗಿಪುದು ತತ್ಕಾರ್ಯಮಂ ಸುವಿನೀತಭಾವದಲಿ
ಸರಿಸಮಾನರು ಸರ್ವಭಕ್ತರು
ಹಿರಿದುಕಿರಿದೆಂಬೀ ಪ್ರವೃತ್ತಿಯ
ತೊರೆದು ಕಿಂಕರಭಾವದಿಂ ಸೇವೆಯನು ಗೈಯುವುದು ೧೧

ಜಗದೊಳಗೆ ಬಹು ಕ್ಷುದ್ರ ಕಾರಣ
ಮಿಗೆಯನರ್ಥವ ಗೈಯುತಿರ್ಪುದು
ಬಗೆಯೆ ಕಂಟಕಪ್ರಾಯವಪ್ಪುದು ನಿಮ್ಮ ಸಂಸಾರ
ಸೊಗಸಿನಿಂ ಹಿತವಾಗಿ ಬಾಳ್ವುದ–
ನಗಜೆಯಾಣ್ಮನು ಮೆಚ್ಚುವನು ದಿಟ
ಸೊಗದಿ ನಿಮ್ಮೂರನ್ನು ಕೈಲಾಸವನು ಮಾಡಿರೆಲಾ ೧೨

ಹೀಗೆ ನುಡಿದಾ ಯೋಗಿವರ್ಯನು
ಸಾಗಿದನು ಸಂಚಾರಕ್ರಮದಿಂ
ಬೇಗ ಬೇರೊಂದೂರ್ಗೆ ಜಂಗಮಕಾರ್ಯವೆಸಗಲ್ಕೆ
ಆಗಿನಿಂ ಗೊಬ್ಬೂರ ಜನಗಳು
ಯೋಗಿ ಪೇಳಿದ ತೆರದಿ ತಮ್ಮೊಳು
ಸಾಗಿ ಬಂದಿಹ ವೈರಮಂ ತೊರೆದೈಕ್ಯದಿಂದಿಹರು ೧೩

### ಗೊಣ್ಣಾಗರ

ಇರುತಿಹುದು ಗೊಣ್ಣಾಗರೆಂಬುವ
ಕೊರತೆಯಿಲ್ಲದ ಚಿಕ್ಕಗ್ರಾಮದಿ
ವರಧನಿಕ ಮಾಲಿಂಗಸೆಟ್ಟಿಯ ಭವ್ಯಮಂದಿರವು
ಹಿರಿಯ ಬ್ರಹ್ಮಪಿಶಾಚಿಯೊಂದುಂ
ಇರುತಲಾ ಮನೆಯಲ್ಲಿ ವಾಸಿಸು–
ವರನು ನಡುರಾತ್ರಿಯಲಿ ಕೊಲ್ವುದು ನಿರ್ದಯದಿ ಶಿವನೇ ! ೧೪

ಸೆಟ್ಟಿಯಾ ಮನೆಮಕ್ಕಳೀರ್ವರ
ದುಷ್ಟನಾದಾ ಬ್ರಹ್ಮರಾಕ್ಷಸ
ಹೊಟ್ಟೆಯಲಿ ತಾ ಹಾಕಿಕೊಳ್ಳಲು ಸೆಟ್ಟಿ ಮನೆಬಿಟ್ಟು
ಕಟ್ಟಕಡೆ ಬೇರೊಂದು ಮನೆಯಲಿ
ನೆಟ್ಟನೇ ಸಂಸಾರಗೈದನು
ಎಷ್ಟೊ ಮಾಂತ್ರಿಕ ತಾಂತ್ರಿಕರಿಗದು ಮಣಿಯದಂತಿರಲು ೧೫

ಬಿಡದೆ ಮನೆಯಂ ಗಟ್ಟಿಯಾಗಿಯೆ
ಹಿಡಿದುದಾ ತಾಣದಲಿ ಬರ್ಪರ
ಬಡಿದು ಕೊಲ್ಲುವುದದಕೆ ಪ್ರೀತಿಯು ಮಧ್ಯರಾತ್ರಿಯಲಿ
ಬಡವಬಲ್ಲಿದರಾರೆಯಾಗಲಿ
ನಡೆದು ಬಂದೀ ಮನೆಯ ಹೊಕ್ಕೊಡೆ
ಜಡ ಶರೀರಗಳಲ್ಲಿ ಮರುದಿನ ಬೀಳ್ವವಸುಹಾರಿ ೧೬

ಬಲಿಗಳಿತ್ತನು ಬೊಮ್ಮರಕ್ಕಸ–
ನೊಲೆಯಲೆಂದಾ ಮನೆಯ ಸೆಟ್ಟಿಯು
ಛಲದಿ ಮಾಂತ್ರಿಕರಿಂದೆ ಮಂತ್ರೋಚ್ಚಾರ ಮಾಡಿಸಿದ
ನಲಿನಲಿದು ನಗುನಗುತೆ ರಾಕ್ಷಸ
ಬಲು ವಿನೋದದಿ ಮಂತ್ರಗಾರನ
ತಲೆಯ ಕೊಡಹುತೆ ಕೇಕೆ ಹಾಕುತೆ ಹಾಡಿ ಕುಣಿಯುವದು ೧೭

ಒಮ್ಮೆ ಗೋಣ್ಣಾಗರಕೆ ಯೋಗಿಯು
ಸುಮ್ಮನದಿ ಬಂದಿರಲು ಠಕ್ಕರು
ಸುಮ್ಮನಾತನನಾ ಮನೆಯೊಳಿರಿಸಿದರು ಯುಕ್ತಿಯಲಿ
ತಮ್ಮ ಸೇವಕರಂದು ಶ್ರೀಗಳು
ಹಮ್ಮಿ ಬೇರೊಂದೆಡೆಗೆ ಕಳುಹಿಸಿ
ಒಮ್ಮನದಿ ಶಿವನನ್ನು ಧ್ಯಾನಿಸುತಲ್ಲಿ ಮಲಗಿದರು ೧೮

ಬಂದುದಲ್ಲಿಗೆ ಬೊಮ್ಮರಕ್ಕಸ-
ವಂದು ನಡುರಾತ್ರಿಯಲಿ ಸ್ವಾಮಿಯ
ಮುಂದೆ ನಗುತಲಿ ಚೇಷ್ಟೆಯಾಡುತ ನಿಂದಿರಲು ಕೇಳಿ
ನಂದ ಮೂರುತಿಗೆಚ್ಚರಾಗಲು
ಸಂದ ದೃಷ್ಟಿಯು ಬ್ರಹ್ಮರಾಕ್ಷಸ-
ನಂದ ದೇಹದ ಮೇಲೆ ಬೀಳಲು ಭಯದಿ ಕಂಪಿಸುತ ೧೯

ಬಿದ್ದಿತಾತನ ಪಾದದೆಡೆಯಲಿ
ಹೊದ್ದ ರಾಕ್ಷಸವೃತ್ತಿ ತೊಲಗಿತು
ಎದ್ದು ಯೋಗಿಯ ಪದಕೆ ಶಿರಸಾಷ್ಟಾಂಗವನ್ನೆಸಗಿ
ಬುದ್ಧಿ, ತಪ್ಪಾಯ್ತೆನ್ನ ಕ್ಷಮಿಸಿರಿ
ಉದ್ಧರಿಸಿರೆನ್ನನ್ನು ಸಲೆ ನೀ-
ವಿದ್ದ ಮನೆಯೊಳು ನಾನಿರೆನು ಗಡ ಹೊರಟೆನೆಂದೆನಲು ೨೦

ಹೋಗಬೇಡೆಲೆ ಮಾಯೆಯಿಂ ನೀ-
ನೀಗ ಹೊರಡಲು ಬೇಕು ನಿನ್ನಯ
ರಾಗರಂಜಿತ ಲಲಿತ ರೂಪವ ತೊಟ್ಟು ಜನರೆದುರು
ಹೀಗೆ ನುಡಿದಾಕ್ಷಣವೆ ರಕ್ಕಸ-
ವಾಗ ಪುರಜನ ನೋಡುತಿರೆ ತಾ
ಬೇಗ ಸುಂದರ ತರುಣರೂಪದಿ ತೊಲಗಿತಾ ಗೃಹವ ೨೧

ಸಿರದಿ ಹೇಮ ಕಿರೀಟವೊಪ್ಪಿರೆ
ಮಿರುಗೆ ಕಿವಿಯೊಳು ಕರ್ಣಕುಂಡಲ
ಧರಿಸಿ ದೇಹದಿ ಶುಭ್ರ ನಿಲುವಂಗಿಯನು ಬೆರಳೊಳಗೆ
ತರತರದ ರತ್ನಂಗಳೊಂದಿದ
ಮಿರುಪ ಪೊನ್ನುಂಗರಗಳೆಸೆದಿರೆ
ಮೊರಟಿಪುದು ಸಲೆ ಪೊಳೆವ ಪೀತಾಂಬರವ ತಾನುಟ್ಟು ೨೨

ಸ್ವಾಮಿಲೀಲೆಯ ಕಂಡು ಜನ ತಾ
ಪ್ರೇಮದಿಂ ಕೊಂಡಾಡೆ ತಾಳನ
ಆ ಮಹಾಲಿಂಗಪ್ಪಸೆಟ್ಟಿಯು ಸ್ವಾಮಿಗಭಿನಮಿಸಿ
ಸ್ವಾಮಿವರ್ಯರೆ ತಮ್ಮ ಕೃಪೆಯಿಂ
ಸೀಮೆ ಬಿಟ್ಟೋಡಿಹುದು ರಾಕ್ಷಸ-
ಮೀ ಮಹಿಮೆಯನ್ನೆಂತು ಮರೆವೆವು ನಾವು ಗುರುರಾಯ ೨೩

ಇಂದು ಮನೆಯವರಿಲ್ಲಿ ಬರ್ಪೆವು
ಚೆಂದದಿಂ ಪಾಕವನು ಮಾಡುತೆ
ತಂದೆ ತಮಗಾ ಸುಪ್ರಸಾದವ ಸಲ್ಲಿಸುತೆ ನಾವು
ನಂದದಿಂ ಶೇಷಪ್ರಸಾದವ-
ನೊಂದೆ ಮನದಿಂ ಕೊಂಡು ತಣಿವೆವು
ಇಂದುಧರರೂಪಿಗಳೆ ಮನ್ನಿಸಿರೆನ್ನ ಬಿನ್ನಪವ ೨೪

ಬಂದು ಪಾಬವ ತೊಳೆದು ಪ್ರೋಕ್ಷಿಸಿ
ಚಂದದಿಂ ಮನೆಯನ್ನು ಸಾರಿಸಿ
ನಿಂದ ಯೋಗಿಯ ಪಾದಪೂಜೆಗಳಿಂದ ಸತ್ಕರಿಸಿ
ನಂದದಿಂದೆಡೆಮಾಡಿ ತಣಿಸುತೆ
ಬಂದ ಕಂಟಕ ನೀಗಿ ಹೃದಯಾ-
ನಂದದಿಂ ಕೊಂಡಾಡಿದರು ಶಿವಯೋಗಿಲೀಲೆಯನು ೨೫

## ಹಿರಿಯಮೂಲಂಗೆ

ತೊರೆದು ಗೊಣ್ಣಾಗರವ ಶ್ರೀಗಳು
ಹಿರಿಯ ಮೂಲಂಗೆಂಬ ಗ್ರಾಮಕೆ
ಬರಲು ಅಲ್ಲಿಯ ಭಕ್ತಗಣವುತ್ಸವದಿ ಸ್ವಾಗತಿಸಿ
ಚರವರೇಣ್ಯರನಿಳಿಸಿದರು ಸ-
ದ್ಗುರುಮಠದಿ ಪ್ರತಿನಿತ್ಯದೋಳ್ ಸ-
ತ್ಕರಿಪರಾತನನಾವ ಕೊರತೆಯು ಬಾರದಂದದೊಳು ೨೬

ನಿತ್ಯಮಲ್ಲಿ ಶಿವಾನುಭವಮುಂ
ಸತ್ಯ ಶರಣರ ವಚನಬೋಧೆಯು
ಸ್ತುತ್ಯ ಬೂದೀಶ್ವರನು ಭಕ್ತರಿಗೀಂಟಿಸುತ್ತಿಹನು
ಭೃತ್ಯಭಾವವನಾಂತು ಭಕ್ತರು
ಉತ್ತಮರ ಪದಸಾರ್ದು ವಿನಯದಿ
ನಿತ್ಯತೃಪ್ತನೆ ನಿನ್ನ ಸನ್ನಿಧಿಯಲ್ಲಿ ಗಣತೃಪ್ತಿ ೩೭

ಮಾಡಬೇಕೆಂದಿಚ್ಛಿಸಿರ್ಪೆವು
ಕೂಡಿಬಂದಿದೆ ಸುಪ್ರಸಂಗವು
ನಾಡೆ ನಮಗಪ್ಪಣೆಯನೀಯುವುದೆಂದು ಬಿನ್ನವಿಸೆ
ಮಾಡಿರೈ ಶಿವ ಮೆಚ್ಚುವನು ದಿಟ
ನಾಡೆ ಬಡವರ ದೀನದಲಿತರ
ಪೀಡಿತರ ಮೇಣಂಗಹೀನರ ತಣಿಸುವುದು ಲೇಸು ೩೮

ಎಂದೆನಲು ಸಂತೋಷಮಾನಸ–
ದಿಂದೆ ಸಮ್ಮತಿನೀಡೆ ಗಣತತಿ–
ಗಂದು ಪಕ್ವಾನ್ನಂಗಳಿಂದುಪಚರಿಸಿ ಪೊಬಲಲ್ಲಿ
ಮುಂದೆ ಬಡವರು ದೀನದಲಿತರು
ಬಂದು ಭೋಜನಕಾಗಿ ಕುಳಿತಿರೆ
ಸಂದದಾಯಿತು ನಡುವೆ ತಪ್ಪವು ಪ್ರಮುಖರಾತುರದಿ ೩೯

ಓಡಿ ಬಂದಾಯೋಗಿಪಾದಕೆ
ಬೇಡಿಕೊಂಡರು ಭಕ್ತಿಯಿಂದಲಿ
ನೋಡು ಗುರುವರ ತುಪ್ಪತೀರಿಹುದೇನು ಮಾಡುವುದು ?
ಕಾಡುವದು ವಿಧಿ ನಮಗೆ ಪೂಜ್ಯರೆ
ನಾಡೆ ತಟ್ಟುವುದೈ ಕಲಂಕವು
ಪಾಡ ಪರಿಹರಿಸೆಂದು ಪಾದಕೆ ವಂದಿಸಿದರಾಗ ೪೦

ಬಳಿಕ ಬೂದೀಶ್ವರನು ಭಕ್ತರ
ಕಳುಹಿ ವಿಮಲ ಮಲಾಪಹಾರಿಯು
ಜಲವ ಮೂರ್ಕೊಡ ಕಡವ ತರಲೆಂದಾಜ್ಞೆಯಿತ್ತೀಯೆ
ಕಳಕಳಿಯ ಭಾವದಲಿ ಭಕ್ತರು
ತಳುವದೈತಂದಾ ಹೊಳೆಗೆ ಸಲೆ
ತಳತಳಿಪ ಜಲವನ್ನು ಮೂರ್ಕೊಡ ತುಂಬಿ ತಂದಿಹರು ೩೧

ಕೊಡಗಳಿಗೆ ಶಿವನಾಮ ಜಪಿಸುತೆ
ತೊಡೆದು ಬೂದಿಯ ಬೂದಿಯೋಗಿಯು
ಒಡನೆ ನುಡಿದನು ಭಕ್ತರಿಗೆ ನೀವ್ ಕೊಳ್ಳಿರೀ ಮೂರು
ಕೊಡಗಳಂ ತುಪ್ಪದಲಿ ತುಂಬಿವೆ
ಕಡವ ಹೊಳೆಯಿಂ ತಂದಿಹಿರಿ ದಿಟ
ತಡವಮಾಡದೆ ಪಂಕ್ತಿಗೆಡೆ ಮಾಡಿರೆಲೆ ತುಪ್ಪವನು ೩೨

ಜಲವು ಘೃತಮಯವಾಗಿ ತೋರಿತು
ಮಲಹರನ ಕೃಪೆಯಿಂದೆ ಭಕ್ತರು
ಒಲುಮೆಯಿಂ ನೀಡಿದರು ಘೃತಮಂ ಕುಳಿತ ಜನಕೆಲ್ಲ
ಸಲಿಲಮಂ ಘೃತಗೈದ ಯೋಗಿಯ
ಬಲಕೆಯುಚ್ಚರಿವಟ್ಟು ಸರ್ವರು
ನಲವಿನಿಂದಾತನನು ಮನದೊಳು ಹಾಡಿ ಹರಸಿದರು ೩೩

ಅಸಿತರೋಳ್ಪುರವೂರ ಜನಗಳು
ಮುನಿವರನ ಸನ್ನಿಧಿಗೆ ತಂದರು
ಜನಿತ ಸ್ರಂಭ್ರಮದಿಂದ ಮೂರ್ಕೊಡ ತುಪ್ಪಮಂ ತುಂಬಿ
ವಿನಯದಿಂ ಗಣಪರ್ವಕೀ ಘೃತ-
ವನುನಯದಿ ಸ್ವೀಕರಿಸಿರೆನ್ನಲು
ಅನಘಮೂರುತಿಯಾ ಘೃತವ ಕಡಕೊಟ್ಟ ಹೊಳೆಯಲ್ಲಿ ೩೪

ಸುರುವಿ ಕಡಮಂ ತೀರಿಸುತೆ ನೀವ್
ಭರದಿ ಬಂದೆನಗದನು ಪೇಳ್ವುದು
ತ್ವರಿತದಿಂ ನೀವಿದನು ಅಲ್ಲಿಗೆ ಒಯ್ಯಿರೆಂದೆನಲು
ಗುರುಗಳಪ್ಪಣೆಯಂತೆ ಶೀಘ್ರದಿ
ಸುರಿಯೆ ತುಪ್ಪವ ನದಿಯ ನೀರೊಳು
ಬೆರೆದು ನೀರಾಗಿರ್ದುದಾ ಘೃತವಚ್ಚರಿಯ ನೋಡಾ ೧೫

ಇಂತು ಯೋಗಿಯ ಲೀಲೆಯಂ ಜನ
ಸಂತಸದೊಳೋಲಾಡಿ ಹೊಗಳುತೆ
ಚಿಂತೆಯಿಲ್ಲದೆ ಯೋಗಿಸನ್ನಿಧಿಯಲ್ಲಿ ಕಾಲವನು
ಕಂತುಹರಗೋಷ್ಠಿಯೊಳು ಕಳೆಯುತೆ
ಕಾಂತಿ ಪೊಣ್ಮುತ್ತಿರಲು ಮೊಗದೊಳು
ಶಾಂತಿಯಂ ಮನದಲ್ಲಿ ತಾಳ್ದರು ಯೋಗಿಕೃಪೆಯಿಂದ ೧೬

## ಗದ್ವಾಲ ( ಸತಿಪತಿವಿರಸ )

ಮುಂದೆ ಗದ್ವಾಲದ ಜನಂಗಳು
ಬಂದು ಸ್ವಾಮಿಯ ಪಾದಪದ್ಮಕೆ
ವಂದಿಸುತೆ ಬಹುಭಕ್ತಿಯಿಂ ನಮ್ಮೂರ್ಗೆ ದಯಮಾಡಿ
ಒಂದೆರಡು ದಿನ ಬಂದು ಸತ್ಕೃಪೆ-
ಯಿಂದೆ ದರ್ಶನವಿತ್ತು ರಕ್ಷಿಪು-
ದೆಂದು ಬಿನ್ನವಿಸಿದರು ಶಿರಸಾಷ್ಟಾಂಗವನ್ನೆಸಗಿ ೧೭

ನಿತ್ಯ ಶ್ರವಣವು ಸಾಗುತಿರ್ಪುದು
ಉತ್ತಮರು ಸಲೆ ಸೇರುತಿರ್ಪರು
ಸುತ್ತುಮುತ್ತಿನ ಗ್ರಾಮದಿಂ ಸತ್ಪುರುಷದರ್ಶನಕೆ
ಎತ್ತ ನೋಡಿದೊಡತ್ತ ದೃಷ್ಟಿಯ
ಚಿತ್ತರಿಸೆ ಬೂದೀಶಯೋಗಿಯು
ಸತ್ವಗುಣಸಂಪನ್ನರಾದರು ದೃಷ್ಟಿಪರುಷದಲಿ ೧೮

ಇದ್ದನಾವೂರಲ್ಲಿಯೋರ್ವನು
ಬುದ್ಧಿವಾನ್ ಸದ್ಗುಣಿ ಸುಶೀಲನು
ಹೊದ್ದಿರುವನು ಶಿವಪ್ಪನೆಂಬಭಿಧಾನವನ್ನಾತ
ಇದ್ದವೂರೊಳಗೊಂದು ಅಂಗಡಿ–
ಯಿದ್ದಿತಾತಗೆ ಸಾತ್ವಿಕನು ತಾ
ಶುದ್ಧ ಕಾಯಕಮಾಡಿ ಹೆಂಡತಿಯೊಡನೆ ಬಾಳಿಹನು ೩೯

ಅವನ ಮಡದಿ ಸುರೂಪಿಣಿಯು ತಾ–
ವವನೊಡನೆ ಚಂಡಿತನದಿಂ ನಡೆ–
ಯುವಳು ದುರ್ಗುಣಿ ನೀತಿಬಾಹಿರೆಯಾಗಿ ಚರಿಸುವಳು
ಅವಳ ನಡೆನುಡಿಗಾ ಶಿವಪ್ಪನು
ಶಿವಶಿವಾ ! ಧಿಗ್ವಿಧಿಯೆಯೆನ್ನುತ
ಕಿವಿಯ ಕಂಗಳ ಮುಚ್ಚಿಕೊಂಡಿಹನೇನ ಮಾಡುವುದು ೪೦

ಚೆನ್ನಮಾಂಬೆಯುಯೆಂಬ ಪೆಸರಿದೆ
ಮುನ್ನಮಾಡಿದ ಪಾಪಕರ್ಮದಿ
ಬನ್ನಬಡುತಿಹನವಳ ಪತಿ ಸತಿಸುಗವೋಷದಲಿ
ತನ್ನ ದುರ್ದೈವವನು ಜರೆವನು
ಗನ್ನಗತಕಳು ಮಾರಿ ರಕ್ಕಸಿ
ಚೆನ್ನಿ ನನ್ನಯ ಮೊಗಕೆ ಕಪ್ಪಿಟ್ಟಿಹಳು ರಣಚಂಡಿ ೪೧

ಏನು ಮಾಡುವುದೆನ್ನ ಕರ್ಮವು
ಹೀನಗುಣಸತಿ ಗಂಟುಬಿದ್ದಳು
ಮಾನಹಾನಿಯ ಪೊಂದಿ ತಲೆ ಕೆಳಗಾಗಿಹೆನು ಜನರೊಳ್
ನಾನು ಬಡೆಹೊಡೆವುದನು ಗೈದೊಡೆ
ತಾನು ರಕ್ಕಸಿಯಾಗಿ ನಿಲ್ವಳು
ಏನು ಬಾಯಿಗೆ ಬರ್ಪುದದನೇ ಬೈವಳಂಗಳದಿ ೪೨

ಶಿವಶಿವಾ ! ಧಿಕ್ಕಾರ ಜನ್ಮಕೆ
ಭವಹರಾ ನಾಕೆಟ್ಟೆನಕ್ಕಟ !
ಅವಳ ದುರ್ಗತಿಯಿಂದೆ ರಕ್ಷಿಸಲೆನ್ನಯಳವಲ್ಲ
ಭವನದಿಂ ಹೊರದೂಡಲಾಕ್ಷಣ
ತವಕದಿಂ ಮನೆಯಲ್ಲಿ ಹೊಗುವಳು
ಅವಳ ಕಾಟವ ತಾಳಲಾರೆನು ಸಲಹೊ ಮಾದೇವಾ ೪೩

ಎಂದು ಪ್ರತಿದಿನ ಹಲುಬುತಿರ್ದನು
ತಿಂದ ಕೂಳದು ಮೈಗೆ ಹತ್ತದು
ಬೆಂದ ಮನವಾತನ ಶರೀರವನಂದಗೆಡಿಸಿಹುದು
ಮಂದಿಮಕ್ಕಳು ಬಂಧುಬಳಗವು
ಬಂದು ಬುದ್ಧಿಯ ಹೇಳಿದೊಡು ತಾ–
ನೆಂದಿಗೂ ಬಿಡದಿಹಳು ತನ್ನಯ ಚಂಡಿತನವನ್ನು ೪೪

ಸುವಿನಯಾನ್ವಿತನಾತ್ಮಗೌರವ–
ಕವನು ಪಿಟ್ಟಿಂದುಸುರದೇನುಂ
ತವೆ ಮನದಿ ಕಳಕಳನೆ ಕುದಿಯುತಲಿರ್ದನನವರತ
ಭವರಹಿತ ಬೂದೀಶಯೋಗಿಯ
ಸುವಿರತಿಯ ಪ್ರಭೆ ಸುತ್ತು ನಾಡೊಳು
ಕವಿದಿಹುದ ತಾ ಕೇಳಿ ಭಾಕ್ತಿಕಭಾವ ಹೊರೆಯೇರಿ ೪೫

ಬೂದಿಯೋಗಿಯು ತನ್ನ ಗ್ರಾಮದಿ
ಪಾದವಿಟ್ಟುದನರಿದು ತಕ್ಷಣ
ಪೋದನವರೆಡೆಗಾತುರದಿ ಸಾಷ್ಟಾಂಗವಂ ನೀಡಿ
ಆದರಿಸಿ ಕೇಳೆನ್ನ ಮಾತನು
ಈ ದಿನವೆ ನೀ ತಂದೆ ಬಂದಿಹೆ
ಕಾದಲೆಯು ನನ್ನವಳು ಕರಕಟ ಕಾಡುತಿರ್ದಪಳು ೪೬

ದುರಿತೆ ದುರ್ಗುಣೆ ದುಶ್ಚರಿತ್ರಳು
ಮರುಳು ರಕ್ಕಸಿ ಕಾಡ್ವಳೆನ್ನನು
ಬರಿದೆ ಬೈಗಳ ಮಳೆಯ ಸುರಿವಳು ಕಾಲ ತಾ ಕೆದರಿ
ನರಕಯಾತನೆಯಾಗಿಹುದು ನನ–
ಗಿರದಲೀ ಸಂಸಾರ ಗುರುವರ
ಕರುಣಿಪುದು ನನ್ನಯ ಸತಿಗೆ ಸದ್ಬುದ್ಧಿಯನ್ನಿತ್ತು ೪೭

ಎಂದೆನಲು ಭವರೋಗವೈದ್ಯನು
ಬಂದ ಸೆಟ್ಟಿಯ ದುಗುಡವರಿಯುತೆ
ನೊಂದ ಮನಮಂ ಶಾಂತಗೊಳಿಸುತಲಿಂತು ಪೇಳಿದನು
ಮಂದಭಾಗ್ಯನು ನೀನು ಸೆಟ್ಟಿಯೆ
ಕುಂದು ನಿನಗೆಡೆಗೊಂಡಿಹುದು ನಿಜ
ಮುಂದೆ ಶಿವಕಾರುಣ್ಯದಿಂ ಸುಖಶಾಂತಿಯಿಂ ಬಾಳ್ವೆ ೪೮

ಚಿಂತೆಯಂ ಬಿಡು ನಾಳೆ ನಿನ್ನಯ
ಕಾಂತೆಯಂ ಕರಕೊಂಡು ಬಾರೆಲೆ
ಭ್ರಾಂತಿಯಂ ಬಿಡಿಸುವೆನವಳ ಗುಣವಂತಿಯಾಗುವಳು
ಅಂತು ಪೇಳ್ದುದ ತಾ ಶಿವಪ್ಪನು
ಸಂತಸದಿ ಕೇಳ್ದಾತುರದಿ ಸಲೆ
ಕಾಂತೆಯೆಡೆಗೈದಿಂತು ಪೇಳ್ದನು ಮಮತೆಯಿಂಗೂಡಿ ೪೯

ಕೇಳು ಕೇಳೆಲೆ ಕಾಂತೆ ನಿನಗಾಂ
ಪೇಳುವೆನು ಸದ್ವಾರ್ತೆಯೊಂದನು
ಮೇಳವಿಸಿ ಬಂದಿರ್ದನಿಲ್ಲಿಗೆ ಬೂದಿಯೋಗೀಶ
ಹೇಳುವನು ಸಂತಾನಫಲಮಂ
ಬಾಳು ಹಸನಾಗುವದು ನಿನ್ನಯ
ನಾಳೆ ನಾವವನಿದ್ದೆಡೆಗೆ ಪೋಗೋಣ ತರಳಾಕ್ಷಿ ೫೦

ಎನಲು ಪೇಳ್ದಳು ಚಂಡಿಯಾಕ್ಷಣ
ನಿನಗೆ ಮಕ್ಕಳಯಿಚ್ಛೆಯಿದ್ದರೆ
ಮುನಿಯನೇತಕೆ ಕೇಳದಿಲ್ಲಿಗೆ ಬಂದೆ ಛೀ ಮೂಳಾ
ನನಗ ಮಕ್ಕಳು ಬೇಡ ನಡೆ ನೀ
ಮುನಿಯ ನಾನೇತಕ್ಕೆ ಕಾಣಲಿ ?
ನನಗೆ ಸನ್ಯಾಸಿಗಳ ಸಂಗವು ಬೇಡವೆಷ್ಟೆಷ್ಟು ೫೧

ಕೋಮಲಾಂಗನು ಕೇಳು ಭಾಮಿನಿ
ಹೇಮವರ್ಣನು ಕಾಂತೆಯರು ಸಲೆ
ಕಾಮಿಸಲು ತಕ್ಕವನು ಚೆನ್ನಿಗನವನ ಸುತ್ತೆಲ್ಲ
ಕಾಮಿನಿಯರತಿ ಸಡಗರದಿ ಕೇಳ್
ಹೇಮಭೂಷಣ ಧರಿಸಿ ನಲಿವರು
ಕೋಮಳೆಯೆ ನೀ ಕಳೆದುಕೊಳಬೇಡೀ ಸುಸಂಧಿಯನು ೫೨

ಎಂದು ಸುಳ್ಳನು ಕುಟ್ಟಲಾಕೆಯು
ಮಂದಹಾಸದಿ ನೀಡಿ ಸಮ್ಮತಿ
ಹಿಂದುಮುಂದಾಲೋಚಿಸದೆ ಮರುದಿನವೆ ಪತಿಯೊಡನೆ
ಬಂದಳಾ ಯೋಗೀಶನಲ್ಲಿಗೆ
ಚೆಂದದಿಂದವರಡಿಗೆ ಭಯದಿಂ
ವಂದನಂಗೈದಲ್ಲಿ ನಿಂದಳು ಯೋಗಿಯೆದುರಿನಲಿ ೫೩

ಯೋಗಿದರ್ಶನದಿಂದಲಾಕೆಯ
ಭೋಗಲಾಲಸೆ ಹಿಂಗಿಹೋಯಿತು
ಮಾಗಿಹುದು ಸಲೆ ಪೂರ್ವಸುಕೃತವು ತನ್ನ ಪಾಪಕ್ಕೆ
ಆಗೆ ಪಶ್ಚಾತ್ತಾಪ ಹೃದಯದಿ
ಬೇಗ ಕಂಬನಿ ಸುರಿಯೆ ನೇತ್ರದಿ
ಯೋಗಿವರನಾ ಸುಂದರಿಗೆ ತಾನಿಂತು ನುಡಿದಿಹನು ೫೪

ತಾಯೆ ಕೇಳ್ನೀ ಮುಂದೆ ನಿನ್ನಯ
ಮಾಯೆಯಂ ಬಿಡು ಸುಗುಣಮಂ ಪಡೆ
ಕಾಯ ಭೋಗಕೆ ಮೆಚ್ಚಿ ನರಕದಿ ಬಿದ್ದು ಕೆಡಬೇಡ
ನಾಯ ಬಾಳುವೆ ಸಾಕು ಬಿಡು ಪತಿ–
ರಾಯನೊಂದಿಗೆ ಸೊಗದಿ ಸಂಸಾ–
ರಾಯತಾಕ್ಷಿಯೆ ಮಾಡಿಕೊಂಡಿರು ಶಿವನು ರಕ್ಷಿಪನು ೫೫

ಎಂದೊಡನೆ ಚಂಡಿತನವಂ ತೊರೆ
ದಂದು ಪಶ್ಚಾತ್ತಾಪದಿಂ ಸಲೆ
ಬೆಂದು ಮುಂದಿಹ ತನ್ನ ಪತಿಪಾದಕ್ಕೆ ಹಣೆಯಿಟ್ಟು
ಮುಂದೆ ತಾನೆಂದೆಂದಿಗೂ ಪತಿ–
ಯಿಂದಲಗಲದೆ ಕೂಡಿ ಸಂಸ್ಕೃತಿ-
ಯಂದದಿಂ ಸಾಗಿಸುತೆ ಮಕ್ಕಳ ಪಡೆದು ಸುಖಿಸಿದಳು ೫೬

ಪುರದ ಜನಕಾಶ್ಚರ್ಯವಾಯಿತು
ಶರಣ ಸೆಟ್ಟಿಯ ಮಡದಿ ಚಂಡಿಯು
ಪರಮ ಪತಿವ್ರತೆಯಾಗಿ ಬಾಳ್ವೆಯ ಮಾಳ್ಪುದಂ ಕಂಡು
ಶರಣ ಸದ್ಗುಣಮಣಿ ಶಿವಪ್ಪನು
ಗುರುವರರ ಮನೆಗೈದಿಸುತೆ ನೆರೆ
ಉರುತರದ ಸತ್ಕಾರದಿಂ ತಣಿಸಿದನು ಸತಿಗೂಡಿ ೫೭

ಸತಿಪತಿಗಳೊಂದಾದ ಸೇವೆಯು
ಹಿತವು ತಾನಪ್ಪುದು ಶಿವಗೆ ದಿಟ
ಮತಿಯುತಳು ನೀನಾಗಿ ಪತಿಯೊಡಗೂಡಿ ಭಕ್ತಿಯಲಿ
ಕ್ಷಿತಿಯೊಳಗೆ ನುತಿವೆತ್ತು ಬಾಳೌ
ಅತಿಹಿತದಿ ಗುರುಲಿಂಗಜಂಗಮ
ಕತುಲ ದಾಸೋಹವನು ಗೈದೊಡೆ ಗತಿಯು ನಿನಗಕ್ಕು ೫೮

ಸರಸವಾಗಲಿ ನಿನ್ನ ಬಾಳುವೆ
ವಿರಸವಾಗಲು ಬೇಡ ಮಗಳೇ
ಪರಸುಪನು ನಿನ್ನನ್ನು ಪರಶಿವ ತಾನೆ ಕೃಪೆದೋರಿ
ಬರುತಿಹವು ಒಮ್ಮೊಮ್ಮೆ ದುರ್ಗುಣ
ಸರಿಯುವವು ಮತ್ತೊಮ್ಮೆ ಶಿವಕೃಪೆ
ದೊರೆಯಲಾಕ್ಷಣ ಮರೆಯಬೇಡೀ ಮಾತ ನೀ ಮಗಳೆ ೫೯

ಹಿಂದೆ ನಮ್ಮಯ ಧರ್ಮದಲಿ ಸಲೆ
ಸಂದಿ ಹೋದರು ಶರಣೆಯರು ನಿಜ
ಅಂದಿನಂದದೊಳಿಂದಿನಾ ನಾರಿಯರು ವರ್ತಿಸಲು
ಚೆಂದ ಶರಣೆಯರಾಗದಿಹರೇಂ ?
ತಂದೆತಾಯ್ಗಳ ಮಾನ ಕಾಯೌ
ಹಿಂದಿನಾ ಶಿವಶರಣೆಯರ ಸತ್ಕೃಪೆಯು ನಿನಗಕ್ಕು ೬೦

ನೆನೆ ಮಗಳೆ ಶಿವಶರಣೆಯರ ನೀ
ಮನದೊಳಗೆ ಮಾದೇವಿಯಕ್ಕನ
ಘನತರದ ನೀಲಮ್ಮ ಲಿಂಗಮ್ಮಾದಿ ಸುಕೃತಿಗಳ
ನಿನಗೆ ಸತ್ಫಲವಕ್ಕು ಶೀಘ್ರದಿ
ತನುಮನೋಭಾವಂಗಳಂ ಸಲೆ
ಭವಸಿಗರ್ಪಿಸಿ ಗೃ ಪ್ರಪಂಚವ ನಿನಗೆ ಭಯವಿಲ್ಲ ೬೧
ಎಂದು ಬೋಧೆಯ ಮಾಡಿ ಯೋಗಿಯು

ಮುಂದೆ ಸಂಚಾರವನು ಬೆಳೆಸುತೆ
ಬಂದು ಮಾರ್ಗದಿ ಕಂಡ ಗ್ರಾಮಜನಂಗಳುದ್ಧರಿಸಿ
ಸಂದ ಶರಣರ ಭಕ್ತಿಮಾರ್ಗವ
ನಂದದಿಂ ಬಿತ್ತರಿಸಿ ಜನರೊಳು
ಹೊಂದಿದನು ಸಂತೋಷಮಂ ಮನದಲ್ಲಿ ಸುವಿರಾಗಿ ೬೨

ನಾಡೆ ಬಹುವಿಧ ಲೀಲೆಗಳ ತಾ-
ನಾಡಿ ಭಕ್ತರನುದ್ಧರಿಪ ಬಗೆ
ರೂಢಿಯೊಳ್ ಪೊಸತಲ್ಲ ಜಗದ ವಿಭೂತಿಗಳ್ ಜನರ
ಕಾಡ ಸಂಸ್ಕೃತಿ ಹುರಿದು ಪ್ರವಿಮಳ
ನಾಡಸಂಸ್ಕೃತಿ ಬೆಳೆಸಿದರು ದಿಟ
ಹಾಡಿ ಹರಿಸೋಣಾ ಮಹಿಮ ಬೂದೀಶಲೀಲೆಗಳ ೬೩

ಅಂತು ನಾಲ್ಕನೆಯ ಸಂಧಿಗೆ ೨೯೯ ಪದ್ಯಕ್ಕೆ ಮಂಗಲಮುಕ್ಕುಂ

— ಭದ್ರಂ ಶುಭಂ ಮಂಗಲಂ—-

ಶ್ರೀಗುರುಬಸವಲಿಂಗಾಯ ನಮಃ

# ಐದನೆಯ ಸಂಧಿ

## (ಕೋವಾನೂರು)

ಸೂಚನೆ:- ಬಂದು ಕೋವಾನೂರಗ್ರಾಮಕೆ
ಮುಂದೆ ನೆರೆಹಳ್ಳಿಯನು ಸಾರ್ದರು
ಚೆಂದದಿಂದಡಿಯಿಟ್ಟರಾ ಪೋತ್ನೂರ ಗ್ರಾಮದಲಿ

ಮೆರೆವ ಕೋವಾನೂರ ಗ್ರಾಮಕೆ
ಚರವರೇಣ್ಯರು ಬರುತಿರಲು ನೆರೆ
ಕರೆವ ಗೋವೊಂದೊರಲಿ ಮಾರ್ಗದಿ ಸತ್ತು ಬಿದ್ದಿಹುದು
ನೆರೆದು ಜನಸಂದೋಹವಲ್ಲಿಯೆ
ಮರಗುತಿರ್ದುದು ಗೋವಿಗಕ್ಕಟ !
ಕರುವು ಏನೊಂದರಿಯದಲೆ ಸುತ್ತಾಡುತಿರ್ದಪುದು. ೧

ಊರೊಳಿಹ ಚರಭಕ್ತಬಸವನ
ಚಾರುಗಾತ್ರದ ಶುಭ್ರವರ್ಣದ
ಸರಳಶೃಂಗದ ಗೋವು ತಾನದು ಪ್ರೇಕ್ಷಕರ ಕಣ್ಣಿಂ
ಕೋರಯಿಸುವದು ಪುಷ್ಟತನುವಿಂ
ಕ್ಷೀರವಿಸ್ತೀಯುತ್ತಲಿರ್ಪುದು
ಏರಿ ಶ್ರೀಗುರುಲಿಂಗಜಂಗಮಸೇವೆಗೆಸಪರತ ೨

ಬಸವನಾ ಗೋವನ್ನು ತಾ ಮನ-
ವೊಸೆದು ಪ್ರೀತಿಸುತಿರ್ದ ನಿತ್ಯವು
ಭಸಿತ ಕುಂಕುಮ ಗಂಧ ಪುಷ್ಪಗಳಿಂದಲವನ ಸತಿ
ಹಸಿತಮುಖಿ ಗೋಪೂಜೆಗೈವಳು
ಮುಸುಗೆ ಮೋಡವು ಮುಗಿಲನೆಲ್ಲವ
ಬಿಸಿಲು ಕಳೆಗುಂದ್ವಂತೆ ಕಳೆಗುಂದಿಹರು ಮನೆಯವರು ೩

ಆವ ರೋಗವು ಬಂದಿತೋ ಶಿವ
ಆವ ಕರ್ಮವು ಕವಿಯಿತೋ ಹಾಯ್ !
ಆವ ಪಾಪವ ಗೈದಿತೋ ಕರು ಪೂರ್ವಜನ್ಮದಲಿ
ಆವ ವಿಧಿ ಕಾಡಿತ್ತೊ ಬಸವಗೆ
ಆವು ಶಿವ! ಶಿವ ! ಸತ್ತು ಹೋಯಿತು
ಕಾವರಾರ್ ತಬ್ಬಲಿಯ ಕರುವನು ನೋಡು ವಿಧಿಲಿಖಿತ ೪

ಇತ್ತಲೋರ್ವನನೆತ್ತಿ ಕಟ್ಟುವ-
ದತ್ತಲೋರ್ವನ ಮೆಟ್ಟಿ ತುಳಿವುದು
ಮತ್ತೆ ಕೆಲವರಿಗಿತ್ತು ಹರ್ಷವ ಬೇರೆ ಕೆಲವರಿಗೆ
ಇತ್ತು ದುಃಖಾಶ್ರುಗಳ ತಾ ವಿಧಿ
ಸುತ್ತುಸುಳಿವುದು ಧಾತ್ರಿಯೋಳ್ಗಾ-
ನುತ್ತಮಾಧಮಮಧ್ಯಮರ ಬಲಿಗೊಳ್ಳುತಲಿ ನಿತ್ಯ ೫

ಕರುವಿನಾ ಗೋಳನ್ನು ನೋಡುತ-
ನೆರೆದ ನಾರಿಯರತ್ತುಬಿಟ್ಟರು
ಹರಹರಾ ! ನೀನೆಂಥ ಕಾಲವ ತಂದೆಯೋ ಎನುತ
ಕರುವು ಅಂಬಾಯೆಂದು ಒರಲುತ
ಸ್ಮರಿಸಿ ತಾಯ್ಮೊಲೆಗೆಳಸುತಿರ್ದುದು
ಕರಗಿತೆಲ್ಲರ ಹೃದಯ ಕರುಣಾಜನಕದೃಶ್ಯದಲಿ ೬

ದಾರಿಯೊಳಗೀ ಘಟನೆ ನಡೆದಿರೆ
ಸಾರಿದನು ಶಿವಯೋಗಿಯಲ್ಲಿಗೆ
ಏರಿ ಕಳವಳದಿಂದ ವಂದಿಸಿ ಜನರು ಪೇಳಿದರು
ಮಾರಮರ್ದನಕೃಪೆಯು ತಪ್ಪಿರೆ
ಯಾರು ಮಾಡುವುದೇನು ಪ್ರಭುವರ
ಸೂರೆಗೊಂಡಂತಾಯ್ತು ಕೋವಾನೂರಿನೈಸಿರಿಯು ೭

ಎಂದೆನಲು ಜನವೃಂದ ಯೋಗಿಯು
ನಿಂದ ಜನರಂ ನೋಡಿ ಮೆಲ್ಲನೆ
ತಂದ ಜೋಳಿಗೆಯಿಂದ ಭಸ್ಮವ ತೆಗೆದು ಮಂತ್ರಿಸುತ
ಚಂದದಿಂದಗ ತೊಡೆಯೆ ಹಸುವಿಗೆ
ಬಂದ ಮೃತ್ಯುವು ತೊಲಗಿ ಹೋಯಿತು
ನಿಂದುದಾಕಳು ನಿದ್ರೆಯಿಂದೆಚ್ಚತ್ತ ತೆರನಂತೆ ೮

ಕರುವಿನಾ ಮೈನೆಕ್ಕುತಿರ್ದುದು
ತೊರೆದು ಮೊಲೆವಾಲನ್ನು ಎಳೆಗರು
ಜುರುಜುರನೆ ಹೀರುತ್ತ ನಲಿದಾಡುತ್ತ ನೆಗೆದಿಹುದು
ಪುರದ ಜನರಾಶ್ಚರ್ಯಬಟ್ಟರು
ಚರವರನ ಮಹಿಮಾತಿಶಯದಿಂ
ಹರುಷಬಟ್ಟರು ತಾಯಿಮಗುವಿನ ಕೂಟಮಂ ಕಂಡು ೯

ಹರನ ರೂಪರಿಗಾವುದಸದಳ
ಪರುಷಮೂರ್ತಿಗಳವರು ನಿಜದಿಂ
ನೆರೆ ನಿಸರ್ಗವ ಬದಲು ಮಾಳ್ಪರದೆಂಥ ಜ್ಞಾನಿಗಳೋ
ಸರಿದು ಹೋಗಿಹ ಪುರದ ಪುಣ್ಯವು
ಮರಳಿ ಬಂದಂತಾಯ್ತು ಗುರುವಿನ
ಬರವಿನಿಂ ನಾವ್ ಧನ್ಯರೆಂದಾತನನು ಪೊಗಳಿದರು ೧೦

ಚರರು ಬಸವನ ಭಕ್ತಿಯನಾಲಿಸಿ
ತೊರೆದಿರಾಕಳ ಕೆಚ್ಚಲಾಗಳೆ
ಕರೆದು ನೊರೆವಾಲಂ ಸ್ವಹಸ್ತದಿ ಗಡಿಗೆದುಂಬಿದರು
ಪುರದ ಗುರುಚರರನ್ನು ಬಿನ್ನಪ-
ವೆರಸಿ ಬಸವನು ಕರೆಸಿ ಗೇಹಕೆ
ಸರಸ ಕ್ಷೀರದ ಪಾಯಸದಿ ಸಲೆ ತೃಪ್ತಿಬಡಿಸಿದನು ೧೧

## ನೆರೆಯೂರು

ಸಾರಸದ್ಗುಣಯೋಗಿ ಕೋಪಾ-
ನೂರಿನಿಂ ನೆರೆಯೂರ್ಗೆ ಹೊರಟಿರೆ
ದಾರಿಯೊಳು ತಾವೊಂದು ದುರ್ಘಟನೆಯನು ಕಂಡಿಹರು
ಊರ ಬಡವಿಯೊಳೋರ್ವಳಲ್ಲಿಯ
ಊರಿನಾ ಮೊರಡಿಯೊಳು ಕಟ್ಟಿಗೆ–
ಯಾರಿಸುತೆ ನಡೆದಿಹಳು ಉರುವಲಕಾಗಿಯತ್ತಿತ್ತ ೧೨

ಆರು ವರ್ಷದ ಆಕೆಯಾ ಮಗು
ಭೂರಿ ಚಪಲತೆಯಿಂದಲಾಡುತ
ಸಾರಿ ಹಾವಿನದೊಂದು ಹುತ್ತಿನೊಳಿರಿಸೆ ಕೈಯನ್ನು
ಘೋರ ಸರ್ಪವು ಬೆರಳ ಕಚ್ಚಿತು
ಚೀರಿತಾ ಮಗು ರೋದಿಸಿತು ಮೇಣ್
ಕಾರುತಲಿ ಬುರುಗನ್ನು ಹುತ್ತಿನ ಬದಿಯೊಳೊರಗಿಹುದು ೧೩

ಮಗನು ಚೀರಿದ ಧ್ವನಿಯನಾಲಿಸಿ
ಲಗುಬಗೆಯೊಳಾ ಸಾಧ್ವಿ ಧಾವಿಸಿ
ಒಗೆತರಲು ಮಗನೊರಗಿದುದ ನೆರೆ ನೋಡಿ ಹೌಹಾರಿ
ಬಗೆಯು ತೋರದೆ ದಂಗುಬಡಿದಂ-
ತಾಗಿಯೆದೆಯೆದೆಹೊಡೆದುಕೊಳ್ಳುತೆ
ಮುಗಿಲೆ ಮೈಮೇಲ್ ಹರಿದು ಬಿದ್ದಂತಾಗೆ ರೋದಿಸುತ್ತೆ ೧೪

ಆರ ಮರೆಹೊಗಲಿನ್ನು ನನ್ನ ಕು–
ಮಾರ ನಿನಗೇಂ ಪಾವು ಕಚ್ಚಿತೆ ?
ಯಾರು ಕಾಯುವರಯ್ಯೊ ಶಿವ ! ಶಿವ ! ಎಂಥ ದುರ್ದೈವ !
ಯಾರ ಮೊಗ ನಾ ನೋಡಿ ಹಿಗ್ಗಲಿ ?
ಯಾರ ದೇಹವ ತಬ್ಬಿ ನಲಿಯಲಿ ?
ಯಾರ ತೊದಲ್ನುಡಿಗೇಳಿ ಸಂತಸಬಡಲಿ ಕಂದಯ್ಯ ? ೧೫

ನೀನೆ ನನ್ನಯ ಮನೆಯ ದೀಪವು
ನೀನೆ ನನ್ನಯ ಭಾಗ್ಯಮೂರ್ತಿಯು
ನೀನೆ ನನ್ನೊಡಲೆಂಬ ಕಡಲಿಗೆ ಪೂರ್ಣಚಂದ್ರಮನು
ಏನು ಮಾಡಲಿ ಹೇಗೆ ಮಾಡಲಿ ?
ನಾನು ಬಹು ಹತಭಾಗ್ಯಳೈ ಗಡ !
ಕಾನನವದಾಯ್ತೆನ್ನ ಸಂಸಾರವಿದು ಸುಕುಮಾರ ೧೬

ನೋಡಲಾಗದೆ ನಿನ್ನ ನೀ ಮಾ-
ತಾಡಲಾಗದೆ ನನ್ನೊಡನೆ ನೀ–
ನಾಡಲಾಗದೆ ನಿನ್ನಯೋರಿಗೆಗೆಳೆಯರೊಡಗೂಡಿ
ಕಾಡಿ ಹಟಹಿಡಿದಿನ್ನು ನನ್ನಂ
ಬೇಡಲಾಗದೆ ಮಗನೆ ತಿಂಡಿಯ
ಪಾಡು ನನಗಿಂತಾದುದೇ ದುರ್ವಿಧಿಹತಾತ್ಮಳಿಗೆ ೧೭

ನೀನೆಯೋರ್ವನು ನನಗೆ ಪುತ್ರನು
ನೀನೆನಗೆ ಸರ್ವಸ್ವವೆಳೆಗರು
ನೀನು ಕಳಕೊಂಡಿರುವೆ ವರ್ಷದ ಹಿಂದೆ ತಂದೆಯನು
ನೀನೆ ನನ್ನಯ ಭಾಗ್ಯವೆಂದೇ
ನಾನು ಸಂತಸಗೊಂಡು ಬಾಳಿದೆ
ನೀನು ಅಳಿದಿರೆ ನಾನು ಉಳಿಯುವುದೆಂತು ಪೇಳ್ತನಯ ೧೮

ನಿನಗೆ ಸೋದರರಿಲ್ಲ ಮಗನೇ
ನಿನಗೆ ಸೋದರಿಯರುಗಳಿಲ್ಲವು
ಮನೆಗೆ ನೀನೊರ್ವನೆ ಕಣಾ ಕುಲದೀಪ ಮತ್ಕುವರಾ
ನಿನಗೆ ಮೃತಿಯೊಂದಿರಲು ಶಿವ ! ಶಿವ !
ನನಗೆ ಗತಿಯಿನ್ನಾರು ಪೇಳಿಲೆ
ನಿನಗೆ ಮುನ್ನವೆ ಮೃತಿಯು ಬಾರದುದೇಕೆ ನನಗಕಟಾ ! ೧೯

ಕರುಳೆ ನಿನ್ನಂ ಬಡತನದ ಹಿರಿ
ಹೊರೆಯ ನಾನಿಳುಹಿರ್ದೆ ಕಂದನೆ
ಧರೆಯೊಳಗೆ ನೀನಿಲ್ಲದಿರೆ ನಾನೆಂತು ಸೈರಿಸಲಿ ?
ಕಿರಿಯ ನೀ ಮಣ್ಣಿನಗೆ ಕೊಡದಲೆ
ತರುಳ ನಿನಗಾಂ ಮಣ್ಣಕೊಡುವುದೆ ?
ಹೊರಡುವುದೆ ಮುಂಚಿತವೆ ನನ್ನಂ ಬಿಟ್ಟು ಸುಕುಮಾರ ೨೦

ನಿನ್ನ ನೋಡದ ಕಂಗಳೇತಕೆ ?
ನಿನ್ನ ಕೇಳದ ಕಿವಿಗಳೇತಕೆ ?
ನಿನ್ನನಾಲಿಂಗಿಸದ ತೋಳುಗಳೇತಕೆನಗಕಟಾ !
ನಿನ್ನ ಕೊಂಡಾಡದಿಹ ನಾಲಗೆ-
ಯಿನ್ನು ತಾನಿರ್ದೇನು ಮಗನೇ ?
ನನ್ನಹರಣವು ಹಾರದೇತಕೆಯೆಂಥ ಕಲ್ಲೆದೆಯೋ ! ೨೧

ಇಂತು ರೋದಿಸುತಿರುವ ತಾಯಿಯು
ಕಾತುಹರಯೋಗೀಂದ್ರ ಕಂಡನು
ಇಂತು ಕೇಳ್ದು ನಡೆದ ಘಟನೆಯನಾಗ ತಿಳಿದವನು
ಮುಂತೆ ಪೇಳಿದನಳುವ ಮಾತೆಗೆ
ಚಿಂತೆಯಂ ಬಿಡು ತಾಯೆ ನಿನ್ನಯ
ಅಂತರಂಗವ ಶಾಂತಗೊಳಿಸುವ ಮಗನು ಸಾಯುವನೇ ? ೨೨

ಎಂದು ಜೋಳಿಗೆಯಿಂದ ಭಸ್ಮವ-
ನಂದು ಹೊರದೆಗೆದಲ್ಲಿ ಮಡಿದಿಹ
ನಂದನನ ಬಾಯಲ್ಲಿಯುದುರಿಸಿ ಮೈಗೆ ಲೇಪಿಸಲು
ಒಂದರಕ್ಷಣದಲ್ಲಿ ಬಾಲನು
ಚೆಂದದಿಂ ಚೇತರಿಸಿ ನಿಲ್ಲಲು
ಬಂದು ಬಿಗಿದಪ್ಪುತಲಿ ಮಾತೆಯು ಮುದ್ದ ನೀಡಿದಳು ೨೩

ಗುರುವರನ ಚರಣಕ್ಕೆ ಮಣಿದಳು
ತರುಣನಿಂ ವಂದನೆಯ ಗೈಸಿದ-
ಳರುವಿನಿಂ ನುಡಿದಿರ್ದಳಾ ಜೂದೀಶಯತಿವರಗೆ
ಗುರುವೆ ನನ್ನಯ ಸಿರಿಯೆ ಮಂಗಲ
ಝರಿಯೆ ಚಿಂತಾಮಣಿಯೆ ಕಲ್ಪದ
ತರುವೆ ನೀ ಬಂದೆನ್ನ ಕೂಸಿನ ಜೀವವುಳಿಸಿರ್ದೆ ೨೪

ಮರೆವೆನೇ ನಿನ್ನುಪಕೃತಿಯನಾ-
ನರಿಯೆನೇ ತವ ಘನಮಹಿಮೆಯಂ
ತೊರೆವೆನೇ ಭವದೀಯ ಚಮ್ಮಾಪ್ರಗೆಯ ಗುರುರಾಯ
ಕರುಣಿಪುದು ನನ್ನಯ ಮನೆಗೆ ಸಲೆ
ಸರಸದಿಂ ಸ್ವೀಕರಿಪುದೆನ್ನಯ
ಕಿರಿಯ ಭಕ್ತಿಯ ಭಾಗ್ಯದೇವನೆ ನೀನೆ ಗತಿ ನಮಗೆ ೨೫

ಮಗಳ ಮುದ್ದಿನ ನುಡಿಯನಾಲಿಸಿ
ಮಗುಳ್ದು ಪೇಳಿದನಿಂತು ಮಾತೆಗೆ
ಮಗಳು ಕರೆಯಲು ಬರನೆ ತಡೆಯಿದೆಂಥ ಮಹಾತ್ಮ ?
ನೆಗೆಯಿತೆಲ್ಲಿಗೆ ನಾಗಸರ್ಪವು ?
ಮಗುವೆ ನೀನದ ಬಲ್ಲೆಯಾಯೆನೆ
ಮಗನು ಹುತ್ತಿನ ಕಡೆಗೆ ಬೆರಳಂ ನೀಡಿ ತೋರಿಸಿದ ೨೬

ಪುತ್ರಿನಡೆಗೈತಂದು ಯೋಗಿಯು
ಸತ್ವರದೊಳುಚ್ಚರಿಸೆ ಮಂತ್ರವ
ಮತ್ತೆ ಹೊರಬಂದಿಹುದು ನಾಗರಹಾವು ಹೆಡೆಯೆತ್ತಿ
ಚಿತ್ತಜಾರಿಯರೂಪ ತಾನದ–
ನೆತ್ತಿಕೊಳ್ಳಲು ತಕ್ಷಣವೆಯದು
ಸುತ್ತಿಕೊಂಡಿಪ ಸ್ವರ್ಣಮಯ ಹಾವಾಯ್ತಚ್ಚರಿಯು ೨೭

ಬಡತನವು ಹಿಂಗುವದು ಮಗಳೇ
ಪಡೆದಿರುವೆಯೋ ಸ್ವರ್ಣನಾಗವ
ಗಡನೆ ನಿನ್ನಯ ಮಗನು ಘನಶ್ರೀಮಂತನಾಗುವನು
ನಡೆ ಮನೆಗೆ ಪೋಗೋಣ ತಾಯಿಯೆ
ಮೃಡನು ನೀಡುವ ಶಾಂತಿಸುಖವನು
ಪಡೆವ ಕಷ್ಟಗಳೆಲ್ಲ ದೂರಾಗುವವು ನಡೆಯಮ್ಮ ೨೮

ಕಟ್ಟಿಗೆಯ ಹೊರೆಯೊಳಗೆ ನಾಗವ-
ನಿಟ್ಟು ಭರದಿಂ ಕಟ್ಟಿ ಹೊರೆಯಂ
ನೆಟ್ಟನೇ ತಾ ಹೊತ್ತು ಬಾಲಕನೆತ್ತಿ ಕಂಕುಳದಿ
ಗುಟ್ಟಿನಿಂ ಶಿವಯೋಗಿಯೊಡನವ–
ಳಟ್ಟಹಾಸದಿ ಮನೆಗೆ ಬಂದಾ
ಕಟ್ಟಿಗೆಯ ಹೊರೆಬಿಚ್ಚಿ ನಾಗವನಿಟ್ಟು ಜಗುಲಿಯೊಳು ೨೯

ಚರರ ಪಾದೋದಕದಿ ತೊಳೆದದ
ಧರಿಸಿ ಭಸ್ಮ ಸುಗಂಧ ಕುಂಕುಮ
ಸರಸ ಪತ್ರಸುಪುಷ್ಪಚಯದಿಂ ಪೂಜೆಗೈದಿದಳೀ
ಗುರುಗಳಿಗೆ ಜಳಕವನು ಮಾಡಿಸಿ
ಪರಮ ಲಿಂಗಾರ್ಚನೆಗೆಯಣಿಮಾ-
ಡಿಸದೆ ಪ್ರೇಮದಿ ತಣಿಸಿದಳು ಪರಸಾದವೆಡೆಮಾಡಿ ೩೦

ಹೊಂದಿ ತೃಪ್ತಿಯ ಗುರುವರೇಣ್ಯನು
ಚಂದದಿಂ ಬೀಳ್ಕೊಂಡು ಬಡವಿಯ
ಮುಂದೆ ತನ್ನಯ ಪಯಣವಂ ಸೊಗಸಾಗಿ ಬೆಳೆಸಿದನು
ಅಂದು ನಡೆದೀ ಚೆಂದ ಘಟನೆಯ
ಮಂದಿ ಮಕ್ಕಳು ಕೇಳಿ ಯೋಗಿಯ
ಸಂದ ಲೀಲೆಯ ಸ್ಮರಿಸಿಯಾತನ ಹಾಡಿ ಹರಸಿದರು ೩೧

ಸತ್ತವರ ಬದುಕಿಸುವರೊಳರೇ ?
ಹುತ್ತಿನೊಳಗಣ ಹಾವ ಸ್ವರ್ಣದ
ವೊತ್ತಮಾಗಿರಿಸಲ್ ಸಮರ್ಥರದಾರಿಹರು ಜಗದಿ ?
ಸತ್ಯಶರಣನು ಬೂದಿಯೋಗಿಯು
ಕತ್ತಲೆಯ ಬೆಳಕನ್ನು ಮಾಡುವ
ಸ್ತುತ್ಯ ಗುರುರವಿಯೆಂದು ಸೈವೆರಗಾಗಿ ಪೊಗಳಿದರು ೩೨

ಯೋಗಿಗಳ್ ತಮ್ಮಾಯುವನ್ನಸು-
ನೀಗಿದವರಿಗೆಯಿತ್ತು ಬದುಕಿಸಿ
ಯೋಗಬಲದಿಂ ಮತ್ತೆ ತಮ್ಮಾಯುವನು ಪಡೆಯುವರು
ಯೋಗಬಲವೇ ಬಲವು ಜಗದೊಳು
ಯೋಗಿಯಲ್ಲದೆ ಬೇರೆ ಜನರಾರ್
ಪೋಗಿರುವ ಜೀವವನು ಪುನರಪಿ ಬರಿಸಿದವರುಂಟು ? ೩೩

## (ಪೋತನೂರು–ಕಂದನುಲಾಯಿ)

ಬಳಿಕ ಬೂದೀಶ್ವರನು ಹಳ್ಳಿಯೊ–
ಳುಳಿಯದಲೆ ಮುಂದಕ್ಕೆ ಸಾಗುತೆ
ತಳುವದೈತಂದಿಹನು ಪೋತನ್ನೂರೆಂಬ ಗ್ರಾಮಕ್ಕೆ
ಕೊಳನ ತಡಿಯೊಳು ನಿಂದು ಪೂಜೆಯ
ಹೊಳಹಿನಿಂ ಗೈಯುತ್ತಲಿರೆಯಾ-
ಪ್ರೊಳಲ ದೇವಕಿಜಾತ್ರೆಯಪ್ಪುದ ಕೇಳಿದನು ಜನರಿಂ ೩೪

ಪೋತಸೂರಿನ ದೇವಿಜಾತ್ರೆಗೆ
ಓತು ಬಂದಿಹ ಮೂಢ ಜನಗಳು
ಪ್ರೀತಿಯಿಂದಾ ದೇವತೆಗೆ ಕುರಿ ಕೋಣ ಕೋಳಿಗಳ
ಹಾತೊರೆದು ಬಲಿಯೂಯುತಿರ್ದರು
ಈತರದ ಕೀಳ್ ಸಾಂಪ್ರದಾಯವು
ಭೂತಲದಿ ನೆಲಸಿಹುದು ಬಹುದಿನ ಕ್ರೂರಕರ್ಮದಲಿ ೨೭

ಯೋಗಿವರ ಬೂದೀಶ ಬಂದನು
ಬೇಗದಿಂದಾವೂರ ನೆರೆಯೊಳು
ಸಾಗಿಹುದು ಸಡಗರದಿ ಕೋಣನ ಮೆರವಣಿಗೆಯೊಂದು
ಆಗ ಕೋಣನ ಹಣೆಗೆ ಕುಂಕುಮ
ರಾಗದಿಂ ಹಚ್ಚಿಹರು ಕೊರಳಿಗೆ
ತೂಗ ಬಿಟ್ಟಿಹರವರು ಬೇವಿನ ಎಲೆಯ ಮಾಲೆಯನು ೨೮

ಕಣೆಯು ಕಣಕಣ ಬಾರಿಸುತ್ತಿದೆ
ಢಣ ಢಣಂ ಡೊಳ್ಳುಗಳು ಬಡಿವವು
ಕುಣಿಕುಣಿದು ಬಾರಿಸುವ ಕರಡಿಯು ಪಾಜಲು ನಡೆದಿಹುದು
ರಣಕಹಳೆಗಳ ಕೂಗು ಭೋರೆಂ-
ದಣಕವಾಡುವುದು ಸಾಂಪ್ರದಾಯದ
ಝಣಝಣನೆ ಮೊಳಗುವದು ಜಾಂಗುಟನಾದ ಗುಡಿಯಲ್ಲಿ ೨೯

ಗುಡಿಯ ಸಿಂಗರಿಸಿಹರು ದೇವಿಯ
ತೊಡೆದು ಕೆಮ್ಮಣ್ಣುಸುಣ್ಣ ಗೋಡೆಗೆ
ಗುಡಿಸಿಯಂಗಳ ಬಾಗಿಲವ ತೋರಣದಿ ಸಡಗರಿಸಿ
ಉಡಿಸಿ ಪೊಸ ಸೀರೆಯನು ದೇವಿಗೆ
ತೊಡಿಸಿ ಪೊಸ ಕುಪ್ಪಸವನಾಕೆಗೆ
ತೊಡಿಗೆಗಳನಿಟ್ಟಾ ಕೆಂಪಿಂ ಸಿಂಗಾರ ಮಾಡಿಹರು ೩೦

ಅನಿತರೊಳ್ ಗುರುದೇವನಲ್ಲಿಗೆ
ಮನದಿ ಶಿವನಾಮವನು ಧ್ಯಾನಿಸು-
ತನುನಯದಿ ನಡೆತಂದು ಕೇಳ್ದನಿದೇನು ಸಂಭ್ರಮವು ?
ಎನಲು ದೇವಿಯ ಭಕ್ತನೋರ್ವನು
ವಿನಯದಿಂದಭಿನಮಿಸಿ ಪೇಳ್ದನು
ಜನನಿ ದೇವಕಿದೇವಿಜಾತ್ರೆಗೆ ಕೋಣ ಕಡಿಯುವೆವು ೩೯

ಆತನಾಡಿದ ಮಾತ ಕೇಳುತೆ
ಪೂತ ಶ್ರೀ ಶಿವಯೋಗಿ ನುಡಿದನು
ಘಾತಕರು ನೀವಯ್ಯ ದೇವಿಗೆ ಬಲಿಯನೀಯುವರೇ ?
ಏತಕೈ ಸಲೆ ಮೂಕಪ್ರಾಣಿಗ-
ಳೋತು ಕೊಲ್ಲುವಿರಯ್ಯ ನಿರ್ಘೃಣ-
ರೀ ತರದ ಕೃತಿಯಿಂದೆ ದೇವಿಯು ತೃಪ್ತಳಾಗುವಳೇ ? ೪೦

ಕೊಲ್ಲದಿರ್ಪುದೆ ಧರ್ಮವೆಂಬುದು
ಬಲ್ಲರಿಗೆ ಸಮ್ಮತವು ಕೇಳಿರಿ
ಕೊಲ್ಲುವಂತವರುರುಳಿ ಬೀಳ್ವರು ನರಕಕುಂಡದಲಿ
ಎಲ್ಲಿ ನೀವೀ ಧರ್ಮಗಲಿತಿರಿ ?
ಕ್ಷುಲ್ಲಕರದಾರ್ ನಿಮಗೆ ಪೇಳ್ದರು ?
ಸಲ್ಲದೀ ಬಗೆ ದೇವಿಗಕ್ಕಟ ! ಕ್ರೂರಳೇನಾಕೆ ? ೪೧

ಬೇಡುವಳೆ ಕೋಣಗಳ ಕುರಿಗಳ ?
ಕಾಡುವಳೆ ಕೋಳಿಗಳನೀಯಲು ?
ಮೂಢಜನಗಳ ರೂಢಿಯಿದು ಬಹು ದುಷ್ಟರೈನೀವ್
ನೀಡಿ ಹೋಳಿಗೆ ಹುಗ್ಗಿಗಳ ಸಲೆ
ಮಾಡಿರೈ ಭಕ್ತಿಯನು ದೇವಿಗೆ
ನಾಡೆ ನಿಮ್ಮಿಷ್ಟಾರ್ಥಸಿದ್ಧಿಯ ಗೈವಳಾ ದೇವಿ ೪೨

ದಯವುಯಿಲ್ಲದ ಧರ್ಮವುಂಟೆ ?
ದಯವು ಬೇಕೈ ಪ್ರಾಣಿಮಾತ್ರಕೆ
ದಯವೆ ಧರ್ಮದ ಮೂಲವೆಂದನು ಶರಣಬಸವೇಶ
ದಯವು ನಿಮ್ಮೆದೆಯಲ್ಲಿಯಿಲ್ಲವೆ ?
ದಯವೆ ದೇವರು ಬಲ್ಲಿರಾ ನೀವ್ ?
ದಯಕೆ ಮಿಗಿಲಹ ಗುಣವು ಲೋಕದೊಳಿನ್ನು ಬೇರುಂಟೆ ? ೪೩

ಇದನು ಕೇಳ್ದಾ ವೂರಗೌಡನು
ಬದಿಗೆ ಬಂದಾಯತಿಗೆ ನುಡಿದನು
ಬಿದಿ ನಿನಗೆ ಕಾಡುವದೆ ಯೋಗಿಯೆ ಬೇಡವೆನಲೇಕೆ ?
ಮೊದಲಿನಿಂದೀ ರೂಢಿ ಬಂದಿದೆ
ಮುದದಿ ಕೊಂಬಳು ದೇವಿ ಬಲಿಗಳ
ಸದಯಳೆಮ್ಮಂ ಕಾಯುವಳು ಬಲಿದಾನದಿಂ ತಣಿದು ೪೪

ಮಾರಿಗುಳ್ಳಿಗಳೆಂಬ ಪಿಡಗುಗ–
ಳೂರ ಹಾವಳಿಗೈಯುತಿರೆ ನಾವ್
ಊರ ದೇವಿಗೆ ಬಲಿಯ ನೀಯುನೊಡನೆಮ್ಮ ಬಿಡುತಿಹಳೇ ?
ಊರನೆಲ್ಲವ ಧ್ವಂಸಮಾಳ್ಪಳು
ಕಾರುವಳು ವಿಷವನ್ನು ನಮ್ಮೊಳು
ಕೋರಿ ಗೈಯುವ ಹರಕೆಗೇತಕೆ ತಡೆಯನೊಡ್ಡುವಿರಿ ? ೪೫

ಹಿಂದಿನವರೆಮ್ಮವರು ಮೂಢರೆ ?
ಇಂದಿನೀ ಸ್ವಾಮಿಗಳು ಜಾಣರೆ ?
ಎಂದಿನಿಂ ನಡೆತಂದ ಬಲಿದಾನಕ್ಕೆ ಸ್ವಾಮಿಗಳೆ
ಕುಂದು ತರುವರೆ ನೀವು ನಮ್ಮನು
ಚೆಂದದಿಂ ಹುರಿದುಂಬಿಸುತ್ತೀ
ಸಂದ ಕಾರ್ಯವು ಸಾಂಗವಾಗಲು ಹರಸುವುದೆ ಲೇಸು ೪೬

ಗೌಡನಾಡಿದ ನುಡಿಗೆ ದೈವವು
ನಾಡೆ ಸೈಸೈಯೆಂದು ನುಡಿಯಲು
ನೋಡಿ ಸ್ವಾಮಿಯನೌಡುಗಚ್ಚುತೆ ದುಡುಕಿ ನುಡಿದಿತ್ತು
ಬೇಡ ನಮ್ಮಯ ಗೊಡವೆ ಸ್ವಾಮಿಯೆ
ಕಾಡುವುದು ತರವಲ್ಲ ನೋಡೆಲೆ
ಮಾಡುವುದ ನಾವ್ ಮಾಡಿಯೇ ತೀರುವೆವು ಭಯವೇಕೆ ? ೪೭

ಎಂದ ಮಾತಿಗೆ ಯತಿಯು ಪೇಳ್ದನು
ಮಂದಮತಿಗಳು ನೀವು ತಿಳಿಯಿರಿ
ಸಂದಿಹುದು ಸಲೆ ಮಂದಭಾಗ್ಯವು ಪೋತನೂರಿಂಗೆ
ಇಂದು ನಡುರಾತ್ರಿಯಲಿ ದೇವಿಯು
ನೊಂದುಕೊಂಡೀಪೂರ ತೊರೆವಳು
ನಿಂದು ಪೋಪುದು ನಾಳಿನೀ ಬಲಿದಾನಕರ್ಮವಲಾ ೪೮

ಕೋಪದಿಂ ಯತಿಯಾಡಿದಾ ನುಡಿ
ಪಾಪಿಗಳ್ ನೆರೆ ಕೇಳ್ದು ನುಡಿದರು
ತಾಪಗೊಂಡೇತಕ್ಕೆ ನುಡಿಯುವಿ ಸ್ವಾಮಿ ದುರ್ನುಡಿಯ
ಪೋಪಳೇ ದೇವಕಿಯು ಗುಡಿಯಿಂ
ಕಾಪಿಡುವೆವೈ ಇಂದು ನಿಶೆಯೊಳು
ಭಾಪು ! ಕೋಣೆಯೊಳಿರಿಸಿ ನಿನ್ನಂ ಬೀಗಹಾಕುವೆವು ೪೯

ಹೀಗೆ ನುಡಿದಾ ಮೂಢಜನಗಳು
ಯೋಗಿಯಂ ನೆರೆ ಕಟ್ಟಿ ಹಗ್ಗದಿ
ಬೇಗದಿಂ ಸಲೆ ಕೋಣೆಯೊಂದರೊಳಿರಿಸಿ ಬಂದಿಯೊಳು
ಬೀಗಹಾಕಿದರಾಗ ಕೋಣೆಗೆ
ಯೋಗಿ ತಾನೊಂದವರಿಗಾಡದೆ
ಯೋಗಲೀಲೆಯೊಳಿರುತಲಿರ್ದನು ರಾತ್ರಿಯೊಳಗಲ್ಲಿ ೫೦

ಇತ್ತ ದೇವಕಿಮಂದಿರವ ಸಲೆ
ಮತ್ತಮತಿಗಳು ಬೀಗಹಾಕುತ–
ಲೊತ್ತಿ ಮುದ್ರೆಯನದಕೆ ಬಂಧುರವಾಗಿ ಕಾಪಿಟ್ಟು
ಹತ್ತು ಜನ ಪಂಜನ್ನು ಹೊತ್ತಿಸಿ
ಹೊತ್ತು ಹೊರಡುವ ತನಕ ಕಾಯ್ದರು
ಸುತ್ತುಮುತ್ತಲು ಸುಳಿವದೇನುಂ ಕಾಣದಂತಾಯ್ತು ೫೧

ಗುರುವರೇಣ್ಯನು ಮಧ್ಯರಾತ್ರಿಯೊ–
ಳಿರದೆ ಕೋಣೆಯ ಬಿಟ್ಟು ಮಾಯೆಯೊ–
ಳರಿದು ದೇವಕಿಮಂದಿರವ ಸಲೆ ಸಾರ್ದು ಬೇಡಿದನು
ಹೊರಡು ದೇವಿಯೆ ಲೋಕಮಾತೆಯೆ
ದುರುಳರೀ ನೆರೆ ಬೇಡ ನಿನಗೌ
ಕುರಿಯ ಕೋಳಿಯ ಕೋಣನಾ ಬಲಿಯೊವರೌ ನಿನಗೆ ೫೨

ಕ್ರೂರರಕ್ಕಸರಮ್ಮ ನಿನ್ನೀ
ಊರ ಜನಗಳು ನಿಷ್ಕರುಣಿಗಳು
ಹಾರಯಿಸುವರು ಮೂಕ ಪಶುಗಳ ಬಲಿಯನೀವುದಕೆ
ತೋರಿ ನಿನ್ನ ಕೃಪಾಕಟಾಕ್ಷವ
ಸಾರಿ ಸಾತ್ವಿಕ ಕಳೆಯ ಲೋಕಕೆ
ಬೀರು ಶಾಂತಿಯ ಮತವ ನಿನ್ನಯ ಭಕ್ತಸಂಕುಳಕೆ ೫೩

ತೆರಳು ಕಂದಮುಲಾಯಿ ಗ್ರಾಮಕೆ
ಇರುಳು ಗ್ರಾಮದ ಮುಂದೆ ಬೇವಿನ
ಮರದಡಿಯನಾಶ್ರಯಿಸು ಹೋಳಿಗೆ ಹುಗ್ಗಿಗಳ ನಿನಗೆ
ತರುವರೌ ಎಡೆಯನ್ನು ಪೌರರು
ಅರಿದು ತವ ಸಾತ್ವಿಕಕಳೆಯ ನೆರೆ
ಕರುಣಮೂರುತಿಯೆಂದು ಪಾದಕೆ ವಂದಿಸುವರವ್ವಾ ೫೪

ಎಂದು ಬೇಡಲು ಯೋಗಿವರ್ಯರು
ಅಂದು ರಾತ್ರಿಯೆ ದೇವಿ ದೇವಕಿ
ಬಂದು ಕಂದಮಲಾಯಿ ಗ್ರಾಮದ ಬೇವಿನಾ ಮರಕೆ
ನಿಂದು ನೆಲಸಿಹಳಲ್ಲಿ ಸೊಗದಿಂ
ನಂದ ಮೂರುತಿ ಬೂದಿಯೋಗಿಯು
ನಿಂದಿಹನು ಬಂದಲ್ಲಿ ಶ್ರೀ ಬಸವೇಶಮಂದಿರದಿ ೫೫

ಮರುದಿನಂ ಮುಂಜಾವದೊಳ್ ಜಾ-
ಗರಣೆಯಂ ಗಡ ಪೊಂದಿ ಯೋಗೀ-
ಶ್ವರನು ಕಂದಮಲಾಯಿ ಗ್ರಾಮಕೆ ದೇವಕಿಯು ಬಂದ
ಸರಸ ಸಂದೇಶವನು ಬೀರಲು
ಪುರಜನರು ಹಾತೊರೆದು ಬೇವಿನ
ಮರಕೆ ಬಂದರು ನೋಡಿರ್ಪೆ ನೆರೆ ಭಕ್ತಿಯೊಡಗೂಡಿ ೫೬

ಬಂದ ಜನರಿಗೆ ಯೋಗಿ ಪೇಳ್ದನು
ಇಂದು ನೀವತಿ ಭಾಗ್ಯವಂತರು
ಬಂದು ನೆಲಸಿಹಳಿಲ್ಲಿ ದೇವಕಿಯುವಳ ಜಾತ್ರೆಯನು
ಇಂದೆ ನಿಮ್ಮೂರಿನಲಿ ಮಾಳ್ಪುದು
ಚೆಂದದಿಂ ನೀವೆಲ್ಲರವಳಿಗೆ
ತಂದು ಸಲಿಸುವುದನ್ನ ಹೋಳಿಗೆ ಹುಗ್ಗಿ ಪಾಯಸವ ೫೭

ಪ್ರೋತನೂರಿನ ಜನರು ಆಕೆಗೆ
ಹೋತು ಕುರಿಕೋಣಗಳ ಬಲಿಯ-
ನ್ನೀತು ಕೊಡಲತಿ ಸಿದ್ಧರಾಗಿರಲಂಜಿ ಪಶುವಧೆಗೆ
ಘಾತಕರ ಘನಘೋರ ವೃತ್ತಿಯ-
ನಾತುರದಿ ಹೀಗಳೆದು ಇಲ್ಲಿಯೆ
ಭೂತಹಿತಕಾಗಿರುಳು ನೆಲಸಿಹಳಿಂತಿರ್ಪೆ ನೀವು ೫೮

ಇಂತು ಯೋಗಿಯ ನುಡಿಯನಾಲಿಸಿ
ಸಂತಸದಿ ಮಹಿತಾನ್ವಿತರ ಕರ-
ಮಂತರಂಗವನರಿದು ಓಸಾವೃತ್ತಿಯಂ ತೊರೆದು
ಸಂತರಾಡಿದ ಪರಿಯೊಳಾ ದಿನ
ಕಂತುಹರಸಂ ಸ್ಮರಿಸಿ ಜಾತ್ರೆಯ
ಹಂತವನ್ನೆಸಗಲ್ಕೆ ಸಲೆ ಸನ್ನದ್ಧರಾಗಿಹರು ೫೯

ಇತ್ತ ಪೋತ್ನೂರ್ಗ್ರಾಮದೈವವು
ಹೊತ್ತುಹೊರಡಲು ಬಂದು ಕೋಣೆಗೆ
ಒತ್ತಿ ಹಾಕಿದ ಬೀಗಮಂ ತೆರೆದಲ್ಲಿ ನೋಡಲ್ಕೆ
ಸತ್ತುಚಿತ್ತಾನಂದರೂಪನು
ಎತ್ತಲೋ ತಾ ಮಾಯವಾಗಿರೆ
ಸುತ್ತುಮುತ್ತಂ ಮೇಲೆ ಕೆಳಗಡೆ ನೋಡಿ ಬೆರಗಾಗಿ ೬೦

ಎಲ್ಲಿ ಪೋದರೊ ಸ್ವಾಮಿಗಳ್ ಶಿವ !
ಎಲ್ಲಿ ಶಾಪವ ನಮಗೆ ಕೊಡುವರೊ !
ಇಲ್ಲಿ ನಿಲ್ಲದೆ ಹೇಗೆ ಬಂಧನದಿಂದ ಜಾರಿದರೋ
ಬಲ್ಲಿದರ ಲೀಲೆಯನು ಶಿವ ! ಶಿವ !
ಕ್ಷುಲ್ಲಕರು ನಾವೆತ್ತ ಬಲ್ಲೆವು
ಎಲ್ಲಿ ನಮ್ಮೂರಿಂಗೆಯುಳಿಗಾಲವನು ತಂದಪರೊ ! ೬೧

ಇಂತು ಮನದೊಳು ಭೀತಿಯೊಂದಿರೆ
ಚಿಂತಿಸುತೆ ದೇವಕಿಯ ಮಂದಿರ-
ದಂತಿಮಕೆ ಬರೆ ಜನರ ಗುಜುಗುಜು ಮಾತ ಕೇಳಿದರು
ಎಂತು ದೇವಕಿ ಮಾಯವಾದಳೊ !
ಸಂತತಂ ಕಾವಲಿರೆ ಬಾಗಿಲೊ-
ಳೆಂತು ನಮ್ಮೂರನ್ನು ತೊರೆದಳೊ ? ಎಲ್ಲಿ ಪೋಗಿಹಳೊ ೬೨

ಊರಗೌಡರು ಸೆಟ್ಟಿಧನಿಕರು
ಊರ ಹಿರಿಯರು ಕಿರಿಯರೆಲ್ಲರು
ಸೇರಿ ಒಂದೆಡೆ ದೇವಕಿಯು ಮೇಣ್ ಬೂದಿಯೋಗೀಂದ್ರ
ಊರ ನೆರೆತೊರೆದೆಲ್ಲಿ ಪೋದರೊ
ಊರಿಗೇಂ ಕೆಡಗಾಲ ಬಂದುದೊ!
ಧೀರ ಯೋಗಿಯ ಮಹಿಮೆಯಂ ನಾವರಿಯಲಿಲ್ಲವಲಾ ೭೪

ಬಲಿಯುತರು ಬಹುನಿಷ್ಠವಂತರು
ಬಲಿಯ ನೀಡಲು ಬೇಡವೆಂದರು
ಮಲೆತು ನಾವ್ ತಲೆಗೊಂದು ಮಾತಾಡಿದೆವು ಕ್ಷುಲ್ಲಕರು
ಒಲುಮೆ ತಪ್ಪಿತು ಪುಣ್ಯವಂತರ
ತಿಳಿಯಲಿಲ್ಲವರಾತ ಮೊದಲೇ
ನಿಲಿಸಿ ನಾವ್ ಬಿಡುತಿರ್ದೆವೈ ದಿಟ ಪ್ರಾಣಿವಧೆಯನ್ನು ೭೫

ಎಂದು ಪಶ್ಚಾತ್ತಾಪಬಡುತಿರೆ
ಬಂದನೋಲೇಕಾರನೋರ್ವನು
ಸಂದ ಕಂದಮಲಾಯಿಯಿಂ ತಾನೊಂದು ಪತ್ರವನು
ತಂದು ಮುಜುರೆಯ ಮಾಡಿ ಗೌಡರಿ-
ಗಂದು ಕೊಡಲದ ನೋಡಿ ಗೌಡರು
ಚೆಂದದಿಂ ಜನಕೆಲ್ಲ ಪೇಳ್ದರು ಚಿಂತೆ ದೂರಾಗೆ ೭೬

ದೇವಿ ಕಂದಮಲಾಯಿಗ್ರಾಮಕೆ
ಓವಿ ತಾ ಪೋಗಿಹಳು ನೋಡಿರಿ
ಶ್ರೀ ವಿಭುವು ಗುರುದೇವರೂ ಸಹ ಅಲ್ಲಿಯಿರುತಿಹರು
ದೇವಿಜಾತ್ರೆಯನಲ್ಲಿಯಿಂದೇ
ಭಾವುಕರು ಸಲೆ ಮಾಡುತಿರ್ಪರು
ನಾವು ಪೋತ್ಸೋರವರು ತಮ್ಮೊಡಗೂಡಿ ಕಾರ್ಯವನು ೭೭

ಸಾಂಗಗೊಳಿಸುವುದೆಂದು ಚಿನ್ನಪ
ಲಿಂಗಯೋಗಿಯು ಸಲಹೆಯಿಂ ಗಡ
ತುಂಗ ಭಕ್ತರು ಮಾಡಿಹರು ನಮಗೆಲ್ಲ ತಿಳಿಯಿರೆಲಾ
ಹೇಂಗೆ ಮಾಳ್ಪುದು ಪೇಳಿರೆಲ್ಲರು
ಭಂಗ ಬಂದಿಪುದೆಮ್ಮ ಗ್ರಾಮಕೆ
ಜಂಗಮಾರ್ಯರ ಯೋಗಿವರ್ಯರನಿಂದು ಮರೆಹೊಗುವಾ ೬೭

ಎಂದು ಗೌಡನು ನುಡಿಯಲೆಲ್ಲರು
ನಂದದಿಂದಾ ಮಾತಿಗೊಮ್ಮತ-
ದಿಂದ ಸಮ್ಮತಿನೀಡೆ ಪ್ರಮುಖರು ಮುಂದೆ ಸಾಗಿದರು
ಬಂದು ಕಂದಮಲಾಯಿ ಗ್ರಾಮಕೆ
ಬೆಂದು ಪಶ್ಚಾತ್ತಾಪದಿಂದಭಿ-
ವಂದಿಸಿದರಾ ಯೋಗಿವರ್ಯನ ಪಾದಪಂಕಜಕೆ ೬೮

ಕ್ಷಮಿಸು ತಂದೆಯೆ ನಮ್ಮ ತಪ್ಪನು
ಭ್ರಮಿತರಾದೆವು ಸಾಂಪ್ರದಾಯಕೆ
ಅಮಿತ ಮಹಿಮರು ತಾವುಯೆಂಬುದನರಿಯದಾದೆವಲಾ
ತಮಗೆ ದ್ರೋಹವ ಮಾಡಿ ಕೆಟ್ಟೆವು
ನಮಗೆ ಪಶ್ಚಾತ್ತಾಪವಾಗಿದೆ
ಅಮಮ ! ನಮ್ಮಯ ಸೊಕ್ಕುಮುರಿಯಿತು ದೇವ ಕಾಪಾಡು ೬೯

ಎಂದು ಪಾದಕೆ ಬೇಡಿಕೊಳ್ಳಲು
ನಂದ ಮೂರುತಿ ಯೋಗಿವರ್ಯನು
ಬಂದು ಸ್ನೇಹದಿ ಮಕ್ಕಳಂ ಸಂತೈಸಿ ಪೇಳಿದನು
ನೊಂದುಕೊಳ್ಳಲು ಬೇಡಿ ಮಕ್ಕಳೆ
ಕಂದುಗೊರಲನು ಕಾವ ನಿಮ್ಮನು
ಇಂದಿನೀ ಯಾತ್ರೋತ್ಸವಕೆ ನೀವ್ ಟೊಂಕಕಟ್ಟಿರೆಲಾ ೭೦

ಗುರುವರನ ನುಡಿಗೇಳಿ ಸರ್ವರು
ಪರಮದೇವಿರಥೋತ್ಸವವ ಮಿಗೆ
ಹರುಷದಿಂ ಸಾಗಿಸಿದರೈ ಪಶುಹಿಂಸೆಗೆಡೆಗೊಡದೆ
ಚರವರಗೆ ಮಂಗಲವ ಗೈದರು
ಶಿರದೊಳಾಂತವರಾಶಿಷವ ಸಲೆ
ತೆರಳಿದರು ತಮ್ಮೂರ್ಗೆ ಪೊಗಳುತ ಯೋಗಿಲೀಲೆಗಳ ೨೦

ಸತ್ತಪ್ರಾಣಿಗಳುಳಿಸಬಲ್ಲರು
ಪುತ್ತಳಿಯ ಮಾತಾಡಿಸುವರೈ
ಕತ್ತಲೆಯ ಬೆಳಕನ್ನು ಮಾಳ್ಪರು ಯೋಗಿವರ್ಯರೆಲಾ
ಮುತ್ತಿನಂತಹ ಮಾತನಾಡ್ವರು
ಮತ್ತಮತಿಗಳ ಕ್ಷಮಿಸಿ ಪೊರೆವರು
ಸತ್ಯವಂತರ ನೆರವಿನಿಂ ಜಗದಾಟ ಸಾಗಿಹುದು ೨೧

**ಅಂತು ಐದನೆಯ ಸಂಧಿಗೆ ೩೭೧ ಪದ್ಯಕ್ಕೆ ಮಂಗಲಮಕ್ಕುಂ**

**— ಭದ್ರಂ ಶುಭಂ ಮಂಗಲಂ—**

ಶ್ರೀಗುರುಬಸವಲಿಂಗಾಯ ನಮಃ

# ಆರನೆಯ ಸಂಧಿ

## ಪಾಲ್ಕುರಿಕೆ

ಸೂಚನೆ:– ಉರ್ವಿಯೊಳ್ ಸರಾಂತ ಸೋಮರ
ಗರ್ವಮಂ ಪರಿಹರಿಸಿ ಯತಿವರ
ಸರ್ವಶೀಲದ ಹೊನ್ನಮನ ಕೀರ್ತಿಯನು ಪರ್ಬಿಸಿದೆ

ರಾಗದಿಂ ಶ್ರೀಯೋಗಿರಾಜನು
ಸಾಗಿ ಮುಂದಕೆ ಪಾಲುಕುರಿಕೆಗೆ
ಆಗಮಿಸಿದನು ಸೋಮನಾರಾಧ್ಯರುಗಳಿದ್ದೆಡೆಗೆ
ಜಾಗರೂಕತೆಯಿಂದೆ ಯೋಗಿಯ
ಆಗಮನವರಿದಂತರಂಗದಿ
ಬೇಗದಿಂದಾರಾಧ್ಯರಾಕ್ಷಣ ಹೊರಟರಿದಿರ್ಗೊಳಲು ೧

ವರಕವಿಗಳಾತ್ಮಾರ್ಥವೇತ್ತರು
ಚರವರೇಣ್ಯರು ಲಿಂಗನಿಷ್ಠರು
ಪೆರತೆಸೆವ ಅರುವತ್ತುಮೂರ್ ಶೀಲಂಗಳಂ ಚರಿಪ
ಪರಮ ಶೀಲಾನ್ವಿತರು ಬಸವನೊ–
ಳರಿಯೆ ಭಕ್ತಿವಿಲೋಲರಾಗಿಹ–
ರಿರದೆ ಕನ್ನಡ ಸಂಸ್ಕೃತಾಂಧ್ರದಿ ದಿವ್ಯಪಂಡಿತರು ೨

ಪರನ ರೂಪದ ಬೂದಿಯೋಗಿಯ
ಬರವ ಕಂಡಾನಂದದಿಂ ಸಲೆ
ಸರಸ ವಿನಯದೊಳಾದರಿಸಿ ಕರೆದೊಯ್ದು ಪೀಠದೊಳು
ನೆರೆ ವಿರಾಜಿಸುವಂತೆ ಕುಳ್ಳಿರಿ–
ಸಿರಿಯ ಭಕ್ತರ ವೃಂದ ಧಾವಿಸಿ
ವರವಿರಕ್ತರ ದರ್ಶನಕ್ಕಾತುರದಿ ಬರುತಿಹರು ೩

ಚಂದದಿಂ ಪದಪೂಜೆ ನಡೆಯಿತು
ನಂದದಿಂ ಮಂಗಲ ಸುಗೀತೆಯ
ಸುಂದರಾಂಗಿಯರಾಗ ಸುಶ್ರಾವ್ಯದೊಳು ಪಾಡಿದರು
ಕುಂದರದನೆಯರಂದು ಯೋಗಿಗೆ
ಸಂದ ದೀಪಾರತಿಯ ಬೆಳಗಲು
ಇಂದುಧರನವತಾರಿಗಳು ಸಂತೋಷವೊಂದಿದರು ೪

ಸೋಮನಾರ್ಯರು ಕುಶಲ ಪ್ರಶ್ನೆಯ
ಪ್ರೇಮದಿಂ ಬೆಸಗೊಳ್ಳೆ ಯೋಗಿಯು
ಸೋಮನಾರ್ಯರ ಲಿಂಗಪೂಜಾನಂದ ಕೇಳಿದರು
ಸ್ವಾಮಿಗಳ್ ತಾವೊಬ್ಬರೊಬ್ಬರ
ನಾಮಮಂ ಕೊಂಡಾಡಿದರು ಸಲೆ
ನೇಮದಿಂ ಮಠದಲ್ಲಿ ಪೂಜಾನಂದದಲ್ಲಿಹರು ೫

ಕಾಯಿಕಪ್ಪುರ ಧೂಪದೀಪವ–
ನಾಯತದಿ ಫಲಪುಷ್ಪರಾಶಿಯ–
ನಾಯತಾಕ್ಷಿಯರಲ್ಲಿ ತಂದೊಡ್ಡಿದರು ಭಕ್ತಿಯಲಿ
ಮಾಯಹರನೆಲ್ಲರಿಗೆ ಮುದದಿಂ
ಕಾಯಿಫಲಗಳನುಡಿಯ ತುಂಬುತೆ
ಕಾಯುವನು ಸಂತಾನ ಸಂಪದ ಸುಖಗಳನ್ನಿತ್ತು ೬

ಕೆಲವು ದಿನ ಕಳೆಯುತಿರಲಾರ್ಯನ
ಛಲದ ಶೀಲವ್ರತಗಳಂ ನೆರೆ
ತಿಳಿದು ಮಡಿಹುಡಿಯನ್ನು ಮೇಣ್ ಶಾಸ್ತ್ರೋಕ್ತಪೂಜೆಯನು
ಬಲು ಸೊಗಸು ತನುಶುದ್ಧಿಗೀಕ್ರಿಯೆ
ಮಲಿನಭಾವವ ಶುದ್ಧಗೈವುದ
ಕಲಿಸಬೇಕೆಂದಾರ್ಯನಿಗೆ ಸಂದೇಶವಿತ್ತಿಹನು ೭

ಪರಮಪೂಜ್ಯರೆ ಸೋಮನಾರ್ಯರೆ
ಅರಿತೆ ನಿಮ್ಮಯ ಶೀಲಕ್ರಿಯೆಗಳ
ಅರುಪಿನಿಂದಿವ ಪಾಲಿಸುತ್ತಿಹಳೋರ್ವ ಸಾಧ್ವಿಮಣಿ
ಗುರುಚರರ ಸೇವಾನುರಕ್ತಳು
ಕರೆವರಾಕೆಗೆ ಜನರು ನಲವಿಂ
ಸರುವಶೀಲದ ಹೊನ್ನಮಾಂಬೆಯುಯೆಂಬ ಪೆಸರಿಂವೆ ೮

## ಪಿರಿಪಲ್ಲಿ

ಇರುತಿಹಳು ಪಿರಿಪಲ್ಲಿ ಗ್ರಾಮದಿ
ಪರಿದಿಹುದು ಸುತ್ತೆಲ್ಲವಾಕೆಯ
ಉರುತರದ ಕೀರ್ತಿಪ್ರಭೆಯು ಚರವರ್ಯರವಳೆಡೆಗೆ
ತ್ವರಿತದಿಂ ಧಾವಿಸುತಲಾಕೆಯ
ದರುಶನವ ಪೊಂದುವರು ಆರ್ಯರೆ
ಕರುಣಿಪುದು ತಾವತ್ತಲಾಕೆಯ ಶೀಲ ಪರಕಿಸಲು ೯

ಎನಲು ಕೇಳ್ದಾ ಸೋಮನಾರ್ಯರು
ನನಗೆ ಮಿಗಿಲಾದವಳೆ ಆಕೆಯು ?
ಜನರು ನನಗೋರ್ವನಿಗೆ ಶೀಲಾಪ್ರತಿಮನೆನ್ನುವರು
ಘನಮಹಿಮಳಾಗಿಹಳೆ ಪೆಣ್ಮಣಿ ?
ನನಗೆ ಶೀಲಾಚಾರಮೂರ್ತಿಗೆ
ಎನಿತಿವಚರ್ಚೆಯೆನುತೆ ಭಾವಿಸಿ ಯೋಗಿಗರುಹಿದರು ೧೦

ಯೋಗಿವರ್ಯರೆ ತಾವು ಪೇಳಿದ
ಹಾಗೆ ನಾನಾ ಸಾಧ್ವಿಯಲ್ಲಿಗೆ
ಪೋಗಿಯಾಕೆಯ ಶೀಲಮಹಿಮೆಯ ಕಂಡು ನಲಿಯುವೆನು
ಹೀಗೆ ನುಡಿಯಲು ಬೂದಿಯೋಗಿಯು
ಸಾಗಿರೆಂದವರ್ಗಿತ್ತು ಬೆಸನವ
ಬೇಗ ತಮ್ಮಯ ಮುಂದಿನಾ ಸಂಚಾರ ಬೆಳೆಸಿದರು ೧೧

ಇತ್ತಲಾ ಪಾಲ್ಕುರಿಕೆಸೋಮರು
ಹೊತ್ತು ಪೂಜಾಸಾಧನಂಗಳ
ಉತ್ತರಕೆ ಪಿರಿಪಲ್ಲಿ ಗ್ರಾಮಕೆ ಪೋದರುತ್ಸುಕದಿ
ಎತ್ತ ನೋಡಿದೊಡತ್ತ ಕುರುಬರೆ
ಸುತ್ತಿಸುತ್ತಾಡುವರು ಊರಿನ
ಸುತ್ತಲೆಲ್ಲಾ ತಿಪ್ಪೆಗಳೆ ಕಾಣುವವು ಕಂಗಳಿಗೆ ೧೨

ನೊಸಲಿನೊಳ್ಮೂರ್ ಬೆರಳ ಭಸ್ಮವು
ಎಸೆಯುತಿರಲಿಲ್ಲೊಬ್ಬರಿಗು ಸಹ
ಬಸವಳಿದು ಬಂದಂಥ ಸ್ವಾಮಿಯ ಪದಕೆ ಪೊಡಮಟ್ಟು
ಬೆಸಸಿದರು ಕೈಮುಗಿದು ಕುರುಬರು
ಬಸವ ತಂದೆಯೆ ನಿಮ್ಮನಿಲ್ಲಿಗೆ
ಅಸಮಮಹಿಮರೆ ಕಳಿಸಿಕೊಟ್ಟನೆ ಕುರುಬರಿದ್ದೂರ್ಗೆ ೧೩

ಏನು ಬೇಕೈ ತಂದೆ ನಿಮಗನು-
ಮಾನವೇತಕೆ ? ನಿಮ್ಮ ಪೂಜೆಗೆ
ಏನು ಬೇಕಾದುದನು ತಂದೊಪ್ಪಿಸುವೆವೈ ನಾವು
ಮಾನಿಗಳೆ ಬಸವಣ್ಣದೇವರ-
ನೂನ ದೇವಾಲಯದೊಳಗೆ ತಮ-
ಗೇನು ಕೊರತೆಯು ಬಾರದಂದದಿ ನೋಡಿಕೊಳ್ಳುವೆವು ೧೪

ಎನಲು ಕೇಳ್ದರು ಸೋಮನಾರ್ಯರು
ಮನುಜರೇ ನಿಮ್ಮೂರೊಳೋರ್ವರು
ವಿನುತ ಲಿಂಗಾಚಾರಶೀಲರು ಇಲ್ಲವೇನಲಲ !
ಏನು ಸಂಕಟ ಬಂದಿತಕ್ಕಟ !
ಊನವಪ್ಪುದು ನನ್ನ ಶೀಲವು
ಸ್ವಾನುಭವಿ ಲಿಂಗಾಂಗಿಯೋರ್ವನು ಇಲ್ಲವೇನಿಲ್ಲಿ ? ೧೫

ಕುರುಬನೋರ್ವನು ಪೇಳ್ದನವರಿಗೆ
ಕರಮುಗಿದು ಬಹುವಿನಯಭಾವದಿ
ಸರುವ ಶೀಲದ ಹೊನ್ನಮಾಂಬೆಯು ನಮ್ಮ ಊರಿನಲಿ
ಇರುತಿಹಳು ಸೈ ಲಿಂಗವಂತಳು
ಧರಿಸುವಳು ಭಸ್ಮವನು ನೊಸಲಿಗೆ
ಹೊರಡಿರಾಕೆಯ ಮನೆಗೆ ನಿಮ್ಮುಪಚಾರ ಮಾಡುವಳು ೧೬

ಎಂದು ಪೇಳ್ದಾ ಕುರುಬನವರಿಗೆ
ಚಂದದಿಂ ಮನೆದಾರಿ ತೋರಿಸಿ
ಮುಂದೆ ಕಳುಹಲು ಬಂದಳೋರ್ವಳು ನೀರ ಕೊಡಹೊತ್ತು
ನಿಂದು ನೋಡಿದರವಳ ಸೋಮರು
ಮಂದಹಾಸದಿ ನೊಸಲ ಭಸ್ಮದಿ
ತಂದ ಕೊಡವನ್ನಿಳುಹಿ ತಾ ಸಾಷ್ಟಾಂಗವೆರಗಿದಳು ೧೭

ಆರರೆ ! ಇವಳೆಂಥವಳೊ ಶಿವ ! ಶಿವ !
ಮರುಳೆ ತಿಪ್ಪೆಯೊಳಿಟ್ಟು ಕೊಡುವನು
ಉರುಳಿದಳು ಸಾಷ್ಟಾಂಗದಿಂದೀ ಹೊಲಸು ತಾಣದೊಳು
ಅರಿಯೆನಿವಳಾರೆಂಬುದಂ ನಾಂ
ಹಿರಿವಯದ ಮುದುಕಮ್ಮ ನಿರ್ಪಳು
ಅರಿಯಲಾರಳೆ ಶುದ್ಧಲಿಂಗಾಚಾರ ಶೀಲವನು ? ೧೮

ಎಂದು ಮನದೊಳು ಬಗೆದು ಆಕೆಗೆ
ಬಂದ ರೋಷದಿ ನುಡಿದರಾಗಳೆ
ಮಂದಮತಿಯಾಚಾರಭ್ರಷ್ಟಳು ನೀನು ಎಲೆ ಮುದುಕಿ
ಕುಂದನೆಣಿಸದೆ ತಿಪ್ಪೆಯೊಳು ಕೊಡ
ತಂದಿಳುಹಿ ಸಾಷ್ಟಾಂಗಗೈವರೆ ?
ಸಂದಿಹುದೆ ನಿನಗಿಂಥ ಶೀಲವು ಸೊಗಸದೆನಗಮ್ಮಾ ೧೯

ಸ್ವಾಮಿಯಾಡಿದ ನುಡಿಯನಾಲಿಸಿ
ಪ್ರೇಮದಿಂ ಕರಮುಗಿದು ಪೇಳ್ದಳು
ಸ್ವಾಮಿಗಳೆ ತಾವ್ ಪಾದವಿಟ್ಟಿಹ ತಾಣ ಸುಕ್ಷೇತ್ರ
ಈ ಮಹಾ ಸುಕ್ಷೇತ್ರದೊಳು ನಾ-
ನೀ ಮಹಾಪಾದಕ್ಕೆಯೆರಗಿದೆ
ಭೂಮಿ ಹೊಲಸಿದು ತಿಪ್ಪೆಯೆಂಬುವ ಭಾವ ನನಗಿಲ್ಲ ೨೦

ಚರರ ಚರಣವು ಶುದ್ಧವಲ್ಲವೆ ?
ಅರಿದವರು ತಾವಿಂತು ನುಡಿವರೆ ?
ಶರಣರಡಿಯಿಟ್ಟಾ ನೆಲವೆ ಸುಕ್ಷೇತ್ರವೆಂತೆಂದು
ಶರಣ ಬಸವೇಶ್ವರನು ಪೇಳ್ದುದ-
ನರಿಯಿರಾ ತಾವ್ ಚರವರೇಣ್ಯರು
ಬರಿದೆ ನನಗೇ ಮಂದಮತಿಯೆಂದೇಕೆ ಕರೆದಿಹಿರಿ? ೨೧

ಎನ್ನ ಶೀಲದೊಳೇನು ಕುಂದಿದೆ ?
ನಿನ್ನ ಶೀಲವದೆಂತೊ ತಂದೆಯೆ ?
ಸನ್ನುತರು ತಾವಾಚರಿಪ ಶೀಲವನು ನಾನರಿಯೆ
ತನ್ನ ದೇಹವ ಮಾತ್ರ ಜಲದಿಂ
ಚೆನ್ನದಿಂ ತೊಳೆತೊಳೆದು ಭಾವದೊ-
ಳುನ್ನತಿಯ ಪಡೆಯದಿರೆ ಫಲವೇನಾ ಕ್ರಿಯೆಗೆ ಜಿಲೆಯೇಂ ? ೨೨

ಚರವರರು ಅಡಿಯಿಟ್ಟ ತಾಣವು
ಪರಮ ಕ್ಷೇತ್ರವು ಪುಸಿಯೆ ? ಹೇಳಾ
ಅರಿಯಿರೇ ತಾವುಗಳು ಶಾಸ್ತ್ರಾಗಮವ ಬಲ್ಲವರು?
ಹರನು ಬೇರೆಯೆ ತಾವು ಬೇರೆಯೆ
ಹರನು ನಿಂದೀ ಸ್ಥಲದಿ ಕೊಡವ-
ನ್ನಿರಿಸೆ ಕುಂದೇನಾಯಿತಕ್ಕಟ ! ನೆಲವು ಶುಚಿಯಲ್ತೆ? ೨೩

ಮನವು ಭಾವವು ಶುದ್ಧವಿರದಿರೆ
ತನುವಿನಾ ಕ್ರಿಯೆಗೇನು ಬೆಲೆಯಿದೆ?
ತನುವಿನಾ ಕ್ರಿಯೆಯೊಂದೆ ಬಹು ಹೆಚ್ಚೆಂದು ಸಾಧಿಸುವ
ಘನತರದ ಭ್ರಾಮಕರ ಶೀಲವು
ನನಗೆ ಸೊಗಸದು ನೋಡು ತಂದೆಯೆ
ಮುನಿಸು ತಮಗೇತಕ್ಕೆ ಬಂದಿತು ಶಾಂತಚಿತ್ತರಲಾ ೨೪

ಬರಿದೆ ಬಾಹ್ಯಾಚರಣೆಯಾಕ್ಷೆಸಿ
ಜರಿವರೇಂ ಮರೆದಂತರಂಗವ ?
ಪರಿವೆ ಬೇಡವೆ ಸತ್ಯಶೀಲವದಾವುದೆಂಬುದರ ?
ಅರಿದೆನೇ ನಾ ತಿಪ್ಪೆಯೆಂಬುದ-
ನರಿದೆನೇ ತಾವ್ ಸಾಧಕರು ಯೆಂ-
ದರಿದೆನಲ್ಲವೆಯೊ ನೆಲವು ಪರಿಶುದ್ಧವಿಂತೆಂದು ೨೫

ಇದನು ಕೇಳ್ದಾ ಸೋಮನಾರ್ಯನ
ಎದೆಯು ಗಡಗಡ ನಡುಗಿತಕ್ಕಟ !
ಬಿದಿಯು ತನಗೊರೆಗಾಲ ತಂದಿಹನೆಂದು ಮನ ಮರುಗೆ
ಬದಿಯೊಳಿಹ ಪೆಣ್ಮಣಿಗೆ ಪೇಳ್ದನು
ಹದಿಬದೆಯು ನೀ ಜಾಣೆ ಸುವ್ರತಿ
ಸುವ್ರತಿ ನೀನದ್ವೈತಮಂ ಬಾಹ್ಯದೊಳು ಚರಿಸುವರೇ ? ೨೬

ಮನವು ಭಾವವು ಶುದ್ಧವಿರೆ ನೀ-
ನೆನಗೆ ಮನದೊಳು ನಮಿಸಬಾರದೆ ?
ಇನಿತು ಹೊಲಸಾಗಿರ್ದ ತಾಣದೊಳುರಳಬಹುದೇನು?
ತನುವಿಗಪವಿತ್ರತೆಯು ತಗಲದೆ ?
ಮನಕೆ ಹೇಸಿಕೆಯಾಗಲಿಲ್ಲವೆ ?
ಜನರು ನಿನ್ನಾಚರಣೆಯಂ ಕಂಡೇನು ನುಡಿದಾರು ? ೨೭

ಘನ ಶರಣೆ ನೀನಾಗಿ ನುಡಿದಿಹೆ
ತನುವು ಮೊದಲಿಗೆ ಶುದ್ಧವಿರಬೇ-
ಕೆನುವುದೆಮ್ಮಯ ಮತವು ತಿಳಿ ನೀಂ ಬಳಿಕ ಮನಭಾವ
ತನಗೆ ತಾನೇ ಶುದ್ಧಮಪ್ಪವು
ಜನಕೆ ನಿನ್ನಾಚರಣೆ ಯೋಗ್ಯವೆ ?
ಮನೆಯು ತಿಪ್ಪೆಯುನೆರಡನೊಂದೇ ಮಾಳ್ಪರೇನಮ್ಮಾ? ೨೮

ಶುದ್ಧವಾಗಿರಬೇಕು ತನುವಿದು
ಶುದ್ಧವಾಗಿರಬೇಕು ಮನ ತಾ
ಶುದ್ಧವಾಗಿಡಬೇಕು ಭಾವವು ಸತ್ಯವಿದು ತಾಯಿ
ಶುದ್ಧಮಾಗಿರೆ ಮನವು ಭಾವವ-
ಶುದ್ಧವಾಗಲು ತನುವು ಬಾಹ್ಯದಿ
ಸಿದ್ಧಶರಣರದೆಂತು ಮೆಚ್ಚುವರಮ್ಮ ಪೇಳೆನಗೆ ೨೯

ವಾದಿಸೆನು ನೆಡೆ ಮುಂದೆ ತಾಯಿಯೆ
ಹಾದಿ ಹಿಡಿ ಆಚಾರಬಾಹ್ಯರ
ಹಾದಿ ನಮಗೇಕಮ್ಮ ಭವಿತನವಂಟುವದು ನಮಗೆ
ಬಾಧೆಯಾದುದನರಿದು ಚರರಿಗೆ
ವಾದಿಸುವದಂ ಬಿಟ್ಟು ಶರಣೆಯು
ಪೋದಳತಿಶೀಘ್ರದೊಳು ತನ್ನಯ ಗೃಹಕೆ ಕೊಡವೊತ್ತು ೩೦

ಮಡಿಯ ಮೈಲಿಗೆಯೆಣಿಸದೆನಿತುಂ
ಕೊಡನ ಮನೆಯಲ್ಲಿಳುಹಿ ಸಾಧ್ವಿಯು
ಅಡಿಗೆಮಾಡಿದಳಲ್ಲಿ ತಾ ಪರಿಶುದ್ಧಭಾವದಲಿ
ಒಡನೆ ಹೊರಬದಿಯಲ್ಲಿಯೋರ್ವನು
ಒಡತಿ ಹೊನ್ನಮ್ಮನ ಮನೆಯಿದೇಂ ?
ಬಡವ ಜಂಗಮಮೂರ್ತಿಯಾಕೆಯ ಮನೆಗೆ ಬಂದಿಹನು ೩೧

ಎಂದ ಶಬ್ದವ ಕೇಳಿದಾಕ್ಷಣ
ನಂದದಿಂದಾ ಸಾಧ್ವಿಸತ್ವರ-
ದಿಂದ ಬಂದಾ ಸ್ವಾಮಿಯಡಿದಾವರೆಗೆ ಪೊಡಮಟ್ಟು
ಬಂದಿರೆನ್ನಯ ಗೃಹಕೆ ಪೂಜ್ಯರೆ
ಇಂದು ನಾಂ ಬಹು ಧನ್ಯಳಾದೆನು
ಬಂದು ಲಿಂಗಾರ್ಚನೆಯ ಮಾಡುವುದೆಂದು ಬಿನ್ನವಿಸೆ ೩೨

ದಾರಿಯಲಿ ಕಂಡವಳು ಇವಳೆಂ-
ದಾರಯಿದು ಸೋಜಿಗದಿ ಕೇಳ್ದನು
ನಾರಿಮಣಿ ನನ್ನೊಡನೆ ವಾದಿಸಿದವಳು ನೀನಲ್ಲೆ ?
ಯಾರು ನೀಂ ? ಹೊನ್ನಮ್ಮನೆಂಬರೆ ?
ಮಾರಹರ ಬೂದೀಶ ಪೇಳ್ದನು
ಸಾಗುವರು ನಿನ್ನನ್ನು ಸರ್ವಾಚಾರಯುತಳೆಂದು ೩೩

ಅಹುದು ಗುರುವೇ ನಾನೆಯಾಕೆಯು
ಸಹಿಸಿ ಕ್ಷಮಿಸಿರಿ ನನ್ನ ತಪ್ಪನು
ಮಹಿತಮಹಿಮರು ತಾವು ನನ್ನೀ ಗೃಹದಿ ಪೂಜೆಯನು
ಬಹು ಸೊಗದಿ ಗೈಯುವುದು ತಂದೆಯೆ
ಸಹಜದಿಂದಣಿಗೈವೆನೆಲ್ಲವ-
ನಹುದಹುದುಯೆಂಬಂತೆ ಕೊರತೆಯು ಬಾರದಂದದೊಳು ೩೪

ದಿಗಿಲು ಚಿತ್ತಾ ಸೋಮನಾರ್ಯನಿಗೆ
ಬಗೆಯೊಳೇನುಂ ಹೊಳೆಯದಾಯಿತು
ಬಗೆದರಾ ಬೂದೀಶ ಪೇಳ್ದುದನಂದು ಮನದಲ್ಲಿ
ಬಗೆದರಾಕೆಯ ಘನತೆಯಂ ಸಹ
ಬಗೆಯೆ ಊರೊಳು ಕುರುಬರೆಲ್ಲರು
ಮುಗಿಲೆ ತಾ ಹರಕೊಂಡು ಬಿದ್ದಂತಾಯ್ತು ಮೈಮೇಲೆ ೩೫

ಪೊನ್ನಮನು ಚರವರರ ಮನದಳ-
ಲನ್ನು ಭಾವಿಸಿ ಪೇಳ್ದಳವರಿಗೆ
ಸನ್ನುತಾತ್ಮರೆ, ಬಿಡಿರಿ ಚಿಂತೆಯ ನಡೆಯಿರೈ ಒಳಗೆ
ವನ್ನುತವಗಂ ಕರೆದುತರಲೊಳ-
ಗುನ್ನತದ ಸ್ವಚ್ಛತೆ ವ್ಯವಸ್ಥೆಗ-
ಳನ್ನು ಕಂಡತಿ ಚಕಿತರಾದರು ಶಾಂತಿಪೊಂದಿದರು ೩೬

ಮನೆಯು ಸಾರಣೆಕಾರಣೆಗಳಿಂ
ವನದ ಪತ್ರಿಸುಮನಗಳಿಂ ಮೋ-
ಹನಿದು ಘಮುಘಮು ವಾಸಬರುವ ಸುಗಂಧದ್ರವ್ಯಗಳಿಂ
ಎನಿತೆನಿತೊ ಸೊಗಸಾಗಿ ತೋರಿರೆ
ಮನೆಯ ಸಂಸ್ಕೃತಿಯನ್ನು ಕಂಡುರೆ
ಘನಮಹಿಮರನುವಾದರಲ್ಲಿಯೆ ಪೂಜೆಯೆಸಗಲ್ಕೆ ೩೭

ಮನೆಯು ಬಡವಳದಾದೊಡೇಂ ತಾ
ಮನವು ಘನವಾಗಿರ್ಪುದಾಕೆಯ
ನೆನೆದನಾದೊಡು ಸೋಮನಾರ್ಯನು ಮೊಸಲನ್ನವನು
ಶುನಕ ಮುಟ್ಟಿದ ತೆರದೊಳಾತನ
ಮನವು ಕಸಿವಿಸಿಗೊಳ್ಳಹತ್ತಿತು
ಅನಘ ಭಕ್ತಳು ತಿಪ್ಪಿಯೋಳ್ಕೂಡವಿಳುಹಿದುದ ನೆನೆದು ೩೮

ಕೊರಗುತಲಿ ಸ್ನಾನವನು ತೀರಿಸಿ
ಮರಗುತರ್ಚನೆ ಪೂರಯಿಸಿ ಪ-
ಲ್ಗಿರಿದು ಬಂದೆಡೆಯನ್ನು ತನ್ನಿಷ್ಟಕ್ಕೆ ಸಲ್ಲಿಸುತ-
ಲಿರುತಿರಲು ಮಗಿಯಲ್ಲಿ ಹಿಂಡಿದ
ಕುರಿಯ ಹಾಲನು ಕಾಸಿ ತಂದಾ-
ದರಿಸಿ ಕೊಟ್ಟನು ಕುರುಬನೋರ್ವನು ಹೊನ್ನಮಗೆ ಜವದಿ ೩೯

ಮಗಿಯ ಹಾಲನು ತಂದು ಸ್ವಾಮಿಯು
ಅಗಲವಾದೆಡೆಬಟ್ಟಲೊಳು ತಾ
ನಗುನಗುತೆ ಪಾಯಸದಿ ಸುರುವಿದಳಾಗ ಭಕ್ತಿಯಲಿ
ಮುಗಿಲು ತನ್ನಯ ಮೇಲೆ ಕೆಡೆದಂ
ತಾಗಲಾ ಸ್ವಾಮಿಗಳು ದುರುದುರು
ನೆಗಹಿ ಕಂಗಳ ನೋಡಿದರು ಹೊನ್ನಮ್ಮನಾಸ್ಯವನು ೪೦

ಏನು ಮಾಡಿದೆಯಮ್ಮ ಛೀ ಥೂ !
ಏನನರ್ಥವಿದಮ್ಮ ಕರುಬನು
ತಾನೆ ಕೊಟ್ಟಿಹ ಕುರಿಯ ಹಾಲನು ನನಗೆ ನೀಡುವರೆ ?
ಏನು ನಿನ್ನಾಟವಿದು ಶರಣೆಯೆ ?
ಮಾನಹಾನಿಯ ಮಾಡಲೆಂದೇ
ಹೀನ ಗೈಮೆಗೆ ನೀನು ಎಳಸಿದೆಯಲ್ಲ ಛೀ ಮೂಢೆ ೪೧

ಹೇಗೆ ಊಟವ ಮಾಡಲಮ್ಮಾ ?
ಹೇಗೆ ಸಲ್ಲುವದೆಡೆಯು ಲಿಂಗಕೆ ?
ರೋಗಿಗೌಷಧ ಬಿಟ್ಟು ವಿಷವುಂ ಕೊಟ್ಟ ಪರಿಯಾಯ್ತು
ಹೀಗೆ ನುಡಿಯಲು ಎಡೆಯ ಪಾಯಸ-
ವಾಗ ತುಂಬಿತು ಬಾಲಹುಳಗಳ
ಯೋಗದಿಂ ಗುಬುಗುಬನೆ ಕ್ರಿಮಿಗಳು ಜಿನುಗುನತ್ತಿವವು ೪೨

ನೋಡಿ ತಾನಿದ ನುಡಿದಳಾಕೆಯು
ಏಡಿಸುವರೇಂ ತಂದ ಪಾಲನು ?
ಕೇಡಿಗನೆ ಕುರಿವಾಲ ಭಕ್ತಿಯೊಳಿತ್ತ ಕುರಿಗಾರ ?
ನೀಡಿದನ್ನ ಪ್ರಸಾದವಲ್ಲವೆ ?
ಕೋಡಿ ಮನಕದುಹೇಯವೆನಿಸಿತೆ ?
ಕಾಡಲಾರದೆ ಮಾಯೆ ಹುಳಗಳ ರೂಪದಿಂ ನಿಮ್ಮ ೪೩

ಕುರುಬನಾ ಭಕ್ತಿಯನು ಮರೆದಿರಿ
ಶರಣೆಯರ್ಪಣವನ್ನು ತೊರೆದಿರಿ
ಶರಣಹಸ್ತವು ಮುಟ್ಟಿದನ್ನ ಪ್ರಸಾದವಲ್ಲೇನು?
ಚರವರೇಣ್ಯರ ಹಸ್ತ ಮುಟ್ಟಲು
ಕರೆದ ಪಾಲ್ ಸುಧೆಯಾಗದಿರ್ಪುದೆ ?
ಬರಿದೆ ನೀವಮೃತಕ್ಕೆ ವಿಷವೆಂಬುವರೆ ಚರವರರೆ ೪೪

ಮುದಗು ನಿಮ್ಮೆದೆಯಲ್ಲಿ ನೆಲಸಿರೆ
ಗದಗದನೆ ನಡಗುತ್ತಲಿರ್ಪಿರಿ
ಸದಮಲರು ತಾವಿರ್ದೊಡೇತಕೆ ಕ್ರಿಮಿಗಳುದಿಸಿದವು ?
ಹೃದಯದೊಳ್ಪರಿಶುದ್ಧ ಭಾವನೆ-
ಯೊದವಿರಲು ಹೀಗಾಗುತಿದ್ದಿತೆ ?
ಮದವು ನಿಮ್ಮೊಳು ತುಂಬಿಕೊಂಡಿದೆ ವ್ಯರ್ಥಶೀಲಗಳ ೪೫

ಕೇಳಿಯೊ ನುಡಿ ಹೊನ್ನಮಾಂಬೆಯು
ಪೇಳಿದನು ಸೋಮಾರ್ಯನಾಗಳೆ
ಪಾಳುನುಡಿಯಿದು ಹೀನಗ್ಕೈಮೆಯು ನಿನ್ನದೌ ಮೂಢೆ
ಹೇಳಿ ಕೇಳೀ ಕುರಿಯ ಹಾಲನು
ಖೂಳತನದಿಂದೆಡೆಯ ಮಾಡಲು
ಪೇಳು ನಿಂತವು ಬಾಲಹುಳಗಳು ಯಾರ ದೋಷವದು ? ೪೬

ಶರಣೆ ನಾನೆಂದೆಂಬ ಜಂಬವ-
ನಿರದೆ ನೀ ಸಲೆ ಕೊಚ್ಚಿಕೊಳ್ಳುವೆ
ಶರಣೆಯಾದೊಡೆ ಬಾಲಹುಳಗಳು ಕಾಣದಂತೆಸಗು
ಭರದಿ ತವ ಕರಸ್ಪರ್ಶಮಹಿಮೆಯ-
ನರಿಯುವೆನು ನಾಂ ಮಂದಭಾಗ್ಯಳೆ !
ಚರನು ನಾನಿರ್ದಿದನು ಪರಿವರ್ತಿಸುವುದಸದಳವು ೪೭

ಹೊನ್ನಮಾಂಬೆಯು ತತ್‌ಕ್ಷಣವೆ ತಾ–
ನನ್ನ ಪಾಯಸವನ್ನು ಮುಟ್ಟಲು
ಚಿನ್ನದಂತೆ ಪ್ರಸಾದ ಹೊಳೆಯಿತು ಹಾಲು ಸುಧೆಯಾಯ್ತು
ಬನ್ನಬಡುತಿಹ ಸ್ವಾಮಿಗೆಚ್ಚರ
ವಿನ್ನು ಸಲೆ ತಾನಾಗದಿರದೇ?
ಹೊನ್ನಮಾಂಬೆಯು ಚರಣಕಭಿನಮಿಸಿದನು ಸೋಮಾರ್ಯ ೪೮

ಅನಿತರೊಳ್ಬೂದೀಶನಲ್ಲಿಗೆ
ಜನಿತ ಹರ್ಷದಿ ಬಂದು ನಿಂದನು
ಮುನಿದ ಸೋಮರು ಲಿಂಗದೆಡೆಯಂ ಮುಗಿಸಿ ಬಂದಿಹರು
ಮುನಿವರನ ಬೂದೀಶನಂ ಸಲೆ
ಸನಿಹದಲ್ಲಿಯೆ ಕಂಡು ಪಾದಕೆ
ಮಣಿದಿಹರು ನೆನೆನೆನೆದು ಶರಣೆಯ ಘನತೆಯಂ ಮನದಿ ೪೯

ಶರಣೆ ಬಂದೆರಗಿದಳು ಯೋಗಿಯ
ಚರಣಯುಗ್ಮಕೆ ಭಕ್ತಿಭಾವದಿ
ಚರವರೇಣ್ಯನು ದೂರದಿಂದರಿದವಳ ನಿಲವನ್ನು
ಪಿರಿಯ ಯೋಗಾಭ್ಯಾಸಬಲದಿಂ
ಹೊರಟು ಬಂದರು ಪಿರಿಯಪಲ್ಲಿಗೆ
ಶರಣೆಯನ್ನಾದರಿಸಿ ಸೋಮರಿಗರಿವ ನೀಡಲ್ಕೆ ೫೦



ಶಿವಾನುಭವ ಮಂಟಪ

ಸೋಮನಾರ್ಯಗೆ ಯೋಗಿವರ್ಯರು
ಪ್ರೇಮದಿಂ ತಬ್ಬುತ್ತೆ ನುಡಿದರು
ನೇಮನಿತ್ಯಾಚಾರಶೀಲದ ತತ್ತ್ವಮಂ ನೀವು
ಈ ಮಹಾಶರಣೆಯುಳ ಕೃಪೆಯಿಂ
ಸೋಮನಾರ್ಯರೆ, ತಿಳಿದಿರಲಿಲ್ಲವೆ ?
ಕಾಮಿನೀಮಣಿಯಲ್ಲಿ ಕಸರುಂಟೇನು ಪೇಳಿರೆಲಾ ೫೧

ಶಿರವಬಾಗಿಸಿ ಸೋಮನಾರ್ಯರು
ಒರೆದರಾ ಶಿವಯೋಗಿವರ್ಯಗೆ
ಚರವರರೆ ನಾಟಕವ ಹೂಡಿದಿರೆನ್ನ ತಿದ್ದಲ್ಕೆ
ಅರಿಯೆನೇನಾನದನು ಗುರುಗಳೆ,
ಬರಿದುಮಾಡಿದಿರೆನ್ನ ಶೀಲವ
ಹಿರಿಯಳಾದಳು ಶರಣೆ ನಾನವಳಿಂದ ಸುಕೃತನಲಾ ೫೨

ಬೇಗ ಪಡೆದಪ್ಪಣೆಯ ಸೋಮರು
ಸಾಗಿರಲು ತಮ್ಮೂರ್ಗೆ ಚಚ್ಚರ-
ವಾಗಿ ಬೂದೀಶ್ವರನು ಆಶೀರ್ವದಿಸಿ ಶರಣೆಯನು
ರಾಗದಿಂದಾವೂರ ತೊರೆದನು
ಬಾಗಿ ನಮಿಸಿದಳಾಗ ಶರಣೆಯು
ಯೋಗಿಯಾಕೆಯ ಭಾವಶುದ್ಧಿಯ ಕಂಡು ಬೆರಗಾಗೆ ೫೩

ಶರಣೆ ಶ್ರೀಗುರು ಸೋಮನಾರ್ಯರಿ-
ಗರಿಕೆಗೈದಳು ಭಕ್ತಿಯಿಂದಲಿ
ಕರವ ಜೋಡಿಸಿ ಮುಗ್ಧಭಕ್ತರನುದ್ಧರಿಸುವುದಕೆ
ಗುರುವರೇಣ್ಯರೆ ನಿಮ್ಮ ಮೇಲಿದೆ
ಹಿರಿಹೊಣೆಯು ದಯವಿಟ್ಟು ಕೇಳಿರಿ
ಕಿರಿಯ ಕುಲದವರನ್ನು ಪೊಲಸಿಂ ದೂರವಿರಿಸಿರೆಲಾ ೫೪

ಹೊಲಸು ತುಂಬಿದೆ ನಮ್ಮ ನಾಡೊಳು
ಹೊಲೆ ಮೊದಲು ಹದಿನೆಂಟು ಜಾತಿಯ
ಮಲಿನ ಭಾವಿಕರೊಳರು ಅವರನ್ನೆತ್ತಿಕೊಂಬವರು
ಒಳರೆ ಪೇಳಿರಿ ಸೋಮನಾರ್ಯರೆ ?
ಕುಲವು ಜಂಗಮಕುಂಟೆ ಹೇಳಿರಿ
ತಿಳಿದು ನೀವವರನ್ನು ನಿರ್ಮಲಗೊಳಿಸೆ ಕುಂದುಂಟೆ ೫೫

ಶಿವನ ಮಕ್ಕಳು ಕೀಳು ಕುಲವರು
ಭವಿಗಳೆಂದೆನಬಹುದೆ ಪೇಳಿರಿ
ತವೆ ಮಹಾಪಾತಕವು ದೂರಿಡುತಿರ್ಪುದವರನ್ನು
ತವಕದಿಂ ಲಿಂಗವನು ಧರಿಸಿರಿ
ಶಿವಭಸಿತರುದ್ರಾಕ್ಷಿಯಿತ್ತುರೆ
ಅವರ ನಮ್ಮವರನ್ನು ಮಾಡಿರಿ ಶಿವನು ಮೆಚ್ಚುವನು ೫೬

ಹೊಲಸ ಕಂಡೊಡೆ ದೂರ ಪೋಪಿರಿ
ಹೊಲಸ ಶುದ್ಧಿಯ ಮಾಡಲರಿಯಿರಿ
ಹೊಲಸಿನಿಂದೇ ದೇಹ ನಿರ್ಮಿತವಾಗಿಹುದು ಪುಸಿಯೇ ?
ಹೊಲಸು ದೇಹದ ಒಳಗು ಹೊರಗಿದೆ
ಹೊಲಸನೆರಡಂ ಶುದ್ಧಗೊಳಿಪುದು
ಬಲಯುತರ ಲಕ್ಷಣವದಲ್ಲವೆ? ತಿಳಿದು ನೋಡಿರೆಲಾ ೫೭

ದೇಹದೊಳು ಕಾಮಾದಿ ದುರ್ಗುಣ
ದಾಹ ತುಂಬಿದೆ ಕಳೆಯಲರಿಯದೆ
ದೇಹ ಬಾಹ್ಯದ ಹೊಲಸ ಕಳೆವುದು ಜೀವನದ ಗುರಿಯೇ ?
ದೇಹ ಬಾಹ್ಯದಿ ಶುದ್ಧಮಾದೊಡು
ದೇಹದಾಂತರ್ಯದೊಳು ಹೊಲಸಿರೆ
ದೇಹಿಗೆನಿತುಂ ಬೆಲೆಯು ಬಾರದು ತಿಳಿದು ನೋಡಿರೆಲಾ ೫೮

ಕುರುಬರಿರ್ದಪರಿಲ್ಲಿಯೆಲ್ಲರು
ಶರಣಬಸವನೊಳಿಟ್ಟು ಭಕ್ತಿಯ
ಚರಿಸುವರು ಭಾವಿಕರು ನೀವವರುದ್ಧರಿಸಬೇಡಾ ?
ಚರರು ಚರಿಸುವ ಶೀಲವಿದು ನೀ–
ವರಿದುಮೇಲ್ಪಂಕ್ತಿಯನು ಹಾಕಿರಿ
ಬರಿದೆ ಮಡಿ ಹುಡಿ ಮುಟ್ಟಿತಟ್ಟೀಯೆಂಬ ಭ್ರಮೆಯೇಕೆ ? ೫೯

ಅವರೊಡನೆ ನೀವ್ ಕೂಡಿಯುಣ್ಣಿರಿ
ಅವರ್ಗೆ ನೈರ್ಮಲ್ಯವನು ಕಲಿಸಿರಿ
ಅವರ ಧಾರ್ಮಿಕ ನೈತಿಕಂಗಳ ಮಟ್ಟವೇರಿಸಿರಿ
ಅವರೊಳಿರ್ದಜ್ಞಾನಮಂ ಮೇ–
ಣವರ ಡಾಂಭಿಕ ವೃತ್ತಿಯಂ ಮೇ–
ಣವರೊಳಿರ್ದಾ ಮೂಢ ನಂಬುಗೆಗಳನು ನೀಗಿರೆಲಾ ೬೦

ಎಂದೆನಲು ಎಚ್ಚರವು ಹುಟ್ಟಿಹು-
ದಂದು ಪಂಡಿತ ಸೋಮನಾರ್ಯರಿ-
ಗಿಂದು ಬೂದೀಯೋಗಿಯೇ ಹೊನ್ನಮನ ಬಾಯಿಂದೆ
ಚೆಂದದಿಂ ಬುದ್ಧಿಯನು ಕಲಿಸಿದ-
ನೆಂದು ಕುರುಬರಿಗೆಲ್ಲ ದೀಕ್ಷೆಯ-
ನಂದದಿಂ ಸಲೆ ಗೈದು ಪಾವನರನ್ನು ಮಾಡಿದರು ೬೧

ಹೊರಗೆ ಮಡಿಹುಡಿಯನ್ನು ತೋರಿಸಿ
ಬರಿದೆ ದೊಡ್ಡವರೆಂದು ಮೆರೆಯುವ
ಅರೆ ಮರುಳ ಮಾನವರಿಗೀ ಹೊನ್ನಮ್ಮನಾಖ್ಯಾನ
ಕರುಣಿಪುದು ಅಂತರ್ಯಜ್ಯೋತಿಯ
ಚರವರ ಶ್ರೀ ಬೂದಿಯೋಗಿಯು
ಪರಮ ಲೀಲೆಯನೆಸಗಿ ತೋರಿದನವಳ ಮಹಿಮೆಯನು ೬೨

**ಅಂತು ಆರನೆಯ ಸಂಧಿಗೆ ೬೨ ಪದ್ಯಕ್ಕೆ ಮಂಗಲಮಕ್ಕುಂ**

**— ಭದ್ರಂ ಶುಭಂ ಮಂಗಲಂ —**

ಶ್ರೀಗುರುಬಸವಲಿಂಗಾಯ ನಮಃ

# ಏಳನೆಯ ಸಂಧಿ

ಸೂಚನೆ- ಹೊರಟು ಸಿಂಗರಪಲ್ಲಿ ಗ್ರಾಮಕೆ
ಭರದಿ ಮುಂದೆ ಸಿರಾಳಕೊಪ್ಪಕೆ
ತೆರಳಿದರು ಬೆಳವಾಣಿಮರಡಿ ಕಿರಾತರಾ ನೆಲೆಗೆ

## ಸಿಂಗರಪಲ್ಲಿ

ಧಾರುಣೀತಲದಲ್ಲಿ ಮೆರೆವುದು
ಮೀರಿ ಸಿಂಗರಪಲ್ಲಿಯೆಂಬುವ
ಊರು ಸದ್ಭಕ್ತರ ಸಮೂಹದಿ ಪಂಡಿತೋತ್ತಮರಿಂ
ವೀರಶೈವಾಚಾರಶೀಲರು
ಪಾರಮಾರ್ಥಿಕ ತತ್ತ್ವವೇತ್ತರು
ಸಾರಿಹರು ಬೂದೀಶ್ವರರು ಆವೂರಿಗೊಂದು ದಿನ ೧

ಇದ್ದರೀ ಗ್ರಾಮದೊಳಗೀರ್ವರು
ಮುದ್ದು ಮೋಹದ ಗಂಡ ಹೆಂಡಿರು
ಹೊದ್ದದೆನಿತುಂ ಶುದ್ಧ ಚರಿತೆಗೆ ಕುಂದ ಸಾತ್ವಿಕರು
ಉದ್ದ ನೀರಿಗೆ ಪೋಗದಲೆ ತಾ-
ವಿದ್ದುದರೊಳುರೆ ಸೇವೆಗೈಯುತೆ
ತಿದ್ದಿ ಪಳಗಿದ ಶುದ್ಧದಾಸೋಹಿಗಳು ಎನಿಸಿಹರು ೨

ಶಿವನು ಪಾರ್ವತಿಯೆಂಬ ಪೆಸರಿಂ
ಭವಶರಧಿ ದಾಂಟುವರು ಭಕ್ತಿಯೊ-
ಳವಿರತಂ ಬಸವೇಶ ಸಾರಿದ ಕಾಯಕವ ಚರಿಸಿ
ತವೆ ಸುಯೋಗಿಯು ಬಳಿಗೆ ಬಂದಾ
ಶಿವನು ಪಾರ್ವತಿ ನಮಿಸಿ ಪಾದಕೆ
ಸುವಿನಯದಿ ಸನ್ನಿಧಿಗೆಯರಿಕೆಯ ಮಾಡಿಕೊಂಡಿಹರು ೩

ಚರವರೇಣ್ಯರೆ ನಮ್ಮ ಗ್ರಾಮದಿ
ಚರಣವಿಟ್ಟಿರಿ ನಾವು ಧನ್ಯರು
ಕರುಣದಿಂ ತಾವಿಂದು ನಮ್ಮಯ ಗೇಹಕೈತಂದು
ಸರಸ ಲಿಂಗಾರ್ಚನೆಯನೆಸಗುತೆ
ಹರುಷವೀಯಲು ಬೇಕುಯೆಂದೆನೆ
ಗುರುವರನು ಹೊರಪೊಂಟನಲ್ಲಿಗೆ ಭಕ್ತಹಿತಕಾಗಿ ೪

ಗುರುಗಳಿಗೆ ಸಲೆ ಸ್ನಾನ ಮಾಡಿಸಿ
ಪಿರಿಯ ಆಸನದಲ್ಲಿರಿಸಿ ಸಲೆ
ಮಿರುಪ ಪೂಜೆಗೆ ಪತ್ರಿ ಪುಷ್ಪಾದಿಗಳನಣಿಗೊಳಿಸಿ
ಕರ ಮುಗಿದು ನಿಂದಿರ್ದರೀರ್ವರು
ಮರೆತು ನಂದಾದೀಪ ಹಚ್ಚದೆ
ಅರಿದನಾ ಶಿವಯೋಗಿ ತಾನಿದರಂತವನು ಮನದಿ ೫

ಇವರು ಸಲೆ ಹತ ಭಾಗ್ಯರಕ್ಕಟ!
ಶಿವನು ಕೊಟ್ಟಿಲ್ಲಿವರ್ಗೆ ಪುತ್ರನ
ತವೆ ಸುಪುತ್ರನು ಬೇಕು ಮನೆತನಕೋರ್ವ ಕುಲದೀಪ
ಶಿವ ಶಿವಾ ! ತಾವೇಕೆ ಮರೆತರೊ !
ಶಿವನ ಪೂಜೆಗೆ ದೀಪ ಹಚ್ಚದೆ
ಭವವ ಹೊದ್ದಿದರಲ್ಲ ಭಕ್ತರು ನೆನಪನಾನೀವೆ ೬

ಎಂದು ಯೋಚಿಸಿ ಯೋಗಿವರ್ಯನು
ಮುಂದಹಾಸದಿ ಪೇಳ್ದನವರಿಗೆ
ಇಂದು ನೀವೇತಕ್ಕೆ ಮರೆತಿರಿ ದೀಪ ಮುಡಿಸುದಕೆ ?
ತಂದು ಹಾಕಿರಿ ಪಣತಿಗೆಣ್ಣೆಯು–
ನೆಂದೆನಲು ಕಾತರದಿ ಪೆಣ್ಮಣಿ
ಬಂದು ತಾನೊಳಹೊಕ್ಕು ನೋಡಲು ಎಣ್ಣೆ ತೀರಿಹುದು ೭

ತಡವ ಮಾಡದೆ ಗಂಡನಿಗೆ ತಾ-
ನೊಡನೆ ಪೇಳ್ದಳು ಸತಿಯು ನೆರೆಯಂ–
ಗಡಿಯೊಳೆಣ್ಣೆಯು ಬೇಗ ತರಬೇಕೆಂದು ಆತುರದಿ
ಓಡಿದನು ಅಂಗಡಿಗೆ ಗಂಡನು
ಬೇಡಿದನು ಎಣ್ಣೆಯನು ಸೆಟ್ಟಿಯು
ಬಾಡಿರಲು ಮೊಗ ಪೇಳಿದನು ತಾನೆಣ್ಣೆಯಿಲ್ಲೆಂದು ೮

ಬಂದನಾತನು ತಲೆಯ ತಗ್ಗಿಸಿ
ನಿಂದನಾಗುರುವರನ ಸಮ್ಮುಖ-
ದೊಂದನಾಡದೆಯೊರ್ವರೆದೆ ಡವಡವನೆ ಹಾರಿಹುದು
ಸಂದಳಿಲ್ಲವು ದೀಪ ಶಿವನಿಗೆ–
ಯೆಂದು ಯೋಗಿಯು ನೀರ ಪಣತಿಗೆ
ಚೆಂದದಿಂ ಸಲೆ ಹಾಕಿ ದೀಪವನುರಿಸಿದನು ನೋಡಾ ೯

ಅಚ್ಚರಿಯ ಪೊಂದಿರ್ದರಿದು ದಿಟ !
ಎಚ್ಚರವು ಪುಟ್ಟಿತ್ತು ಮನದೊಳು
ಮೆಚ್ಚುವನೆ ಶಿವ ನಮ್ಮಯಿ ತಪ್ಪನ್ನುಯೆಂದೆನುತ
ಹುಚ್ಚು ಹಿಡಿದಂತಾಗೆ ದಂಪತಿ–
ಯೊಚ್ಚತಂ ನುಡಿಯಾಡದೆನಿತುಂ
ನುಚ್ಚುನೂರಾಯ್ತೆಮ್ಮ ಭಕ್ತಿಯಿದೆಂದು ನೊಂದಿಹರು ೧೦

ಲಿಂಗಪೂಜೆಯ ಮುಗಿಸಿ ಯೋಗಿಯು
ಲಿಂಗ ಪರಸಾದವನು ಸೇವಿಸಿ
ಭಂಗಗೊಂಡಾ ಗಂಡಹೆಂಡರಿಗಿಂತು ಪೇಳಿದನು
ಲಿಂಗಭಕ್ತರು ನೀವು ದಿಟವೈ
ಜಂಗಮದ ದಾಸೋಹಿಗಳ್ ನಿಜ
ಲಿಂಗ ದೇವಗೆ ನೀವು ಮಕ್ಕಳ ಬೇಡಿ ಬಂದಿಲ್ಲ ೧೧

ಶಿವನ ನಿಯತಿಯ ಮೀರಲಪ್ಪುದೆ ?
ಕುವರ ನಮಗಿಲ್ಲೆಂಬ ಚಿಂತೆಯ
ತವಿಸಿ ಚರದಾಸೋಹವನು ಸಾಗಿಸಿರಿ ಪ್ರತಿನಿತ್ಯ
ಭುವನದೋಳ್ ಬಡ ಮಕ್ಕಳನಿಬರು
ತವೆ ಅನಾಥ ಕುಮಾರರೆಷ್ಟೋ !
ಕವಿದಿಹರು ಕಾಪಾಡಿರವರನು ಶಿವನು ಮೆಚ್ಚುವನು ೧೨

ಹೊಟ್ಟೆಗನ್ನವನಿತ್ತು ಸಲಹಿರಿ
ಬಟ್ಟೆಬರೆಗಳನಿತ್ತು ಕಾಯಿರಿ
ಕೊಟ್ಟು ಪುಸ್ತಕ ಪಾಟಿಗಳ ಮನಗೊಟ್ಟು ರಕ್ಷಿಸಿರಿ
ದುಷ್ಟ ರೋಗಾದಿಗಳಿಗೌಷಧ–
ವಿಟ್ಟು ಬಡಬಗ್ಗರನು ಉಳಿಸಿರಿ
ನೆಟ್ಟನರಿಯಿರಿಯಿದುವೆ ಚರದಾಸೋಹವಿಂತೆಂದು ೧೩

ಮಕ್ಕಳಿಲ್ಲದವರಿಗೆ ಸದ್ಗತಿ–
ಯಕ್ಕುದಿಲ್ಲೆಂದಾಡುವದು ಜನ
ದುಃಖಬಡುವರು ಮಕ್ಕಳೆಮಗಿಲ್ಲೆಂಬ ಹಂಬಲದಿ
ಮಕ್ಕಳಂ ಶಿವನಲ್ಲಿ ಪಡೆಯದೆ
ದುಃಖಿಸಿದೊಡೇಂ ಫಲವು ಪೇಳಿರಿ
ನಕ್ಕು ನಲಿದಾಡಿಸಿರಿ ಪೆರವರ ಮಕ್ಕಳಂ ನೀವು ೧೪

ಹರನು ಸದ್ಗತಿಯೊವನ್ನೆ ದಿಟ
ಹರನ ಇಚ್ಛೆಯನರಿದು ಸರ್ವರು
ಚರಿಸಬೇಡವೆ ನಮ್ಮ ಕೈಯೊಳಗೇನು ತಾನಿಹುದು?
ಪರರಿಗುಪಕೃತಿ ಗೈವ ಕಾರ್ಯದಿ
ಸರುವ ಸಂಪದ ವೆಚ್ಚ ಮಾಡಲು
ಹರನು ಸದ್ಗತಿಯೀಯನೇನ್ನೆ? ಸಂಬಿರೀ ನುಡಿಯ ೧೫

ಎಂದು ಬೋಧಿಸಿ ಯೋಗಿಯಲ್ಲಿಂ
ಮುಂದೆ ನಡೆದನು ಬಳಿಕ ದಂಪತಿ-
ಯೊಂದೆ ಮನದಿಂ ಯೋಗಿ ಪೇಳ್ದಂದದೊಳು ಚರಿಸಿದರು
ಇಂದುಧರಕೃಪೆವಡೆದ ಭಕ್ತರು
ಮಂದಭಾಗ್ಯರೆ? ಪುಸಿಯು ಆ ನುಡಿ
ನಂದನನುಯಿಲ್ಲದೊಡೆ ತಾ ಲಿಂಗಯ್ಯ ಮಗನಲ್ಲೇಂ ? ೧೬

ಸಿರಾಳಕೊಪ್ಪ

ಪರಮಯೋಗಿ ಸಿರಾಳಕೊಪ್ಪಕೆ
ಬರಲು ಆತನ ಕೂಡು ಜನಗಳು
ಪುರದಿ ಸುದ್ದಿಯ ಮುಟ್ಟಿಸಲು ಹಿರಿಗೌಡನಾತುರದಿ
ಪುರದ ಭಕ್ತರ ಮೇಳದೊಡನೈ-
ತರುತ ಯೋಗಿಯು ನೆರೆಯ ಮಾವಿನ
ಮರದಡಿಯೊಳಾನಂದದಿಂ ಕುಳಿತುದನು ನೋಡಿದನು ೧೭

ಎಲ್ಲರಾತಗೆ ಬಂದು ವಿನಯದಿ
ಸಲ್ಲಿಸಲು ಸಾಷ್ಟಾಂಗವಂದನೆ-
ಯುಲ್ಲಸಿತ ಮುಖದಿಂದೆ ಯೋಗಿಯು ಕೇಳ್ದನವರಿಂಗೆ
ಎಲ್ಲರಿಗೆ ಸಾಕ್ಷೇಮವೇನ್ನೆ ?
ಇಲ್ಲಿ ಮಳೆ ಬೆಳೆ ಸೊಗಸೆ ರೈತರೆ?
ಹೊಲ್ಲಹಾ ಕೊಲೆ ಸುಲಿಗೆ ಕಳ್ಳತನಕ್ಕೆಯೆಡೆಯುಂಟೇ? ೧೮

ಎಂದೆನಲು ಹಿರಿಗೌಡ ನುಡಿದನು
ತಂದೆ, ತಮ್ಮಯ ಪಾದಕೃಪೆಯಿಂ
ಚಂದದಿಂ ನಡೆದಿಹುದು ಸರ್ವವು ವಿಘ್ನಕೆಡೆಗೊಡದೆ
ಬಂದು ನಮ್ಮೂರಲ್ಲಿ ಪ್ರಭುಗಳು
ನಂದದಿಂದಡಿಯಿಟ್ಟು ಸರ್ವರ
ಕುಂದು ಕೊರತೆಗಳನ್ನು ನೀಗುವುದೆಂದು ಬಿನ್ನವಿಸೆ ೧೯

ಯೋಗಿ ಭಕ್ತರ ಕಾಮಧೇನುವು
ಸಾಗಿದನು ಅವರೊಡನೆ ಊರೊಳು
ರಾಗದಿಂದಾತನಿಗೆ ಗೌಡನು ತನ್ನ ಮನೆಯೊಳಗೆ
ಬೇಗದಿಂದಣಿಮಾಡಿಯೆಲ್ಲವ–
ನಾಗ ಗಣಪರ್ವವನು ಹಮ್ಮುತ
ಯೋಗಿಯಪ್ಪಣೆಯಂತೆ ಊರಿನ ದೈವಕೆಲ್ಲಕ್ಕೆ ೨೦

ತರತರದ ಮೃಷ್ಟಾನ್ನದಿಂ ಸಲೆ
ಪಿರಿದು ಸಂತಸಗೊಳಿಸಿ ಯೋಗಿಗೆ
ಇರುಳು ತನ್ನಯ ಗೃಹದಿ ಸೆಜ್ಜೆಗೆ ಸಜ್ಜುಗೊಳಿಸಿದನು
ಇರುತ ನಡುರಾತ್ರಿಯಲಿ ಯೋಗಿಯು
ತ್ವರಿತದಿಂ ತಾನೆದ್ದು ಗೌಡನ
ಕರೆದುಯೆಚ್ಚರಗೊಳಿಸಿ ಪೇಳಿದನಿಂತು ಕ್ಷಿಪ್ರದಲಿ ೨೧

ನಡೆಯೊ ಗೌಡನೆ ನಿನ್ನ ಹೊಲದೊಳು
ಅಡಗಿಸಿಟ್ಟಿಹ ನಿಧಿಯನೀಗಳೆ
ತುಡುಗರುಂಜನದಿಂದ ಶೋಧಿಸಿ ಹೊರಗೆ ತೆಗೆದಿಹರು
ತಡವ ಮಾಡದೆ ತರುಬಿಯವರಂ
ಪಿಡಿದು ನಿಧಿಯಂ ಕೊಂಡು ಬರ್ಪುದು
ಗಡನೆ ನಡೆ ಸಂಗಡಿಗರೊಡನಾ ಸ್ಥಳಕೆ ನೀನೀಗ ೨೨

ಕೇಳಿ ಯೋಗಿಯ ಮಾತ ಗೌಡನು
ಆಳು ಹೋಳುಗಳೆಬಿಸಿ ತಕ್ಷಣ
ಕೋಲು ಗುದಿಗೆ ಕಠಾರಿ ಕುಡಗೋಲ್ ಕೊಡ್ಲಿಗಳ ಕೊಂಡು
ಮೇಳದಿಂದಾ ಹೊಲಕೆ ಧಾವಿಸೆ
ಕೇಳಿ ಕಾಲಿನ ಸದ್ದನಾ ಕ್ಷಣ
ದಾಳಿಯೆದುರಿಸಲಾರದಾ ನಿಕ್ಷೇಪಮಂ ಬಿಟ್ಟು ೨೩

ಓಡಿಹೋದರು ಕಳ್ಳರಾಗಲೆ
ಹೇಡಿಗಳೆ ನಿಲ್ಲಿರೆಲೆ ನಿಮಗಾವ್
ಬೇಡಿಗಳ ತೊಡಿಸೀಗಳೆಳೆದೊಯ್ಯುವೆವು ಚಾವಡಿಗೆ
ಗೌಡನೀ ನುಡಿಗೇಳಿ ಕಳ್ಳರು
ಓಡಿದರು ಮತ್ತಷ್ಟು ರಭಸದಿ
ಗೌಡನಲ್ಲಿಗೆ ಬಂದು ನೋಡಲು ಹೊನ್ನಕೊಡವೊಂದು ೨೪

ಬನ್ನಿಮರದಡಿಯಲ್ಲಿ ಕುಳಿತಿದೆ
ಚಿನ್ನದಾ ನಾಣ್ಯಗಳು ಕೊಡದೊಳು
ಚನ್ನದಿಂ ಚಕಚಕಿಸುತಿವೆ ಪ್ರೇಕ್ಷಕರ ಕಂಗಳಿಗೆ
ಗನ್ನಗತಕರು ಬರೆದು ಮಡಲ-
ವನ್ನು ಕುಂಕುಮ ಕೆಂಪು ಹೂಗಳ
ನನ್ನಿಯಿಂದೇರಿಸಿಹರಾ ಗಿಡದಡಿಯೆ ರಾತ್ರಿಯೊಳು ೨೫

ಹೋತನೊಂದನು ಕೊಂದು ಬಲಿಯ-
ನ್ನೀತು ಮಾಕಾಳಿಗೆ ಸಮರ್ಪಿಸಿ
ಪ್ರೀತಿಯಿಂದಗಿದಿರ್ದರೆದೆಮಟ ತಗ್ಗನೊಂದನ್ನು
ನಾತ ಬರುತಿದೆ ಕವಡಿವೂದಿನ-
ದೀತರದ ಮಾಟವನು ಮಾಡಲ-
ದೇತಕೊಲೆಯುವಳಯ್ಯ ದೇವಿಯು ಗೌಡರು ಬಿಟ್ಟು ೨೬

ತಂದು ಕೊಡವಮಂ ಮನೆಗೆ ಗೌಡರು
ಬಂದು ಯೋಗಿಯ ಕಂಡು ಆತನ
ಮುಂದೆಯಿರಿಸಿದರಳ್ತಿಯಿಂ ಕೈಮುಗಿದು ನುಡಿದಿಹರು
ಸಂದಿಹುದು ನಮಗಿಂದು ನಿಧಿಯಿದು
ತಂದೆ ನಿಮ್ಮಯ ಪಾದಮಹಿಮೆಯೊ-
ಳಿಂದ ನಾನಿದ ನಿಮ್ಮ ಪಾದಕ್ಕರ್ಪಿಸುವೆನೊಲವಿಂ ೨೭

ಕರುಣದಿಂ ಕೊಂಡಿದನು ಪೂಜ್ಯರು
ಹರಸಬೇಕೆಂದೆನಲು ಗೌಡಗು
ಚರವರರು ನುಡಿದಿರ್ದರಾತಗೆ ಪ್ರೇಮದೊಡಗೂಡಿ
ಮರುಳ ನೀನೆಲೆ ನಾ ವಿರಕ್ತನು
ಕರದಿ ಮುಟ್ಟೆನು ಹೊನ್ನು ಪೆಣ್ಗಳ
ಬರಿದೆ ನೀನೆನಗಿತ್ತು ಮಾಡುವುದೇನು ಪುಣ್ಯಾತ್ಮ? ೨೮

ದೊರೆತ ಧನವಮಂ ಸ್ವಂತ ಬಳಸದೆ
ಗುರುಚರರ ದಾಸೋಹಕರ್ಪಿಸು
ನೆರೆ ದಲಿತದೀನರಿಗೆಯಂಗವಿಹೀನರಿಗೆ ಸಮಯ-
ವರಿತು ದಾನವನಿತ್ತು ಬಡವರ
ಪೊರೆಯಬೇಕೈ ಗೌಡ ನಿನಗದು
ಪರಮ ಭೂಷಣವೆಂದು ಪೇಳ್ದಾ ಯೋಗಿ ಮುನ್ನಡೆದ ೨೯

**ಬೆಳವಾಣಿಮುರಡಿ**

ಹಿರೆಕೆರೂರ್ ತಾಲೂಕಿನೊಳ್ಮಿಗೆ
ಮೆರೆವ ಸಿರಿಯೊಳ್ಕೊಪ್ಪದೊಳ್ನೆರೆ
ಮಿರುಪ ಅನಿಮಿಷಕೊಪ್ಪಲೋಳ್ಕಂಪಲಿಪ್ರದೇಶದಲಿ
ಚರವರೇಣ್ಯರು ತಂಗಿ ಕೆಲದಿನ
ಪರಮಲಿಂಗಾನಂದ ಸಂಭ್ರಮ-
ದಿರುತ ಸಲೆ ಬೆಳವಾಣಿಮುರಡಿಗೆ ಸಾಗಿದರು ಮುಂದೆ ೩೦

ಅಲ್ಲಿ ಪೂಲತೆ ಬಿಲ್ವತರುಗಳ
ಚೆಲ್ವತಾಣದೊಳಿರ್ದು ನಿತ್ಯವು
ಸಲ್ಲಲಿತ ಶಿವಪೂಜೆಗೈಯುತ್ತಿಹರು ಯತಿವರರು
ಅಲ್ಲಿ ಮರದಡಿಯಲ್ಲಿ ಯತಿಗಳು
ಲಲ್ಲೆಯಿಂ ಪಣ್ಗಾಯಿಯಿಡುವರು
ಚೆಲ್ಲುವರು ಮರದಡಿಯೆ ಮಜ್ಜನಜಲವ ಪ್ರತಿನಿತ್ಯ ೩೧

ಮರದ ಮೇಲಿರುವೆರಡು ಮಂಗಗ-
ಳಿರದೆ ಕೆಳಗಿಳಿದಾ ಫಲಂಗಳ
ಸರಸದಿಂ ಸೇವಿಸುತ ಮಜ್ಜನ ಜಲವ ನೀಂಟುವವು
ಹರುಷದಿಂದೀರೂಢಿ ಕೆಲ ದಿನ
ಜರಗುತಿರಲಾ ಪೂಜ್ಯಪಾದರು
ನೆರೆದ ಭಕ್ತರ ಮುಂದೆ ಹೊರಡುವ ಮಾತನೆತ್ತಿದರು ೩೨

ಭಕುತರೆಲ್ಲರು ಕೂಡಿ ಯೋಗಿಗೆ
ಯುಕುತಿಯಿಂ ಗಣಪರ್ವಜರಗಿಸಿ
ಸಕಲ ಜಂಗಮಭಕ್ತರಿಗೆ ಎಡೆಮಾಡಹತ್ತಿದರು
ಭಕುತರಿಗೆ ಶಿವಯೋಗಿ ಕೇಳ್ದನು
ಅಕಟ ! ನೀವೆರಡೆಡೆಯ ಮರೆತಿರಿ
ಸುಕರದಿಂ ಮರದೊಳಿಹ ಕಪಿಗಳಿಗೆಡೆಯಮಾಡಿರೆಲಾ ೩೩

ಎನಲು ಭಕ್ತರು ಎರಡು ಎಡೆಗಳ
ಸನಿಹದೊಳ್ಮರದಡಿಯೊಳಿಡಲಾ
ವನಚರರು ತಕ್ಷಣವೆ ಬಂದಾಯೆಡೆಯನುಂಡಿಹವು
ಅನಘ ಮೂರ್ತಿಗಳಿನ್ನು ಹೊರಡ-
ಲ್ಕನಿತರೊಳ್ಮಂಗಗಳು ಬಂದಾ
ಮುನಿವರನ ಸುತ್ತೆಲ್ಲವರಚುತೆ ಸುಳಿಯುತಿರಲಾಗಿ ೩೪

ಕರನು ಕಪಿಗಳ ಮಸ್ತಕದ ಮೇ-
ಲಿರಿಸೆ ತಾ ಸಲೆ ವರದ ಹಸ್ತವ-
ನಿರದೆ ಮಂಗಗಳೆರಡು ತಕ್ಷಣ ಪ್ರಾಣದೊರೆದಿಹವು
ಕರುಣದಿಂ ಶಿವಯೋಗಿ ಕಪಿಗಳಿ-
ಗಿರದೆ ಉತ್ತಮ ಜನ್ಮ ಬರಲೆಂ-
ದೊರೆದು ಹರಸುತೆ ಮುಂದಿನಾ ಹಾದಿಯನು ಹಿಡಿದಿಹನು ೩೫

## ಸಾಗರದಡವಿ

ಹಿಂದೆ ಮಾಡಿದ ಪಾಪ ಕರ್ಮದಿ
ಬಂದಿಹುದು ಕಪಿಜನ್ಮವೆರಡಕೆ
ಮುಂದೆ ಯೋಗಿಪ್ರಸಾದವಾಣಿಯೊಳಾಗಿ ನರಜನ್ಮ
ಹೊಂದಿ ಸುಖಸೌಭಾಗ್ಯವಂ ಸಲೆ
ಚೆಂದದಿಂ ಚಿರಕಾಲ ಬಾಳ್ದರು
ನಂದದಿಂ ಶಿವಯೋಗಿಯಾಡಿದ ನುಡಿಯು ಪುಸಿಯಹುದೆ? ೩೬

ಸಾಗರದ ದಟ್ಟಡವಿ ಮಾರ್ಗದಿ
ಪೋಗುತಿರೆ ಸೊಗಸಾಗಿ ಯೋಗಿಯು
ಆಗಲಲ್ಲಿರುತಿರ್ಪ ಚಿಕ್ಕ ಕಿರಾತ ಬಾಲಕರು
ಯೋಗಿಗಳ ಬಹು ಚಿತ್ರವೇಷಕೆ
ಬೇಗ ಭಯಗೊಂಡೋಡುತಿರೆ ತಾವ್
ಸಾಗಿ ಬಂದಿಹರಲ್ಲಿ ಬೇಡರು ಕ್ರೂರ ಕರ್ಮಿಗಳು ೩೭

ಕರಿಯ ವರ್ಣದ ದೀರ್ಘದೇಹದ
ವಿರುಪ ಕೆಂಗಣ್ ಕೋರೆ ಮೀಸೆಯ
ಶಿರದ ಜಂಜರಗೂದಲಿಂದೊಪ್ಪುವ ಕಿರಾತರಲಾ
ತ್ವರಿತದಿಂ ಯೋಗಿಯನು ಕೇಳ್ದರು
ಅರಿಯೆವೈ ನೀನಾರು ಯೆಂಬುದ
ಕೊರಳು ಕರ ಫಣೆಗಳಲಿ ಧರಿಸಿಹುದೇನು ಪೇಳೆನಲು ೩೮

ಕೊರಳೊಳಿವೆ ರುದ್ರಾಕ್ಷಿ ಲಿಂಗಂ
ಕರದೊಳಿರ್ಪುದು ಯೋಗದಂಡಂ
ಮಿರುಪ ಫಣೆಯೊಳ್ಬೆಳಗುತಿದೆ ಚಿದ್ಭಸ್ಮ ಕಾಣಿರೆಲಾ
ಗುರುವಿನಿಂದಿವನಾರು ಪಡೆವರೊ
ನರಕಭಯದಿಂ ಮುಕ್ತರಪ್ಪರು
ಹರನು ಸುಖ ಸಂಪದವನಿತ್ತವರನ್ನು ರಕ್ಷಿಪನು ೪೯

ಹೀಗೆ ನುಡಿದಾಕ್ಷಣವೆ ಬೇಡರು
ಯೋಗಿಗಿಂತೆಂದಾಡಿದರು ಸಲೆ
ಹೇಗೆ ಇರುವದು ನರಕವೆಂಬುದು ಪೇಳು ನೀ ಮನುಜಾ
ಈಗ ನಾವ್ ಸುಖದಿಂದೆ ಬಾಳ್ವೆವು
ಹೇಗೆ ಬರ್ಪುದು ನಮಗೆ ನರಕವು ?
ಬೇಗದಿಂ ನೀನದನು ತಿಳಿಸಲು ಬೇಕು ನಮಗೆನಲು ೫೦

ಬೂದಿಯೋಗಿಯು ಪೇಳ್ದನವರಿಗೆ
ಮೇದಿನಿಯೊಳಾರ್ ಪ್ರಾಣ ಹಿಂಸೆಯು
ಗೈದು ಮಾಂಸವ ತಿಂದು ಮದ್ಯವನೀಂಟುತಿರ್ಪರೊ
ಐದುವರು ನಿಜ ನರಕವನ್ನವ-
ತಾದ ಕಾರಣದಿಂ ಕಿರಾತರೆ
ಬಾಧೆಬಡುವಿರಿ ನರಕಕೂಪದೊಳಿಂಥ ಕೃತಿಗಾಗಿ ೫೧

ನರಕವೆಂಬುದು ಘೋರ ತಾಣವು
ಮರಣ ಹೊಂದಿದ ಪಾಪಕರ್ಮಿಗ-
ಳಿರದೆ ನರಕದಿ ಬಿದ್ದು ಹೊರಳಾಡ್ವರು ಕಿರಾತರಿರಾ
ನರಕವೆಂಬುದು ಮಲದ ಕೂಪವು
ನರಕವೆಂಬುವದಗ್ನಿ ಕುಂಡವು
ನರಕವೆಂಬುದು ಹಾವು ಚೇಳ್ ಕ್ರಿಮಿಕೀಟಕವನೆಲೆಯು ೫೨

ಪೊಲಸು ನಾರುವ ಮಲದ ಕೂಪದಿ
ಕೆಲರು ಪಾಪಿಗಳುರುಳುವರು ಮೇಣ್
ಕೆಲರು ಬೆಂಕಿಯ ಕುಂಡದೊಳ್ ಹುರುಪಳಿಸಿ ಪೋಗುವರು
ಕೆಲರು ವಿಷಜಂತುಗಳ ಕಡಿತಕೆ
ಒಲವೊಲನೆವೊದ್ದಾಡುವರು ಮಿಗೆ
ಕೆಲರು ವಿವಿಧಾಯುಧಗಳಿಂ ತಲೆಗೊಯ್ಸಿಕೊಂಬುವರು ೪೩

ಪರಮಯೋಗಿಯ ನುಡಿಯನಾಲಿಸಿ
ನೆರೆ ಕಿರಾತರು ಪೇಳ್ದರಾತಗೆ
ಭರದಿ ಲಿಂಗ ವಿಭೂತಿ ರುದ್ರಾಕ್ಷಿಗಳ ಕೊಡು ತಂದೆ
ನರಕ ಕುಂಡದಿ ಬೀಳಲಾರೆವು
ನರಕ ಕೂಪದಿ ಮುಳುಗಲಾರೆವು
ನರಕ ಹೊಂಡದಿ ಬಾಧೆಗೊಳ್ಳೆವು ವಿಷದ ಜಂತುಗಳ ೪೪

ನಡೆಯಿರೈಗುಡಿಸಲೊಳು ನಾವತಿ
ಸಡಗರದಿ ಶಿವದೀಕ್ಷೆಗೊಂಬೆವು
ಬಿಡುವೆವೈ ನಾವ್ ಮಾಂಸಭಕ್ಷಣೆ ಮದ್ಯಸೇವನೆಯ
ಬೇಡರೀನುಡಿ ಕೇಳಿ ಯೋಗಿಯು
ಗಡನೆ ಒಳಸಾರಿರಲು ಮನೆಯೊಳ-
ಗಿಡಿಕಿರಿದ ಘನಘೋರದೃಶ್ಯವು ಕಣ್ಗೆ ಬಿದ್ದಿಹುದು ೪೫

ಬೇಡರಾ ಗುಡಿಸಲವು ಮಾಂಸದ
ಗೂಡು ಮದ್ಯದಬೀಡು ಪಾಪದ
ಜಾಡು ಒಳಸಾರಿರಲು ಸುತ್ತಲು ಪರಿದ ದುರ್ಗಂಧ
ತೀಡಿ ಬರೆ ನಾಸಿಕಕೆ ಯೋಗಿಯು
ಬೇಡ ಬೇಡೆನಿಸಿದೊಡು ತಾಣವು
ಕಾಡುಜನರಂ ತಿದ್ದಬೇಕೆಂದಲ್ಲಿ ತಾ ನಿಂದು ೪೬

ಕರಡಿ ಹುಲಿ ಸಾರಂಗ ಸಿಂಹವ
ಎರಳೆ ಮಿಕ ಕಾಳ್ಕೋಣ ಕರಿಗಳ
ತರಿತರಿದು ಚಲ್ಲಿರ್ದಮಾಂಸದ ಕರಣೆಗಳ ಕಂಡು
ತರತರದ ಚರ್ಮಗಳನೊಟ್ಟಿದ
ಪಿರಿಯ ತಾಣವ ನೋಡಿ ಯೋಗಿಯು
ಮರಮರನೆ ಮರುಗಿದನು ಮನದೊಳಿದೆಂಥ ಕ್ರೌರ್ಯವಹಾ ೪೭

ಪುಲಿಯುಗುರು ಚವರಿಗಳುವೊಂದೆಡೆ
ಕಲಿತನದ ಬಿಲ್ಬಾಣವೊಂದೆಡೆ
ಒಲುಮೆಯುಳ್ಳಾ ಬೇಂಟೆನಾಯ್ಗಳ ತಂಡವೊಂದೆಡೆಗೆ
ಮಲಿನ ದೇಹದ ಹೊಲಸುಬಟ್ಟೆಯ
ನಲುಮೆಯಾ ಬೇಡತಿಯರೊಂದೆಡೆ
ಚಲುವ ಕರೆವೊಗದಲ್ಲಿ ಸುಲಿಪಲ್ಲೆಸೆವ ಬಾಲಕರು ೪೮

ಕತ್ತಲೊಳು ನಕ್ಷತ್ರದಂದದಿ
ಬಿತ್ತರಿಸೆ ನಗುನಗುತೆ ಕಾಂತಿಯು
ಸುತ್ತಲೆಲ್ಲಾ ಕ್ರೂರ ದೃಶ್ಯವಕಂಡು ಶಿವಯೋಗಿ
ಉತ್ತಮರು ನಾವೆನಿಸಿ ಫಲವೇಂ ?
ಕತ್ತಲೊಳು ಬಾಳ್ವಜ್ಞಜನಾಳಿ-
ಗುತ್ತಮೋತ್ತಮ ಬೆಳಕನೀಯುವದುಚಿತವಲ್ಲೇನು ? ೪೯

ಕರುಣೆ ತಾನದು ಪುಟ್ಟಲಿಲ್ಲೇಂ
ಸುರಿಗೆ ಕೊಂತಗಳಿಂದ ಮೃಗಗಳ
ಶಿರವನರಿವಾಗವರ್ಗೆ ಪಾಪದ ಭಯವು ಪೋಯ್ತಲ್ಲಿ?
ಹರಹರಾ ! ಇದುಯೆಂಥ ಬಾಳ್ವೆಯು
ಸ್ಮರಿಸಲನುಚಿತವಾದ ಕೃತಿಗಳ
ನಿರುತಗೈವರು ಹರನೆ ನೀನಿದನೆಂತು ಸೈರಿಸುವೆ.? ೫೦

ಇಂತು ನುಡಿದಾ ಯೋಗಿವರ್ಯನು
 ಸುಂದು ಹಿಡಿದಂತಾಗಿ ನಿಲ್ಲಲು
 ಒಂದನರಿಯದೆ ಬೇಡರಾತನ ನೋಡಿ ಕೌತುಕದಿ
 ಇಂದು ಭಯಗೊಂಡಿರ್ಪನೀತನು
 ಮುಂದೆ ಬಿಟ್ಟರೆ ಹುಲಿಯ ಬಾಯಿಗೆ
 ಬಂದು ಬೀಳ್ವನು ಇಲ್ಲಿಯೇ ಇರಲೆಂದು ಯೋಚಿಸಿರೆ ೫೧

ಚರವರೇಣ್ಯನ ದರ್ಶನದಿ ಸಲೆ
 ಸರಿದು ಹೋದುದು ಅರ್ಧ ಕ್ರೌರ್ಯವು
 ಕರುಣ ದೃಷ್ಟಿಯ ಬೀರೆ ತಾನುಳಿದರ್ಧ ಪೋದುದಲಾ
 ಬಿರುಸು ಹೃದಯವು ಮೆತ್ತಗಾಯಿತು
 ಕರುಣೆದೋರಿತು ಕ್ರೂರಭಾವದಿ
 ಕರಮುಗಿದು ಶಿರಬಾಗಿ ಯೋಗಿಗೆ ನಮಿಸಿ ಕೇಳಿದರು ೫೨

ನೀವು ಒಳ್ಳೆಯ ಮನುಜರಿರ್ಪಿರಿ
 ಯಾವ ಕಾರಣ ತಪ್ಪಿ ಬಂದಿರೊ !
 ಈ ವನವು ಬಹು ಕಾಡ ಮೃಗಗಳ ವಾಸದಾ ಬೀಡು
 ಸಾವು ತಪ್ಪದು ಹೊರಗೆ ಪೋದೊಡೆ
 ನೋವಗೊಳ್ಳದೆ ರಾತ್ರಿಯೊಳು ನೀಂ
 ಸಾವಧಾನದಿ ಕಾಲ ಕಳೆಯಿರಿ ನಮ್ಮ ಗುಡಿಸಲೊಳು ೫೩

ಸಮಯವು ಸಂದಿರ್ದುದೆಂದಾ
 ಅಸಮ ಮಹಿಮನು ಸರ್ವಬೇಡರಿ-
 ಗೊಸೆದು ದೀಕ್ಷೆಯಗೈದು ಭಸಿತ ಶಿವಾಕ್ಷಿ ಲಿಂಗಗಳ
 ನಸುನಗುತೆ ತಾನಿತ್ತು ಅವರಿಗೆ
 ಬೆಸಸಿದನು ಮಸ್ತಕದಿ ಹಸ್ತವು
 ಎಸೆಯುತಿರೆ ಮುಖ ಕಾಂತಿ ಪ್ರೋಗರೇರುತಿರೆ ಯತಿವರನು ೫೪

ಕೊಲ್ಲಬೇಡಿರಿ ಪ್ರಾಣಿಗಳ ನೀವ್
ಮೆಲ್ಲಬೇಡಿರಿ ಮಾಂಸಮಂ ಮೇಣ್
ಕಳ್ಳು ಯೊಂಟಲು ಬೇಡಿರೈ ಕಟ್ಟುಗ್ರದೇವತೆಗೆ
ನಿಲ್ಲಿಸಿರಿ ಬಲಿ ಕೊಡುವುದಂ ನಾ-
ನಿಲ್ಲಿ ಪೇಳುವ ತೆರದಿ ನಿತ್ಯವು
ಮೆಲ್ಲ ಮೆಲ್ಲನೆ ಸ್ನಾನ ಪೂಜಾ ಶುದ್ಧ ಪರಸಾದ ೫೫

ಸೇವಿಸಿರಿಯಿಂತೆಂದು ಪೂಜೆಯ
ಭಾವಪೂರ್ಣವಿಧಾನಮಂ ಸಲೆ
ಸಾವಧಾನದಿ ಪೇಳಿ ಕಾಡ ಕಿರಾತರುದ್ಧರಿಸಿ
ಆವಗಂ ಶಿವಮಂತ್ರ ಜಪಿಸಿರಿ
ಕಾವನೈ ಶಿವನೆಂದು ಹರಸುತೆ
ಭೂವಲಯ ಸಂಚಾರ ಕ್ರಮದಿಂ ನಡೆದನಾ ಯೋಗಿ ೫೬

ನೀರನೆಣ್ಣೆಯೊಲುರಿಸಬಲ್ಲರು
ಚೋರರಂ ಶೋಧಿಸಲು ಬಲ್ಲರು
ತೋರ ಬಲ್ಲರು ಮುಕ್ತಿಮಾರ್ಗವ ವನ್ಯ ಪಶುಗಳಿಗೆ
ಮೀರಿದಾ ಕ್ರಿಯೆಯುಳ್ಳ ಮಹಿಮರು
ಧಾರುಣಿಗೆ ಲೇಸನ್ನೆ ಮಾಳ್ಪರು
ಕ್ರೂರ ಕರ್ಮಿಗಳಂ ಸುಸಂಸ್ಕೃತಗೊಳಿಸಿ ರಕ್ಷಿಪರು ೫೭

**ಅಂತು ಏಳನೆಯ ಸಂಧಿಗೆ ೪೯೦ ಪದ್ಯಕ್ಕೆ ಮಂಗಲಮಕ್ಕುಂ**
**ಭದ್ರಂ ಶುಭಂ ಮಂಗಲಂ**

ಶ್ರೀ ಗುರುಬಸವಲಿಂಗಾಯ ನಮಃ

# ಎಂಟನೆಯ ಸಂಧಿ

## ಯೋಗಮಹಿಮೆ

ಸೂಚನೆ:– ಯೋಗಸಿದ್ಧನು ಯೋಗಮಹಿಮೆಯ
ರಾಗದಿಂ ಸಾಧಕಗೆ ಬೋಧಿಸಿ
ಯೋಗಲೀಲೆಯನಂತಪುರದೊಳ್ತೋರಿದನು ಮಹಿಮ

ಒಮ್ಮೆ ದಕ್ಷಿಣದಿಶೆಯ ಭಾಗದೊ-
ಳೆಮ್ಮ ಯತಿವರನಂತಪುರದೊಳು
ಒಮ್ಮನದಿ ಸಂಚರಿಸುತಿರೆ ತಿರುವಾಂಕನೆಂದೆಂಬ
ಹುಮ್ಮಸದ ಹಠಯೋಗ ಸಾಧಕ
ಬೊಮ್ಮವನವೆಂಬಾಶ್ರಮದಿ ಸಲೆ
ಹಮ್ಮಿ ಯೋಗಾಭ್ಯಾಸಮಂ ಗುರುವಿಲ್ಲದೊರಲುವನು ೧

ಬಂದನಲ್ಲಿಗೆ ಬೂದಿಯೋಗಿಯು
ನಿಂದು ತಿರುವಾಂಕನನು ಕಂಡನು
ಮಂದಹಾಸದೊಳವನ ಮನದಿಂಗಿತವ ತಿಳಿದಿಹನು
ಮುಂದ ಭಾಗ್ಯಗೆ ಹೊಂಗೊಡವು ಸಲೆ
ಸಂದವೋಲಾ ಯೋಗಸಾಧಕ-
ನಂದು ಘನಯೋಗಿಯ ಪದಾಬ್ಜಕೆ ನೀಡಿ ಮಂದನೆಯ ೨

ಗುರುವೆ ಸದ್ಗುಣ ಸಿರಿಯೆ ಪಾವನ
ರ್ಝರಿಯೆ ಯೋಗದ ಕಣಿಯೆ ಮಂದರ
ಗಿರಿಯೆ ಚಿಂತಾಮಣಿಯೆ ನನ್ನಯ ಪುಣ್ಯಫಲಿಸಿಹುದು
ದರುಶನದಿ ತವ ಧನ್ಯನಾದೆನು
ಹರುಷದಿಂದೆನಗರುಹಿ ಯೋಗದ
ಹಿರಿಮೆಯಂ ಪೊರೆ ಯೋಗಮಾರ್ಗವ ಹಿಡಿಸಿ ನೀನೆನಗೆ

ಎಂದು ದೈನ್ಯದಿ ಬೇಡಿಕೊಳ್ಳಲು
ನಂದ ಮೂರುತಿ ಬೋಧಿಯೋಗಿಯು
ನಿಂದ ತಿರುವಾಂಕನಿಗೆ ಕರುಣಾ ದೃಷ್ಟಿಯಂ ಬೀರಿ
ಇಂದು ನೀ ಬಹು ಧನ್ಯ ನೋಡಾ
ಇಂದಿಗೂ ನಾ ಯೋಗಮಹಿಮೆಯ
ಅಂದಮಂ ಪೇಳಿಲ್ಲವಾರಿಗು ಪೇಳ್ವೆ ನಿನಗದನು

ಯೋಗವೆಂಬಾಧ್ಯಾತ್ಮ ವಿದ್ಯೆಯು
ರಾಗದಿಂ ಸುತ್ತಿರ್ದ ಮಾಯೆಯ
ನೀಗುವದು ಪರಿಪೂರ್ಣ ಶಾಶ್ವತ ಸೌಖ್ಯವೀಯುವದು
ಯೋಗವದು ಸಂಯೋಗವೆನಿಸಿದೆ
ಯೋಗವೇ ಶಿವಜೀವರೈಕ್ಯವು
ಯೋಗ ಸಾಧನಭೇದದಿಂ ಸಲೆ ನಾಲ್ಕು ತೆರನಕ್ಕು

ಅರಿಯೆ ಹಠ ಲಯ ಮಂತ್ರ ರಾಜಗ-
ಳಿರದೆ ಸಾಧನಗೈದು ಯತಿಗಳು
ಪಿರಿದು ಸಿದ್ಧಿಗಳಂ ಪಡೆದು ಶುಭಲೀಲೆಯನಾಳುವರು
ಬರುತಿಹುದು ಮಿಗಿಲಾದ ಶಕ್ತಿಯು
ಚರಿಸೆ ಹಠಯೋಗಾದಿಗಳ ಸಲೆ
ನೆರೆ ಶರೀರ ಪ್ರಾಣಮನಬುದ್ಧಿಗಳು ವರ್ಧಿಪವು

ಆದೊಡೀ ಯೋಗಗಳು ಬಗೆವೊಡೆ
ಮೇದಿನಿಗೆ ಪರಿಪೂರ್ಣವೆನಿಸವು
ಆದಿಯಿಂ ಶಿವಯೋಗವೇ ಪರಿಪೂರ್ಣವೆನಿಸಿಹುದು
ಆ ದಯಾನಿಧಿ ಪರಮಪುರುಷನ-
ನಾದಿಯಿಂ ಮರೆದಂಥ ಜೀವನು
ಹಾದಿಯಂ ಬಿಟ್ಟೀ ಪ್ರಪಂಚದಿ ದುಃಖಪೊಂದುವನು ೭

ಮರೆದಿಹನು ತಾನಜ್ಞ ಜೀವನು
ಬರಿದೆ ವಿಷಯಾದಿಗಳ ವಿರಹದಿ
ದೊರೆಕುವದು ದುಃಖವದು ತನಗಿಂತೆಂದು ಭಾವಿಪನು
ಅರಿದು ವಿಷಯಾದಿಗಳ ಯೋಗದಿ
ಪಿರಿಯ ಸುಖ ತನಗಕ್ಕುದೆಂದುಂ
ಧರಣಿಯೊಳ್ ಸ್ವಾರ್ಥದಲಿ ವಿಷಯಪ್ರಾಪ್ತಿಗೆಳಸುವನು ೮

ವಿಷಯದಾಶೆಯು ಸ್ವಾರ್ಥಮೂಲವು
ವಿಷಯ ಪ್ರಾಪ್ತಿಗೆ ಹೋರೆ ಮದದೊಳು
ವಸುಧೆಯೊಳ್ ಶಾಂತತೆಗೆ ಭಂಗವು ಬಂದು ಎಡೆಗೊಳ್ಗು
ಅಶನವಸನಕೆ ಶಿಶ್ನಸೌಖ್ಯಕೆ
ಮಸಗಿ ಹೋರಾಟವನು ನಡೆಸುವ
ಕಸಕು ಜೀವರಿಗೆಂತು ನಿಜಸುಖ ಪ್ರಾಪ್ತವಾಗುವದು ? ೯

ಅದರಿನೀ ಕ್ಷಣಭಂಗುರದ ಸುಖ-
ವೊದೆದು ಧಿಕ್ಕೆಂದಸಮಯೋಗಿಗ-
ಳೊದವಿ ಶಿವಯೋಗವನು ಸಾಧಿಸಿ ಶಾಶ್ವತಿಕ ಸುಖವೆ
ಮುದದಿ ಪೊಂದುತ ಪರಮ ಪದವಿಯ
ಹದನವನು ತಾವರಿದು ಶಿವನೊಳು
ಸದಮಲರು ತಾವ್ ಬೆರೆದು ಸಲೆ ಬೇರಿಲ್ಲದಂತಿಹರು ೧೦

ಕರೆಯುವರು ಶಿವಯೋಗವೆಂದಿದ-
ನರಿದನುಭವವ ಕಂಡು ಯತಿಗಳು
ಒರೆದಿಹರು ಶಿವಯೋಗವೇ ಪರಿಪೂರ್ಣಮಿಂತೆಂದು
ಕರದೊಳಿಷ್ಟವನಿರಿಸಿ ಸಾಧನ-
ವೆರಸಿ ಶಿವಯೋಗವ ದಿನಂಪ್ರತಿ
ಚರಿಸುವರು ಸಲೆ ದೃಷ್ಟಿಮನಭಾವಂಗಳೊಪಗೂಡಿ ೧೧

ಬೇಕು ಶಿವಯೋಗಕ್ಕೆ ಲಿಂಗವು
ಬೇಕು ಕರ್ಮ್ಮನಭಾವಶುದ್ಧಿಗೆ
ಬೇಕಿಲ್ಲೈ ಗಡ ಚಿತ್ತವೃತ್ತಿನಿರೋಧ ಗೈವುದಕೆ
ನಾಲ್ಕುಯೋಗಗಳೆಲ್ಲ ಕೂಡಿವೆ-
ಯೂಕಲಿತ ಶಿವಯೋಗಗರ್ಭದೊ-
ಳೀ ಕುರುಹಿನೊಳು ನಾಲ್ಕು ಯೋಗಗಳಮಿತಬಲವಿಹುದು ೧೨

ಲಿಂಗ ಭಕ್ತಿಯು ಲಿಂಗಜ್ಞಾನವು
ಲಿಂಗಧ್ಯಾನವು ಲಿಂಗಸುವ್ರತ
ಲಿಂಗದರ್ಚನೆಯೆಂಬಿವೈದವಯವದ ಶಿವಯೋಗ
ಅಂಗಮಂ ಲಿಂಗದೊಳು ಬೆರೆಸಲು
ಸಾಂಗಗೊಳ್ವುದು ಯತಿಗಳಿಂ ಸಲೆ
ಪಿಂಗದಾ ಶಿವಯೋಗದಿಂದಧಿಕಾವುದಿನ್ನುಂಟು? ೧೩

ಪರಮ ಶಿವಯೋಗವನು ಸಾಧಿಪ
ಪರತರದ ಶಿವಯೋಗನಿಷ್ಠರು
ಹಿಡಿದುಕೊಳ್ಳದೆ ಸಂಸೃತಿಯ ಸಂಬಂಧಭಾವವನು
ಪರಿ ಪರಿಯ ಸಂಸಾರ ಭೋಗವ
ಕರಣಪರಿವರ್ತನದಿ ಭೋಗಿಸಿ
ಪರಶಿವನ ಚೈತನ್ಯಮಂ ತುಂಬುವರು ವಿಷಯದೊಳು ೧೪

ಜಡ ಶರೀರದ ಪ್ರಕೃತಿಭಾವವು
ಅಡಗಿ ಚಿತ್ಕಳೆ ಬೆಳಗಲಾಕ್ಷಣ
ಗಡನೆ ತಾವಾಗುವದು ನಿಜದಿಂ ಲಿಂಗದೇಹಿಗಳು
ಮೃಡನ ಶರಣರು ಸುಲಭವಾದೀ
ಕಡು ಸೊಗದ ಶಿವಯೋಗಮಂ ಜನ-
ಗಡಣದೊಳ್ಬಿತ್ತರಿಸಿ ಸಂಸೃತಿ ಸರಸಗೈದಿಹರು ೧೫

ಅಂಗಭೋಗವು ಯೋಗಮಾರ್ಗದಿ
ಹಿಂಗಿ ಸಲೆ ತಾ ಲಿಂಗಭೋಗವು
ಅಂಗವಿಸಲದಕಿಂತ ಹೆಚ್ಚಿನ ಸಾಧನವದುಂಟೇ?
ಲಿಂಗಿಗಳ್ ಲಿಂಗೋಪಭೋಗಿಗ-
ಳಂಗದಾಸೆಗೆ ಬೀಳರೆಂದುಂ
ಅಂಗ ಲಿಂಗದ ಸಂಗದೊಳ್ಮಿಗೆ ನಿತ್ಯ ನಲಿಯುವರು ೧೬

ಮೋದಿನಿಗೆ ಹಠಯೋಗಮಂ ಮೇಣ್
ಮೋದದಿಂ ಶಿವಯೋಗ ಮಾರ್ಗವ-
ನಾದಿಯಿಂ ಸಾಧಿಸಿದ ಮಹಿಮರು ಲೀಲೆಯಾಡಿದರು
ಸಾದರದಿ ಹಠಯೋಗ ಚರಿಪೊಡೆ
ಸಾಧು ತಾ ಶಿವಯೋಗವಪ್ಪುದು
ಭೇದವಿಲ್ಲದಲುಭಯಯೋಗಗಳನ್ನು ಚರಿಸುವುದು ೧೭

ದಿಟ್ಟಿಮನವಾಯುಗಳ ಬಂಧಿಸಿ
ನೆಟ್ಟನೇಕಾಗ್ರತೆಯಗೊಳಿಪುದು
ಕ್ಲಿಷ್ಟ ಹಠಯೋಗವದು ಶಿವಯೋಗಕ್ಕೆ ಭಿನ್ನವಲಾ
ಇಷ್ಟಲಿಂಗದ ಭಕ್ತಿಯಿಂ ಮನ
ದಿಟ್ಟಿವಾಯುಗಳನ್ನು ನಿಲ್ಲಿಸಿ
ಸುಷ್ಟು ತಲ್ಲೀನತೆಯ ಪಡೆವುದು ನೋಡು ಶಿವಯೋಗ ೧೮

ಮೊದಲು ಹಠಯೋಗವನು ಸಾಧಿಸಿ
ಒದವಿ ಶಿವಯೋಗವನು ಚರಿಪೊಡೆ
ಮುದದಿ ಪಳಗಿದ ಕುದುರೆಯಂ ತಾನೇರಿದಂತಕ್ಕು
ಪದುಳದಿಂದಗ್ನಿಯೊಳು ಪುಟವಿ-
ಕ್ಕಿದ ಕನಕದಂತೆಸೆಯುವನು ಮೇಣ್
ಹದದ ಬಂಗಾರಕ್ಕೆ ಸೌರಭ ಬೆರಿಸಿದಂತಕ್ಕು ೧೯

ವೀರಶೈವಾಚಾರದೊಳ್ಸಲೆ
ತೋರುತಿದೆ ಸಂಬಂಧವೆರಡರ
ತೋರಿಹವು ಹಠಯೋಗತತ್ವಗಳಲ್ಲಿ ಸ್ಫುಟವಾಗಿ
ಸಾರತರ ಶಿವಯೋಗದೊಳ್ಮಿಗೆ
ಚಾರು ಹಠಯೋಗಾಚರಣೆಗಳು
ಮೀರಿ ಶೋಭಿಸುತಿಹವು ಬಗೆವೊಡೆ ಹಾಸುಹೊಕ್ಕಾಗಿ ೨೦

ಶರಣರಾ ವಚನಂಗಳೊಳ್ಸಲೆ
ಪರಮಯೋಗಾಂಗಗಳ ವರ್ಣನೆ
ಪರಿದಿಹುದು ದಿಟ ಪ್ರಾಣಲಿಂಗಿಸ್ಥಲದೊಳರಿಯುವೊಡೆ
ಸುರಿದಿಹವು ಹಠಯೋಗತತ್ವಗ–
ಳಿರದೆ ಹಠಯೋಗವನು ಸಾಧಿಸಿ
ಪರಮ ಶಿವಯೋಗಿಗಳನಂತರವಾಗಿಹರು ನೋಡಾ ೨೧

ಯೋಗಸಿದ್ಧರನಾಡು ಕನ್ನಡ
ಯೋಗಿ ರೇವಣಸಿದ್ಧನೈ ನಿಜ
ಯೋಗಿ ಸಿದ್ಧೇಶ್ವರನು ಮೇಣ್ಪ್ರಾನಲ್ಲಮಪ್ರಭುವು
ಯೋಗಿ ಸಕಲೇಶನು ಕಣಾ ತಾ
ಯೋಗಿನಿಯು ಮಾದೇವಿಯಕ್ಕನು
ಯೋಗಿನಿಯರಾಗಿರ್ದರ್ಪ್ಪ ಬಹು ಶರಣೆಯರು ನೋಡಾ ೨೨

ವೀರಶೈವರ ಗುರುಗಳನಿಬರು
ವೀರದಿಂ ಹಠಯೋಗ ಸಾಧಿಸಿ
ಸಾರಿದರು ಶಿವಯೋಗಲೀಲಾನಂದಮಂ ಮುಂದೆ
ಕಾರಣವು ಹಠಯೋಗಸಾಧನ
ಚಾರು ಶಿವಯೋಗಕ್ಕೆಯೆಂಬುದ
ವೀರಶೈವಾಗ್ರೇಸರರು ಶಿವಯೋಗಿಗಳು ಬಲ್ಲರ್ ೨೩

ಚಿತ್ತವೃತ್ತಿನಿರೋಧ ಯೋಗವು
ಚಿತ್ತಚಂಚಲವಾಗದಂದದಿ
ಉತ್ತಮರು ತಡೆಹಿಡಿದು ತಾವದ ಲಿಂಗದೊಳ್ಬೆರಸಿ
ನಿತ್ಯಚಿತ್ಸುಖವಡೆದು ನಲಿವರು
ಚಿತ್ತಜಾರಿಯರೂಪಗೆಂಬರು
ಸತ್ಯಶಿವಸುಂದರವು ಪರಶಿವಯೋಗ ದಿಟವೈಸೆ ೨೪

ಯೋಗಸಾಧನೆ ಮಾಳ್ಪ ಪುರುಷಗೆ
ಬೇಗದಿಂ ದೊರಕೊಳ್ಳುವವು ದಿಟ
ರಾಗದಿಂದ ಸಮಸ್ತ ಸಿದ್ಧಿಗಳದನು ತಾವರಿದು
ಯೋಗಿಗಳ್ ತತ್ಸಿದ್ಧಿಬಲದಿಂ
ಜಾಗತಿಕ ಶಾಂತಿಯನು ಕಾಯ್ವರು
ಸಾಗಿಸುವರಿಹಪರಗಳೆರಡರ ಗತಿಯ ಸುಗಮದಲಿ ೨೫

ಯೋಗಸಾಧನದಿಂದ ಮನುಜ ನಿ-
ರೋಗಿ ವರಕವಿಯಹನು ಜನಪ್ರಿಯ
ಭೋಗಿ ಮೊದಲಾದಹಿತಜಂತುಗಳವನ ಬಾಧಿಸವು
ಯೋಗಿಗಿಲ್ಲವು ಹಸಿವು ತೃಷೆ ಭಯ
ರಾಗನಿದ್ರಾಲಸ್ಯಮೋಹವು
ಯೋಗಿಗುಂಟೈ ದೂರಶ್ರವಣವು ದೂರದರ್ಶನವು ೨೬

ಯೋಗಿ ವಾಕ್ಸಿದ್ಧಿಯನು ಪಡೆವನು
ಯೋಗಿಯಂ ಭೇದಿಸದು ವಜ್ರವು
ಯೋಗಿ ಪರಕಾಯ ಪ್ರವೇಶದ ನೆಲೆಯನರಿಯುವನು
ಯೋಗಿ ಖೇಚರಗಾಮಿಯಪ್ಪನು
ಯೋಗಿ ಸ್ವೇಚ್ಛಾಗಮನಿಯೈ ದಿಟ
ಯೋಗಿಗಣಿಮಾದ್ಯಷ್ಟಸಿದ್ಧಿಗಳತುಲಬಲಮುಂಟು ೨೭

ಇರುವನಾತನು ವಜ್ರದೇಹಿಯು
ಚರಿಪನು ಮನೋವೇಗದಿಂ ಸಲೆ
ಸರುವ ಇಚ್ಛಾವಿಷಯಗಳ ತಾ ದೊರಕಿಪನು ನೋಡಾ
ಗುರುಜಡನು ಮೇಣ್ ಸೂಕ್ಷ್ಮನಪ್ಪನು
ತರಳ ಪ್ರೌಢನು ವೃದ್ಧನಪ್ಪನು
ಇರದೆ ನಾನಾ ಪ್ರಾಣಿಗಳ ರೂಪವನು ಧರಿಸುವನು ೨೮

ತನು ಸುಗಂಧವ ಸೂಸುತಿರ್ಪುದು
ಮನವು ಲಿಂಗದಿ ಮಗ್ನವಪ್ಪುದು
ಘನಹರಣ ಯೋಗಾನುಸಂಧಾನದೊಳಗಾಡುವುದು
ನೆನೆಯೆ ಭಾವವು ಬಯಲಗೊಳ್ಳುದು
ಕೊನೆಗೆ ಮೋಕ್ಷದ ಶಿಖರವೇರುತ
ಅನಘ ಮೂರುತಿ ಯೋಗಿ ಶಿವ ತಾನಾಗಿ ನಲಿಯುವನು ೨೯

ಜಲವ ನಿರಸನ ಮಾಡುವಂ ಮೇಣ್
ಜಲಕೆ ಘನರೂಪವನು ಕೊಡುವನು
ಜಲಧಿಪಾನವ ಮಾಡುವನು ನಿರ್ಜಲ ಪ್ರದೇಶದೊಳು
ಜಲವ ತೋರ್ಪನು ಕರದಿ ಶರಧಿಯ
ಜಲವನೆಲ್ಲವ ಧರಿಸುವನು ಮೇಣ್
ಶಿಲೆಯ ಘಾತವು ತಟ್ಟಿದೊಡು ತಾ ಗಾಯಮಿಲ್ಲವಗೆ ೩೦

ಅಗ್ನಿಯಂ ಪುಟ್ಟಿಪನು ದೇಹದಿ
ಅಗ್ನಿ ಭಯವೆನಿತಿಲ್ಲವಾತಗೆ
ಅಗ್ನಿಯಂ ಸ್ಥಾಪಿಸುವ ಜಲದೊಳಗ್ನಿಯಂ ಪಿಡಿವ
ಅಗ್ನಿಯಿಂದನ್ನಾತಿಪಚನವ–
ನಗ್ಗಳಿಸಿ ಗೈಯುವನು ಯೋಗಿಯು
ಅಗ್ನಿ ನಿರ್ಮಿಸಿ ಜಗವ ದಹಿಪನು ತೈಜಸದ ಸಿದ್ಧ ೩೧

ಯೋಗಿ ಛಾಯಾರಹಿತವನಪ್ಪನು
ಯೋಗಿಯವಯವವದೃಶವಪ್ಪವು
ಯೋಗಿ ಶೈಲವ ಲಂಘಿಪನು ನುಂಗುವನು ಶೈಲವನು
ಯೋಗಿಯಂಬರದಲ್ಲಿ ಚರಿಪನು
ಯೋಗಿ ಬಹು ನಿಸ್ಸಂಗನಾಗಿಹ
ಯೋಗಿಯಾಕಾಶವನು ಪಿಂಡೀಕರಣ ಮಾಡುವನು ೩೨

ಜಗವ ಸೃಷ್ಟಿಸಬಲ್ಲ ಯೋಗಿಯು
ಜಗವ ರಕ್ಷಿಸಬಲ್ಲ ಯೋಗಿಯು
ಜಗವ ತಾ ಸಂಹರಿಸಬಲ್ಲನು ಯೋಗಸಿದ್ಧಿಯಲಿ
ಸೊಗದ ಇಷ್ಟಾರ್ಥಂಗಳೆಲ್ಲವು
ಒಗೆಯುವವು ಶಿವಯೋಗಿಯಿಚ್ಛೆಗೆ
ಜಗದ ಗುಹ್ಯಾರ್ಥಂಗಳೆಲ್ಲವ ವ್ಯಕ್ತಪಡಿಸುವನು ೩೩

ಅಂತು ಅಣಿಮಾಮಹಿಮಲಘಿಮಾ
ಅಂತು ಗರಿಮಾ ಪ್ರಾಪ್ತಿ ಪ್ರಾಕಾ-
ಮ್ಯಂತು ಈಶಿತ್ವಂವಶಿತ್ವಮಿವಷ್ಟಸಿದ್ಧಿಗಳ
ಕಂತುರಿಪು ಶ್ರೀ ಯೋಗಿವರ್ಯರು
ಆಂತು ಸಹಜದೊಳಂತರಂಗದಿ
ಸಂತಸದೊಳೆಸಗುವರು ಬಹುವಿಧಲೀಲೆಗಳ ನೋಡಾ ೩೪

ಯಮನಿಯಮ ಭಕ್ತಸ್ಥಲಕೆ ಮಾ-
ಣಾಮಹೇಶಸ್ಥಲಕೆಯಾಸನ
ನೇಮವುಳ್ಳ ಪ್ರಸಾದಿ ಪ್ರತ್ಯಾಹಾರ ಸಂಯುತನು
ಸುಮಹಿಮಗೆ ಸಲೆ ಪ್ರಾಣಲಿಂಗಿಗೆ
ಸಮವು ಪ್ರಾಣಾಯಾಮವೆಂಬುದು
ಗು ಶರಣಂಗೆ ಲಿಂಗದಧ್ಯಾನಧಾರಣವು ೩೫

ಐಕ್ಯನಿಗೆ ನಿಶ್ಚಲಸಮಾಧಿಯು-
ದಕ್ಕು ಯೋಗಾಷ್ಟಾಂಗಗಳು ನೆರೆ
ಅಕ್ಕರದಿ ಕೂಡಿಹವು ಷಟ್‌ಸ್ಥಲಗಳಲಿ ಕ್ರಮದಿಂದ
ತಕ್ಕುದಾಗಿದೆ ಯೋಗಮಾರ್ಗವು
ಚೊಕ್ಕ ಶಿವಯೋಗಕ್ಕೆ ನಿತ್ಯವು
ದುಕ್ಕಿಸುವುದೇಕಣ್ಣ ನಮ್ಮೊಳು ಯೋಗವಿಲ್ಲೆಂದು ೩೬

ನೆಲಸಿಹುದು ಆಧಾರಚಕ್ರದಿ
ವಿಲಸಿತದ ಆಚಾರಲಿಂಗವು
ನೆಲಸಿಹುದು ಗುರುಲಿಂಗ ಸ್ವಾಧಿಷ್ಠಾನಚಕ್ರದಲಿ
ನೆಲಸಿಹುದು ಮಣಿಪೂರಕದಿ ಮೇಣ್
ನಳನಳಿಪ ಶಿವಲಿಂಗವದು ಕೇಳ್
ಪೊಳೆವನಾಹತ ಚಕ್ರದೊಳ್ಚರಲಿಂಗ ನೆಲಸಿಹುದು ೩೭

ಮಿರುಪ ತತ್ಪರಸಾದಲಿಂಗವು
ಮೆರೆಯುತಿಹುದು ವಿಶುದ್ಧಿಚಕ್ರದಿ
ಸುರುಚಿರದ ಮಾಲಿಂಗವಾಜ್ಞಾಚಕ್ರದೊಳೆಸೆಗು
ಸರಸದಿಂ ಷಟ್‌ಚಕ್ರಗಳೊಳಿರೆ
ಇರುತಿಹವು ಷಡ್ಲಿಂಗಗಳ್ ಕೇಳ್
ಕೊರತೆಯಪ್ಪದೆ ಯೋಗ ಶಿವಯೋಗದೊಳು ಕೂಡಿರಲು ೩೮

ಪರಮಶುದ್ಧಾಚರಣೆಯಿಂದಾ
ವಿರತಮೂರ್ತಿಯು ದಿವ್ಯಯೋಗಿಯು
ಉರುತರದ ಪಾವಿತ್ರ್ಯದಿಂ ಪರಿಶೋಭಿಸುವನೈಸೆ
ಮಿರುಪ ತಾರೆಗಳೆಮಗೆ ಬೆಳಕಂ
ಸರಸ ಪುಷ್ಪಗಳೆಮಗೆ ಕಂಪಂ
ಅರಿಯದಲೆ ಸೊಗವೀಯುವಂದದೊಳಾತ ಸೊಗವೀವ ೨೯

ಮಾತು ವೈನೆರಳವನ ಶ್ವಾಸವ
ನೋತು ಸೋಂಕಿದ ಗಾಳಿಯೆಲ್ಲವು
ಪ್ರೀತಿಯಿಂ ಪಾವನವ ಮಾಳ್ಪವನಂತಪ್ರಾಣಿಗಳ
ಏತರದ ಮಹಿಮೆಯದು ಯೋಗಿಗೆ?
ಪೂತ ಯೋಗಸಮಾಧಿಬಲವೈ
ಆತನಿಗೆಯೇನೊಂದಸಾಧ್ಯವದಿಲ್ಲವೀ ಜಗದಿ ೩೦

ಇಂತು ಯೋಗದ ಮಹಿಮೆಯಾ ಸಲೆ
ಸಂತಸದಿ ತಿರುವಾಂಕಗರುಹಲು
ಮುಂತೆ ಬೂದೀಶ್ವರನ ಕೃಪೆಯಿಂದವಗೆ ಯೋಗವದು
ಶಾಂತದಿಂ ಪ್ರಾಪ್ತಿಸಲು ಆತನು
ಅಂತ್ಯಕಾಲದ ವರೆಗೆ ಸಾಧಿಸಿ
ಚಿಂತೆಯಿಲ್ಲದೆ ಚಿತ್ಸುಖಾನಂದದೊಳು ವಿರಮಿಸಿದ ೩೧

ಅನಂತಪೂರ

ಒಂದುಸಲವಾಂಧ್ರಪ್ರದೇಶದ-
ದೊಂದೆಡೆಗೆ ಭೀಕರದ ಕ್ಷಾಮವು
ಸಂದಿಹುದನಂತಪುರಜಿಲ್ಲೆಯೊಳೇನು ಪೇಳುವದು?
ನಿಂದಿರಲು ಮಳೆ ಬಾವಿಕೆರೆಗಳೊ-
ಳೊಂದು ಹನಿ ನೀರಿಲ್ಲದಿರೆ ಹಾಯ್!
ಸೊಂದು ಪಶುಪಕ್ಷಿಗಳು ಕ್ರಿಮಿಕೀಟಗಳು ಸತ್ತಿಹವು ೩೨

ತರುಮರಾದಿಗಳೊಣಗಿ ಹೋದವು
ಕೊರಗುವದು ನೀರಡಿಕೆಯಿಂ ಜನ
ಪರಿಸರವು ಪಾಳ್ಸುರಿಯುತಿರೆ ತಾನಿಂಥ ಸಮಯದಲಿ
ಪರಮ ಬೂದೀಯೋಗಿಯಲ್ಲಿಗೆ
ಚರಿಸುತೈತಂದಿರಲು ಮಾರ್ಗದಿ
ಗುರುವರರ ಮೈನೆರಳು ಬಿದ್ದಿಹ ತಾಣದಲ್ಲೆಲ್ಲ ೪೧

ಹಸಿರು ಮುರಿಯಿತು ರುಕ್ಷ ಭೂಮಿಯು
ಸಿರೊಡೆದುಪ ಒಣಗಿರ್ದ ಮರಗಳು
ಸಸಿನದಿಂ ಚಿಗುರಿದವು ಬತ್ತಿದ ಬಾವಿ ಕೆರೆಗಳೊಳು
ಒಸರಿಹುದು ತಿಳಿನೀರು ಜನಗಳ
ಮುಸುಡಿ ಕಳೆಯೊಂದಿಹುದು ಸರ್ವರು
ಅಸಮ ಶ್ರೀ ಶಿವಯೋಗಿ ಲೀಲೆಯ ಹಾಡಿ ಹರಸಿದರು ೪೪

ಬೂದಿಯೋಗಿಯು ಚರಿಸಿದೆಡೆಯೊಳು
ಮೋದದಿಂ ಸದ್ಭಕ್ತವೃಂದವು
ಬೂದಿಲಿಂಗವ ಸ್ಥಾಪಿಸಿರ್ದರು ಲೀಲೆಯಾ ನೆನಹಿಂ
ಮೇದಿನಿಯೊಳದು ಇಂದಿಗೂ ಸಹ
ಬೂದಿಲಿಂಗ ಕ್ಷೇತ್ರವೆಂದುಂ
ಸಾದರದ ಸತ್ಕೀರ್ತಿ ಗಳಿಸಿದೆ ಯೋಗಪಂತಹುದೋ ೪೫

ಯೋಗಬಲದಿಂದುಂಟೆ ಮಿಗಿಲಾ
ಯೋಗವೇ ಸಲೆ ಸೃಷ್ಟಿಸ್ಥಿತಿಲಯ-
ಕಾಗಿ ನಿಂತಿದೆ ಯೋಗಿ ಸರ್ವ ಸಮರ್ಥನೈ ಜಗದಿ
ಯೋಗಿ ಸರ್ವರೊಳುತ್ತಮನು ತಾ-
ನಾಗಿ ಮೆರೆಯುವನೀ ಧರಿತ್ರಿಯೊ-
ಳಾಗಮಕೆ ನಿಗಮಕ್ಕಗೋಚರನೀತನೇ ನಿಜವು ೪೬

**ಅಂತು ಎಂಟನೆಯ ಸಂಧಿಗೆ ೫೩೬ ಪದ್ಯಕ್ಕೆ ಮಂಗಲಮಸ್ತು.**
**ಭದ್ರಂ ಶುಭಂ ಮಂಗಲಂ**

ಶ್ರೀ ಗುರುಬಸವಲಿಂಗಾಯ ನಮಃ

# ಒಂಭತ್ತನೆಯ ಸಂಧಿ

## ಹಳ್ಯಾಳ

ಸೂಚನೆ–ಚರವರರು ಲೀಲಾವಿಲೋಲರು
ಚರಿಸಿದರು ಮಹಿಮೆಯನು ತೋರುತೆ
ನೆರೆಹೊರೆಯ ಗ್ರಾಮಂಗಳಲಿ ಕಡಪಟ್ಟಿ ಮೊದಲಾದ

ಸತ್ತ ಅಡಿವೆಯ್ಯನನು ಬದುಕಿಸಿ
ಮತ್ತೆಯೆಡ್ರಾವಿಯನು ಸಾರ್ದುರೆ
ಇತ್ತು ದರ್ಶನವಂ ಚಿದಂಬರ ದೀಕ್ಷಿತರ ತಳಕೆ
ಅತ್ತ ಗರಗದ ಮಡಿವಳರ ಬಳಿ-
ಗುತ್ತಮರು ನಡೆತಂದು ಮಾರಿಯು-
ನೊತ್ತಿಮೆಟ್ಟಿದರುಪ್ಪಿನಾಬೆಟಗೇರಿ ಗ್ರಾಮದಲಿ ೧

ಪೊಡವಿ ಯೋಳ್ಕಡಪಟ್ಟಿಗ್ರಾಮದ
ಎಡೆಯೊಳಿಹ ಹಳ್ಯಾಳಿನೂರೊಳು
ಮಡಿದಿಹನುಅಡಿವೆಯ್ಯನೆಂಬನು ಕಾಲವಶದಿಂದ
ಮಡದಿ ಮಕ್ಕಳು ಬಂಧು ಬಾಂಧವ-
ರೆಡವಿಡದೆ ರೋದಿಸುತಲೆದೆಯೆದೆ
ಹೊಡೆದುಕೊಳ್ಳುತೆ ಶೋಕಪರವಶರಾಗಿ ನಿಂದಿಹರು ೨

ಬಡವರಿಗೆ ತಾ ಭಾಗ್ಯದೇವರು
ಕೊಡುತಿಹನು ಧನಧಾನ್ಯ ವಸ್ತ್ರವ
ಬಿಡದೆ ಗುರುಚರರನ್ನು ಸತ್ಕರಿಸುವನು ಭಕ್ತಿಯಲಿ
ನಡೆ ನುಡಿಯೊಳೊಂದೆನಿಸಿ ಗ್ರಾಮದ
ಒಡೆಯನಹನಡಿವೆಯ್ಯನಾತನ-
ನಡಿಗಡಿಗೆ ನೆನೆಸುತ್ತಲೂರೇ ದುಃಖದುಂಬಿಹುದು ೩

ಗುಮ್ಮಗೋಳೆಂಬೂರೊಳಾತನ
ನೆಮ್ಮಿದಾಪ್ತರು ವಾಸಿಪರು ಜನ–
ರುಮ್ಮಳದೊಳಲ್ಲಿಗೆ ನಿಧನವಾರ್ತೆಯನು ಕಳಿಸಿದರು
ನಮ್ಮ ಶ್ರೀಬೂದೀಶಯೋಗಿಯು
ಗುಮ್ಮಗೋಳಿನೊಳಾ ಮನೆಯೊಳುರೆ
ಒಮ್ಮನದಿ ಶಿವಪೂಜೆಯೋಳಾಸಕ್ತನಾಗಿರಲು ೪

ಅವರ ಕಿವಿಗೀ ಶೋಕವಾರ್ತೆಯು
ತವೆ ಗೃಹದ ರೋದನದಿ ತಿಳಿಯಲು
ಜವದಿ ಹಳ್ಯಾಳಕ್ಕೆನಡೆಯಿರಿ ಬರ್ಪೆನಾನೆಂದು
ಭವರಹಿತ ಶಿವಯೋಗಿ ನುಡಿಯಲು
ತವಕದಿಂ ಬಂದಿರ್ದರಲ್ಲಿಗೆ
ಶವವ ಗೂಟಕೆ ಬಡೆದ ತಾಣಕೆ ಗುಮ್ಮಗೋಳವರು ೫

ಬಂದು ಯೋಗಿಯು ಜಳಕ ಮಾಡಿದ-
ನಂದು ಮನೆಯೊಳು ಪೂಜೆ ಮುಗಿಯಿತು
ಮುಂದೆ ಭಸ್ಮವ ಕೊಂಡು ಶವದೆಡೆ ಬಂದು ಮೈಗೆಲ್ಲ
ಚೆಂದದಿಂ ತೊಡೆಯುತ್ತ ಭಸಿತವ
ನಂದದಿಂದಡಿವೆಯ್ಯ ಏಳೇ-
ಳೆಂದೊಡಾಕ್ಷಣ ಕಣ್ಣು ತೆರೆಯಿತು ಹೆಣವು ಸೋಜಿಗವು ೬

ಎದ್ದ ನಡಿವೆಯ್ಯನು ಸಜೀವನು
ಬಿದ್ದನಾ ಬೂದೀಶಪಾದಕೆ
ಇದ್ದ ಜನ ಕೊಂಡಾಡೆ ಯೋಗಿಯಭೂತಲೀಲೆಯನು
ಎದ್ದ ಶ್ರೀ ಅಡಿವೆಯ್ಯನಾದಿನ
ಸಿದ್ಧಗೊಳಿಸಿದನವರ ಕೃಪೆಯಿಂ-
ದಿದ್ದು ಬಿದ್ದವರೆಲ್ಲರಿಗೆ ಗಣ ಪರ್ವಮಂ ಮುದದಿ ೭

ವಿನತ ಭಕ್ತನ ಮುಕ್ತಸೇವೆಯು
ಮನದಿ ಸಂತಸಗೊಂಡು ಸರ್ವರ-
ನನುನಯದೊಳಾಶೀರ್ವದಿಸಿ ನೆರೆ ಬೂದಿಯಂ ನೀಡಿ
ಮನೆಯ ಬಿಟ್ಟಾನಂದದಿಂ ತಾ
ವನಕೆ ತೆರಳಿದನಾಗ ಜನಗಣ-
ವನುಪಮಾತ್ಮನ ಮಹಿಮೆಯಂ ನಲವೇರಿ ಹೊಗಳಿದರು ೮

ಏನು ಪೇಳುವುದೀತನಾ ಘನ-
ವೇನ ಬಣ್ಣಿಪುದಿವನ ಲೀಲೆಯ-
ನೇನು ಚಿತ್ರವೊ ! ಸತ್ತವನ ಬದುಕಿಸಿದ ಪುಣ್ಯಾತ್ಮ
ಮೌನಿ ಮುನಿವರ ಬೂದಿಯಾತಿವರ
ಭಾನುಭಾಸುರ ಹೇ ಕೃಪಾಕರ
ಸಾನುರಾಗದೊಳೆಮ್ಮ ರಕ್ಷಿಪುದೆಂದು ಪಾಡಿದರು ೯

ಅಂದು ಬದುಕಿರ್ದಡವಿಯಾರ್ಯನು
ಅಂದಚಂದದ ಮೂರು ಮಕ್ಕಳ
ತಂದೆಯಾದನು ಮುಂದೆ ಯೋಗಿಯ ಕೃಪೆಯದೆಂತಹುದೊ !
ಮುಂದೆಯಾ ಮನೆತನದ ಭಾಗ್ಯವು
ಕುಂದುಕೊರತೆಗಳೆನಿತುಯಿಲ್ಲದೆ.
ಇಂದಿಗೂ ಸಾಗಿಹುದು ಸಕಲೈಶ್ವರ್ಯದಿಂಗೂಡಿ ೧೦

## ಎಡ್ರಾವಿ

ಒಂದು ದಿನವೆಡ್ರಾವಿ ಭಕ್ತರು
ವಂದಿಸುತೆ ಬೂದೀಶಪಾದಕೆ-
ನಂದದಿಂ ಪ್ರಾರ್ಥಿಸಿದರವರಿಗೆ ಪ್ರಭುವೆ ದಯೆಯಿಂದ
ಬಂದು ನಮ್ಮೂರಲ್ಲಿ ಸೇವೆಯು
ಚಂದದಿಂ ಕೈಕೊಂಡು ನಮ್ಮ-
ನ್ನಂದದಿಂದಾಶೀರ್ವದಿಸಿ ಕೃಪೆ ನೀಡಿರಿಂತೆಂದು ೧೧

ಬಿನ್ನಪವ ಕೈಕೊಂಡು ಭಕ್ತರ
ಮನ್ನಿಸುತಲವರಿಚ್ಛೆಯಂ ಗಡ
ಸನ್ನಿಧಿಯು ದಯ ಮಾಡಿಸಿತು ಎಡ್ರಾವಿಗಾಕ್ಷಣವೆ
ಸನ್ನುತರು ಪೇಳ್ದರು ಸಮಸ್ತರಿ-
ಗಿನ್ನು ಗಣಪರ್ವಕ್ಕೆಯಾ ದಿನ
ಚೆನ್ನ ಹೋಳಿಗೆ ಸೀಕರಣೆಯೆಡೆಯಾಗಲೆಂದೆನಲು ೧೨

ಬೆರಗುವಟ್ಟರು ಭಕ್ತರೆಲ್ಲರು
ಅರಿದಕಾಲದೊಳಷ್ಟು ಪಣ್ಗಳ
ತರುವದೆಲ್ಲಿಂ ಪೇಳಿ ಯೋಗಿಯು ನಮ್ಮ ಪರಕಿಪನು
ಗುರುವು ತಾನಿರೆ ಭಯವದೇತಕೆ ?
ಜರಗುವದು ದಿಟ ನುಡಿದ ಮಾತದು
ಬರಿದೆ ಚಿಂತಿಪುದೇಕೆಯೆಂದುರೆ ಮೌನದಾಳಿದರು ೧೩

ಹೋಳಿಗೆಯು ಪಾಕಂಗಳೆಲ್ಲವು
ಹೇಳಿದಂದದಿ ಸಿದ್ಧವಾದವು
ಪೇಳಲೇಂ ಹೊಸಹಳ್ಳಿಯಾ ಬ್ಯಾಹಟ್ಟಿಮನೆತನದ
ಮೇಳದಿಂ ಮರಿಬಸವನೆಂಬವ-
ನಾಳಿನಾ ಮೇಲ್ಹೊರಿಸಿ ತಂದನು
ಕಾಳವರ್ಣದ ನೂರು ಮಾವಿನ ಪಣ್ಗಳಾ ದಿನವೆ ೧೪

ಯೋಗಿಯಿಚ್ಛೆಗಸಾಧ್ಯವಾವುದು ?
ಆಗ ಹೊಸಹಳ್ಳಿಯೊಳಕಾಲದಿ
ಮಾಗಿದಾ ಮಾವಣ್ಣಗಳಂ ಫಲವಿತ್ತ ಮರನಿತ್ತು
ಯೋಗಿಗೀ ಮೊಸಲ ಫಲಂಗಳ-
ನಾಗ ತಾನೀಯಲ್ಕೆ ಪ್ರೇರಣೆ-
ಯಾಗಲಾಕ್ಷಣ ಮರಿಬಸವ ತಾ ಹೊರಿಸಿ ತಂದಿಹನು ೧೫

ಭಾವಿಸಿದೊಡೀ ನೂರುಪಣ್ಣಗಳು
ಸಾವಿರಾರು ಜನಕ್ಕೆ ಸಾಲ್ಗುಮೆ ?
ನಾವು ಅಪಹಾಸ್ಯಕ್ಕೆ ಗುರಿಯಾಗುವೆವುಯೆಂದೆನುತೆ
ಆ ವಿಶಾಲ ಮಠಾಂಗಣದಿ ಜನ–
ವಾವಗಂ ಪ್ರಭುವನ್ನು ಸ್ಮರಿಸುತ
ತಾವೆ ಬೂದೀಶರು ಸಮರ್ಥರು ನಡೆಸಿಕೊಡಲೆಂದು ೧೬

ನಿಂತಿರಲು ಬೂದೀಶ ಪೇಳ್ದನು
ಚಿಂತೆಯಂ ಬಿಡಿರಯ್ಯಾ ಭಕ್ತರೆ
ಕಂತುಹರ ಕರುಣಿಸಿದನೀ ನೂರ್ ಪಣ್ಣುಗಳನೀಗ
ಚಿಂತೆಯೇತಕೆ ಸಾವಿರಾಳಿನ
ಭ್ರಾಂತಿ ನಮಗೇಕೆಂದೆನುತ ತಾ–
ಮಂತು ಸೀಕರಣೆಯನು ಸ್ವಂತವೆ ಸಿದ್ಧಗೊಳಿಸಿದರು ೧೭

ಊರ ಜನಕೆಲ್ಲಕ್ಕೆ ಪಂಕ್ತಿಯು
ಸಾರತರ ಸೊಬಗಿಂದೆ ಸಾಗಿತು
ಮೀರಿ ಬೆಳೆದುದು ಸೀಕರಣೆ ಗುರುಪರುಷಹಸ್ತದಲಿ
ಬೇರೆ ಬೆಡಸೂರುಗರಗೋಳಿನ
ಬೇರೆ ನೆರೆಯೂರುಗಳ ಭಕ್ತರ
ದಾರಿದಾರಿಯೊಳಲೆವ ಜನರಂ ಕರೆದು ಉಣಿಸಿದರು ೧೮

ಬೆಳೆದುದಕ್ಷಯ ಪಾತ್ರೆ ವಿಪುಲದಿ
ತಿಳಿದು ಯೋಗಿಯು ತಿರುಕಪರಕರಿ-
ಗುಳಿದ ಸಿದ್ಧ ಪ್ರಸಾದಮಂ ಸಲೆ ನೀಡಿ ಮುಗಿಸಿದನು
ಬೆಳಗಿತಾತನ ಕೀರ್ತಿ ಧರೆಯೊಳು
ತಳೆಯಿತಾತನ ಹೆಸರು ಸರ್ವರ
ತೊಳಪ ನಾಲಗೆಯನ್ನು ಶಿವ ಶಿವ ! ಎಂಥ ಸುಕೃತಿಗಳೋ ೧೯

ಪರುಷ ಹಸ್ತವ ಪಡೆದ ಯೋಗಿಯು
ಹರುಷದಿಂ ಪರಸಾದ ಮುಟ್ಟಲು
ಭರದಿ ಬೆಳೆದುದು ತತ್ಪ್ರಸಾದವು ನೂರ್ಮಡಿಗೆ ಮಿಗಿಲು
ಅರಿಯ ಬಲ್ಲೆವೆ ಪಾಮರರು ನಾವ್
ಪಿರಿಯ ಸಾಮರ್ಥ್ಯವನು ಯೋಗದ
ಬರಿದೆ ಜರಿದೆವು ಇಂದ್ರಜಾಲವಿದೆಂದು ಸೊಕ್ಕಿನಲಿ ೨೦

## ಗುರ್ಲಹೊಸೂರ

ಬೈಲವಾಡ್ವರ್ತಿಯಲಿ ಯೋಗಿಯು
ಲೀಲೆಗಳ ನಟಿಸಿರ್ದನಂತರ
ಕಾಲಕರ್ಮದ ಬಾಧೆಯಿಂದುದ್ಧರಿಸಿ ಭಕ್ತರನು
ಲೀಲೆಯಿಂ ತಪಗೈದು ಕೆಲದಿನ
ಲೋಲನಂದಿಯ ವಿಗ್ರಹವ ತಾ-
ನೋಲಯಿಸಿ ಸ್ಥಾಪಿಸಿದನಲ್ಲಿಯ ಭಕ್ತಜನಹಿತಕೆ ೨೧

ಮುಂದೆಯಲ್ಲಿಂ ಜವದಿ ಯೋಗಿಯು
ಬಂದಿಹನು ಗಡ ಗುರ್ಲಹೊಸೂರಿಗೆ
ಚೆಂದದಿಂದಲ್ಲಿಯ ಮಹಾಪುರುಷನನು ಕಾಂಬುದಕೆ
ನಂದಮೂರ್ತಿ ಮಹಾ ವಿರಾಗಿಯು
ಸಂದ ಲೀಲಾನಂದ ವಿದ್ವಾನ್
ಕಂದುಗೊರಲನ ಭಕ್ತನಿರ್ಪ ಚಿದಂಬರಾಂಕಿತದ ೨೨

ಜನರವರ ಕರೆಯುವರು ನಯದಿಂ
ಘನ ಚಿದಂಬರದೀಕ್ಷಿತರುಯೆಂ–
ದನುನಯದಿ ತಾವ್ ಬೂದಿಯೋಗಿಯು ಬರವ ಮನದಂದು
ಅನಘಮೂರ್ತಿಯು ಸ್ವಾಗತಕೆ ಬಹು
ಜನಿತ ಹರ್ಷದಿ ತಮ್ಮ ಮಠದೊಳು
ವಿನಯದಿಂದಾಸನವನೊಂದನ್ನೇರ್ಪಡಿಸುತಿಹರು ೨೩

ಬರಲು ಮಠದೆಡೆ ಬೂದಿಯೋಗಿಯು
ಕರಪಿಡಿದು ಬರಮಾಡಿಕೊಂಡರು
ವರಭಕುತಸಂದೋಹದೊಂದಿಗೆ ದೀಕ್ಷಿತರು ಮುದದಿ
ಪರಮ ಬೂದೀಶ್ವರನ ಪೀಠದೊ-
ಳಿರಿಸಿ ಸಲೆ ಸತ್ಕರಿಸಿ ವಿನಯದಿ
ಸರಳ ಹೃದಯವ ವ್ಯಕ್ತಪಡಿಸಿದರಾತನೆದುರಿನಲಿ ೨೪

ಇದನು ನೋಡಿದ ಕೆಲರು ಕರ್ಮಠ-
ರೆದೆಯುಡುಗಿ ನಾಣೆಂದೆ ನುಡಿದರು
ಇದು ಕಣಾ ಸೋಜಿಗವು ! ಪರಜಾತಿಯ ವಿರಕ್ತನಲಾ
ಸದಮಲರು ವಿಪ್ರೋತ್ತಮರು ತಾ-
ವಿದಕೆ ಕೈಹಾಕುವರೆ ಶಿವ ! ಶಿವ !
ಬಿದಿಯದಿದು ವಿಪರೀತ ನಾಟಕವೆಂದು ಗಳಹಿದರು ೨೫

ವಿಪ್ರರಾಕ್ಷೇಪಣೆಯ ಯೋಗಿಯು
ಕ್ಷಿಪ್ರದಿಂ ಬಗೆದಂತರಂಗದಿ
ಸುಪ್ರಸನ್ನತೆಯಿಂದ ಲೀಲೆಯನಾಡಿ ತೋರಿದನು
ಆ ಪ್ರಸಂಗದಿ ಯೋಗಿವರ ತಾ
ವಿಪ್ರ ದೀಕ್ಷಿತರಂತೆ ತೋರ್ದನು
ಅಪ್ರಬುದ್ಧ ಸನಾತನಿಗಳಾಶ್ಚರ್ಯ ಬಡುತಿರಲು ೨೬

ಅರೆನಿಮಿಷದೊಳಗಾ ಸುಯೋಗಿಯು
ವರ ಚಿದಂಬರ ದೀಕ್ಷಿತರ ಗುರು-
ವರನು ತಾನೆನೆ ತೋರಿದನು ಮರುಚಣದೊಳಗೆ ತಾನು
ಹರುಷದಿಂ ಬೂದೀಶನಾಗಿಯೆ
ಇರುವುದನು ನೆರೆ ನೋಡಿ ವಿಪ್ರರು
ಬೆರಳು ಕಚ್ಚಿ ವರವರಗಾಧ ಪವಾಡಮಂ ಕಂಡು ೨೭

ಪರಮ ಯೋಗಿಯ ನಿಲವ ನಿಜದಿಂ
ಪರಮಯೋಗೀಶ್ವರನೆ ಬಲ್ಲನು
ಅರಿದಿಹರು ತಾವೊಬ್ಬರೊಬ್ಬರ ನಿಲವನುಭಯತರು
ಪರತರದ ರತ್ನದ ಬೆಲೆಯ ತಾ-
ನರಿವ ರತ್ನಪರೀಕ್ಷನು ಸಲೆ
ಪೆರತುಳಿದ ಬೂಟಾಟಿಕೆಯ ಜನವೆಂತು ತಾವರಿಗು? ೨೮

ಬೂದಿಯೋಗಿಯ ನಿಲವ ಜ್ಞಾನಿಯು
ವೇದಮೂರುತಿ ದೀಕ್ಷಿತನು ಸಲೆ
ಭೇದವಿಲ್ಲದೆ ಕಂಡುದುದ ತಾವೆಂತು ಕರ್ಮಠರು
ವಿದಿತಗೊಳ್ವರು ಜ್ಞಾನಶೂನ್ಯರು
ಮುದದಿ ದೀಕ್ಷಿತರನುವ ಯೋಗಿಯು
ಹೃದಯದೋಳ್ಙಾನರಿತೆ ದರ್ಶನಕಾಗಮಿಸಲಿಲ್ಲೇಂ ೨೯

ಅವಗಣಿಸಿ ಕರ್ಮಠರ ನಡತೆಯು
ತವಕದಿಂ ದೀಕ್ಷಿತರು ಪೇಳ್ದರು
ಶಿವನ ಕೃಪೆವಡೆದಾ ಮಹಾತ್ಮರಿಗುಂಟೆ ಕುಲಗೋತ್ರ ?
ಅವಿನಯದೊಳಜ್ಞಾನಿಗಳ್ ಸಲೆ
ಭುವನದೋಳ್ ಹೋರಾಡುತಿರ್ಪರು
ಅವನ ಕುಲ ಹೆಚ್ಚಿವನ ಕುಲ ಕೀಳೆಂದು ಹೀಗಳೆದು ೩೦

ಶಿವನೆ ತಾನಾಗಿರುವ ಯೋಗಿಗೆ
ಅವನಿಯೊಳ್ಕುಲಛಲವು ತಟ್ಟದು
ಭವಿಗಳಂದದಿ ಭೇದಭಾವವ ತಾರನೈ ಮನದಿ
ಅವರ ನೀವಭಿವಂದಿಸುವುದೆನೆ
ಜವದಿ ಯೋಗಿಯ ಪಾದಪದ್ಮಕೆ
ತವೆ ಮಣಿದು ತತ್ಕೃಪೆಯ ಪಡೆದಾನಂದಿಸಿದರಾಗ ೩೧

ಊಂದಾರಿಯು ತೋರ್ಪ ಮನುಜನು
ಯಾರೆಯಾಗಲಿ ನಮಗೆ ಹಿತವನು
ಅರಿವನು? ಕುಲವಾವುದೆಂಬುವಗೊಡವೆ ನಮಗೇಕೆ?
ಸಾರತತ್ವವಿಚಾರವರಿದವ-
ನಾರೆಯಿರಲವ ನಮಗೆ ಪೂಜ್ಯನು
ಹೋರುವದು ತರವೇನು ವ್ಯಕ್ತಿಯ ಘನವ ಲೆಕ್ಕಿಸದೆ? ೩೨

## ಉಪ್ಪಿನಬೆಟಗೇರಿ

ಯೋಗಿಗಳು ಸಂಚಾರ ಕ್ರಮದಿಂ-
ದಾಗಮಿಸಿದರದೊಂದು ದಿನ ತಾ-
ವಾಗಿಯೇ ಸಲೆ ಉಪ್ಪಿನಾಬೆಟಗೇರಿಯೆಂಬೂರ್ಗೆ
ಆಗಲಾ ಗ್ರಾಮಕ್ಕೆ ಮಾರಿಯ
ರೋಗವೆಡೆಗೊಂಡಿರಲು ನಿತ್ಯವು
ಸಾಗುವದು ದಪನಕ್ಕೆ ಪೆಣಗಳಸಾಲು ಮಸಣಕ್ಕೆ ೩೩

ಊರಿನೊಳಗಣ ಪ್ರಮುಖರೆಲ್ಲರು
ಊರಿಗೈತಂದಾ ಸುಯೋಗಿಯ
ಸಾರಿ ನಮಿಸಿಂತೆಂದು ಪಾದಕೆ ಅರಿಕೆಗೈದಿಹರು
ಕೋರುವೆವು ತವ ಕೃಪೆಯ ಪೂಜ್ಯರೆ
ಪಾರುಮಾಡೆಮ್ಮನ್ನು ಸಾಯ್ವೆವು!
ಮಾರಿಕಾರೋಗವ ನಿವಾರಣಗೈವುದೈ ತಂದೆ ೩೪

ಎಂದು ಬಿನ್ನವಿಸಿರಲು ಯೋಗಿಯು
ಚೆಂದದಿಂದುಸುರಿದನು ಭಕ್ತರಿ-
ಗೆಂದು ಕೇಳಿರಿ ನೀವು ನಿಮ್ಮೂರ್ ವೀರಭದ್ರನಿಗೆ
ಸಂದದಿಂ ರುದ್ರಾಭಿಷೇಕವ-
ನಂದಗೊಳಿಸಿರಿ ಗಣಕೆ ತೃಪ್ತಿಯು-
ನಿಂದುಧರನೊಪ್ಪುವವೊಲೆಸಗಿರಿ ರೋಗ ನೀಗುವದು ೩೫

ಬೂದಿಯೋಗಿಯು ಮತ್ತೆ ಪೇಳ್ದನು
ಆಧಿವ್ಯಾಧಿಯು ಭೂತಪ್ರೇತದ
ಬಾಧೆ ಮೊದಲಾಗಿರ್ದರಿಷ್ಟಗಳೆಲ್ಲವಡಗುವವು
ಓದಿದೊಡೆ ಶ್ರೀರುದ್ರಮಂ ಮೋ-
ಕ್ಷೋದಿಸಿದೊಡದ ಕೇಳಿ ಮನದಲಿ
ಮೋದವೊಂದಿದೊಡೆಂಥ ಕಂಟಕ ಬರಲಿ ಬಯಲಕ್ಕು ೩೬

ದೊರೆಯುವದು ಸುಖಶಾಂತಿ ಗ್ರಾಮಕೆ
ಪರಭಕುತಿ ನೆಲಸುವದು ಜನರೊಳು
ಪರಶಿವನ ಕಳೆಯೆತ್ತ ನೋಡಿದೊಡತ್ತ ರಂಜಿಸುಗು
ಚರಿಸಿರೈ ರುದ್ರಾಭಿಷೇಕವ–
ನಿರದೆ ಪ್ರತಿದಿನ ಗಣದ ತೃಪ್ತಿಯ
ವರುಷಕೊಂದಾವರ್ತಿ ತಪ್ಪದೆ ನಡೆಸಿರೆಂದೆನಲು ೩೭

ಜನರು ಭಕ್ತಿಯೊಳಂತು ಚರಿಸಲು
ಕೊನೆಗೆ ರೋಗವು ಬಿಟ್ಟು ತೊಲಗಿತು
ದಿನವು ವೀರೇಶಂಗೆ ಶ್ರೀ ರುದ್ರಾಭಿಷೇಕವದು
ಕೊನೆತನಕ ಸಾಗುತ್ತ ಬಂದಿದೆ
ವಿನುತ ಗಣಸಂತೃಪ್ತಿಯಿಂದಿಗು
ಎನಿತು ತೊಂದರೆಯಿಲ್ಲದಲೆ ಪ್ರತಿವರ್ಷ ಜರಗುವದು ೩೮



ಪ್ರಭುತೀರ್ಥನೆಂಬ ಭಾವಿ

ಯೋಗಿಯಾಡಿದ ನುಡಿಯು ಸತ್ಯವು
ಯೋಗಿ ನಡೆದಿಹ ನಡೆಯು ಸತ್ಯವು
ಯೋಗಿ ಕಲ್ಪಿಸಿದಂಥ ಬಯಕೆಯು ಸಿದ್ಧಿ ಹೊಂದುವದು
ಯೋಗಿ ಕಾರ್ಯವು ಶಾಶ್ವತವು ತಾ-
ನಾಗಿ ಜನತೆಗೆ ಮಾರ್ಗದರ್ಶನ-
ವಾಗಿಹುದು ಕಡೆತನಕ ಯೋಗಿಯ ಮಹಿಮೆ ಕೇವಳವೆ? ೩೯

ಗರಗ

ಗರಗದಾ ಮಡಿವಾಳ ಯೋಗಿಯ
ದರುಶನಕೆ ಬೂದೀಶಯೋಗಿಯು
ಬರುತಿರಲ್ಕೊಂದುದಿನ ಪುರಜನರಾತನಂ ಕಂಡು
ಪರಮ ಸಂಭ್ರಮದಿಂದಲಾತನ
ಕರೆದುಕೊಂಡೊಯ್ದಿಹರು ಮಡಿವಳ
ಗುರುವಿನೆಡೆ ಗೌರವದಿ ಸತ್ಕರಿಸುತ್ತ ಭಕ್ತಿಯೊಳು ೪೦

ಇಬ್ಬರೂ ಶಿವಯೋಗಿವರ್ಯರು
ಒಬ್ಬರೊಬ್ಬರನಪ್ಪಿ ಮೋದದಿ
ಉಬ್ಬಿ ಸಾನಂದಾಶ್ರುಗಳ ಸೂಸಿದರು ನಲವೇರಿ
ಇಬ್ಬರೇಕಾಸನದಿ ಮಂಡಿಸಿ
ಒಬ್ಬರೊಬ್ಬರ ಕುಶಲವಾರ್ತೆಯ
ಹಬ್ಬದೂಟವನುಂಡು ಶಿವಗೋಷ್ಠಿಯೊಳು ರತರಾಗೆ ೪೧

ಮಲಹರನರೂಪಂಗೆ ಮಡಿವಳ-
ಗಲಲ! ಲಿಂಗವದಿಲ್ಲವೆನ್ನುತೆ
ಕೆಲವರಾಕ್ಷೇಪವನುಯೆತ್ತಿದರಾಗ ಪಿಸುನುಡಿಯಿಂ
ಬಲಯುತರು ತಾವಾದೊಡೂ ಸಹ
ತೊಲಗಬಹುದೇನಿಷ್ಟಲಿಂಗವ ?
ಒಲಿವನೇ ಶಿವ ? ಮೆಚ್ಚುವುದೆ ಜನವಿಂಥ ಕೃತಿಗಾಗಿ ೪೨

ಮಡಿವಳನ ಕುರಿತಾಡಿದಾ ನುಡಿ–
ಗಡಣವೆಲ್ಲವ ಕೇಳಿ ಬೂದಿಯು
ತಡವ ಮಾಡದೆ ಪೇಳ್ದನಾ ಜನಗಳಿಗೆ ಶಾಂತಿಯಲಿ
ಮೃಡನ ಶರಣರು ಸ್ವಂತ ಧೀರರು
ಒಡೆಯರಾ ನಡೆ ರೀತಿ ನೀತಿಯ
ಕಡೆಗಣಿಸಿ ಸಾಮಾನ್ಯರಾಡುವುದುಚಿತವಲ್ಲವಲಾ ೪೩

ಕಾಲಕರ್ಮಂಗಳನು ಮೀರಿದ
ಫಾಲನೇತ್ರನ ರೂಪಿಗಳ್ ನಿಜ
ಲೀಲೆಗಳ ಬಹುಪರಿಯೊಳಾಡಿದನಂತಮಹಿಮರಲಾ
ಮೇಲು ಮಟ್ಟವ ಜರೆದು ಮಾತಿನ
ಜಾಲಮಂ ಬೀಸಿದೊಡೆ ಮಹಿಮಗೆ
ಜಾಲವೆಡೆಗೊಳಬಹುದೆ ಸೂರ್ಯಂಗೆ ಮಣ್ಣು ತೂರಿದವೋಲ್ ೪೪

ಇನಿತು ಪೇಳ್ದಾ ಬೂದಿಯೋಗಿಯು
ಜನಕೆ ಯೋಗದ ಸಿದ್ಧಿಯಂ ಗಡ
ಮನವೊಸೆದು ತೋರಿರ್ದನಾಕ್ಷಣ ಜನರು ಬೆರಗಾಗೆ
ಮುನಿವರನು ಮಡಿವಾಳಯೋಗಿಯು
ಜನಕೆ ಬೂದೀಶನೊಲು ತೋರ್ದನು
ವಿನುತ ಬೂದೀಶ್ವರನು ಮಡಿವಳಯೋಗಿಯೊಂತೆಸೆದ ೪೫

ಒಮ್ಮೆಯೊರ್ವರು ಬೂದಿಯೋಗಿಗ-
ಳೊಮ್ಮೆಯೊರ್ವರು ಮಡಿವಳರು ಮ-
ತ್ತೊಮ್ಮೆಯೊಂದೇ ದೇಹವೊಲ್ ಕಂಡಿರ್ದರಿಬ್ಬರೆಲಾ
ನಮ್ಮ ಬೂದೀಯೋಗಿಲೀಲೆಯ
ನೆಮ್ಮಿ ಕೈಪರೆಗುಟ್ಟಿ ಸರ್ವರು
ಒಮ್ಮನದಿ ಕೊಂಡಾಡಿದರು ಘನಲೀಲೆಯಂದವನು ೪೬

ಅರಿದು ಮಡಿವಳಯೋಗಿ ಬೂದಿಯ
ಪಿರಿಯ ಘನತರ ಯೋಗಸಿದ್ಧಿಯ
ಒರೆ ಹಿರಿಯೆ ಹಿಗ್ಗಿದನು ತಾಪೊಂದೆಂಬ ಭಾವದಲಿ
ಅರಿಯೆ ಮಡಿವಳ ಬೂದಿಯೋಗಿಯು
ನೆರೆ ನರೆಯೆ ಕೂಡಿರ್ದರೀರ್ವರು
ಪರಮ ರತ್ನಕೆ ಕುಂದಣವನಿಟ್ಟಂತೆ ಮಠದೊಳಗೆ ೪೭

ಸುಮಹಿಮಗೆ ಮಡಿವಾಳತಂದೆಗೆ
ಅಮಳಲಿಂಗೈಕ್ಯನಿವನೆಂಬರು
ಭ್ರಮಿತಗಾತಗೆ ಹೊರಗೆ ದೇಹದಿ ಲಿಂಗವಿಲ್ಲೆಂದು
ತಮತಮಗೆ ತಾವಾಡಿಕೊಂಡೊಡು
ರಮಿಪನಾತನು ಗೌಪ್ಯದಿಂ ಸಲೆ
ಅಮಿತ ಲಿಂಗಾನಂದದೊಳ್ಶಿವಯೋಗಮಾರ್ಗದಲಿ ೪೮

ಇಬ್ಬರೂ ಹಠಯೋಗನಿಷ್ಠರು
ಇಬ್ಬರೂ ಶಿವಯೋಗನಿರತರು
ಇಬ್ಬರೂ ಸಲೆ ಸರ್ವ ಸಿದ್ಧಿಗಳನ್ನು ಪಡೆದವರು
ಇಬ್ಬರೂ ಬಹುಲೀಲೆಯಾಡಿದ-
ರಿಬ್ಬರೂ ಸಮಬಲರು ಯೋಗದಿ
ಇಬ್ಬರಾ ಸಂತೋಷಕೂಟವು ಭಕ್ತರಿಗೆ ಭಾಗ್ಯ ೪೯

ಚೆಲುವ ಕನ್ನಡನಾಡು ಯೋಗದ
ನೆಲೆಯು ಹಠಯೋಗಿಗಳು ಹಿಂದಕೆ-
ನೆಲಸಿದರು ಅಲ್ಲಲ್ಲಿ ಯೋಗಾಭ್ಯಾಸವೆಸಗಲ್ಕೆ
ಹಲವು ಶಿವಯೋಗಿಗಳು ಲಿಂಗದ
ಬಲದಿ ಘನತರ ಲೀಲೆಯಾಡುತೆ
ನಲಿದಿಹರು ಸಲೆ ವೀರಶೈವಸುಧರ್ಮಮಾರ್ಗದೊಳು ೫೦

**ಅಂತು ಒಂಭತ್ತನೆಯ ಸಂಧಿಗೆ ೫೦ ಪದ್ಯಕ್ಕೆ ಮಂಗಲಮಕ್ಕುಂ.**

**ಭದ್ರಂ ಶುಭಂ ಮಂಗಲಂ**

ಶ್ರೀ ಗುರುಬಸವಲಿಂಗಾಯ ನಮಃ

# ಹತ್ತನೆಯ ಸಂಧಿ

## ರೇಣುಕಾದ್ರಿ(ಎಲ್ಲಮ್ಮನ ಗುಡ್ಡ)

ಸೂಚನೆ–ಎಲ್ಲಮನು ಎಲ್ಲರ್ಗೆತಾಯಿಯು
ಕಲ್ಲುಮೂರುತಿಯಾಗಿ ನಿಂದಳು
ಕೊಳ್ಳದಲಿ ಮಳೆಬಾರದಿರೆ ಶಿವಯೋಗಿ ತರಿಸಿದನು

ಹೊರಟುಬಂದನು ರೇಣುಕಾದ್ರಿಗೆ
ಪರಮಯೋಗೀಶ್ವರನು ನೆಟ್ಟಗೆ
ಅರಸುತಿರ್ದನು ಯೋಗ್ಯಸ್ಥಲವೊಂದನ್ನು ಜಪಕಾಗಿ
ಚರಿಸುತತ್ತಿತ್ತಾಗಮಿಸುತಿರೆ
ನೆರೆಯ ಗಿಡಗಳ ಜುಡುಪಿನೊಳ್ಸಲೆ
ಕರಮೆಸೆವ ಗುಹೆಯೊಂದು ಕಣ್ಣಿಗೆ ಬಿತ್ತು ಯೋಗಿಗಳ ೧

ಹರುಷದಿಂದೊಳವೊಕ್ಕು ನೋಡಲು
ಎರಡುಯೆಳೆಹುಲಿಮರಿಗಳಿರ್ದವು
ಮರಿಗಳಂ ಹುಲಿದಾಯಿಯಲ್ಲಿಯೆ ಬಿಟ್ಟು ಬೇಟೆಗೆ
ಅರಸುತಂ ಬೇಂಟೆಯನು ಪೋಗಿರೆ
ಮರಿಗಳಂ ತಾನೆತ್ತಿ ಯೋಗಿಯು
ಕರುಣದಿಂದಾಡಿಸುತಲಿರ್ದನು ತಬ್ಬಿ ಮುದ್ದಿಡುತೆ ೨

ಎಳೆಯ ಮರಿಗಳು ಯೋಗಿಮಹಿಮೆಯ
ತಿಳಿದವೇನೋಯೆಂಬ ಭಾವದಿ
ಬಳಿಕಲಾತನ ಮೇಲೆ ನೆಗೆದಾಡುತ್ತ ನಲಿದಿಹವು
ತೊಳಪ ಕಂಗಳ ಕಾಂತಿಯಿಂ ಗಡ
ಪೊಳೆವ ಶಿವಯೋಗಿಯನು ನೋಡುತ
ತಿಳಿದು ತಮ್ಮಯ ಅಜ್ಜನೆಂದೇ ಸ್ನೇಹದೋರಿದವು ೩

ಮರೆದು ಸಲೆ ಸಹಜಸ್ವಭಾವವ
ಕುರಿಯ ಮರಿಗಳ ತೆರದೊಳಾಡುವ
ಮರಿಗಳನ್ನಾತ್ಮೀಯಭಾವದಿ ಕಂಡಿಹನು ಯೋಗಿ
ಕರುಣವುಳ್ಳಾ ಶಾಂತಮೂರ್ತಿಯ
ಕರುಳ ಗುರುತಿಸೆ ಶಿವನ ಪ್ರೇರಣೆ–
ಯುರದೊಳುಂಟಾಗಿರಲು ಕ್ರೌರ್ಯಕ್ಕೆಡೆಯು ತಾನುಂಟೆ ? ೪

ಹಸಿವು ತೃಷೆಗಳ ಮರೆತುಬಿಟ್ಟವು
ಒಸೆದು ಪಾಲಿಪ ತಾಯ ಮರೆದವು
ವ್ಯಸನ ಚಿಂತೆಗಳೆನಿತುಯಿಲ್ಲದೆ ಯೋಗಿಯಡಿಯಲ್ಲಿ
ವಸುಮತಿಯ ಪ್ರಾಣಿಗಳನೆಲ್ಲವ
ಅಸಮ ಪ್ರೇಮದಿ ಸಲಹಲೋಸುಗ
ಅಸಮನಯನನೆ ಬಂದನೆನೆ ಶಿವಯೋಗಿ ರಂಜಿಸಿದ ೫

ಅನಿತರೊಳ್ ಹುಲಿದಾಯಿಯಲ್ಲಿಗೆ
ಜನಿತ ಶಿಶುಗಳ ಮೊಲೆಯನುಣಿಸಲು
ಮನದ ಹರ್ಷವು ಚಿಗುರುತಿರೆ ತಾ ಬಂದು ನೋಡುತಿರೆ
ಮುನಿಯೊಡನೆಯಾತ್ಮೀಯ ಭಾವದಿ
ಜನಿತ ಶಿಶುಗಳು ಆಡುತಿರ್ದುದ
ಜನನಿ ಕಂಡಾಕ್ಷಣವೆಯುದರ ನಿಜಸ್ವಭಾವವದು ೬

ತೊಲಗಿ ಗುಂಪಾಡಿಸುತೆ ಬಾಲವ
ಹುಲಿಯು ಇಲಿಯಂತಾಗಿ ನಮ್ರದಿ
ನೆಲವ ಪಂಜರದಿಂದ ಕೆದರುತಲೊಲ್ಮೆದೋರಿಪುದು
ಮಲೆತು ಅಬ್ಬರಿಸುತ್ತ ಧಾವಿಪ
ಬಲವು ಗಡ ತಾನೆತ್ತ ಪೋಯಿತೊ !
ಸಲಿಗೆಯಿಂ ಶಿವಯೋಗಿಗಾನತವಾಗಿ ನಿಂದಿಹುದು ೭

ಪಿಡಿದು ಮರಿಗಳ ಹುಲಿಯ ಮೊಲೆಯಂ
ಕುಡಿಸಿದನು ಶಿವಯೋಗಿ ಸೊಗದಿಂ
ಕಡುಮುದದಿ ಪಾಲ್ದೊರೆದಿಹುದು ಮರಿಗಳ್ಗೆ ಹುಲಿದಾಯಿ
ನಡೆವುದೇನೀ ರೀತಿ ಜಗದೊಳು ?
ನಡೆಸಿ ತೋರ್ದರು ಜಂಗಮಾರ್ಯರು
ಪೊಡವಿಯೊಳಗಣ ಸರ್ವಪ್ರಾಣಿಗೆ ಲೇಸ ಬಯಸುವರು ೮

ಹುಲಿಯ ಬೆನ್ನೊಳು ಕೈಯನಾಡಿಸಿ
ತಲೆಯಮೇಲ್ ಕೈಯಿಟ್ಟು ಪ್ರೇಮದಿ
ಸಲೆ ಪಿತೃಸ್ನೇಹವನು ಯತಿ ತೋರಿಸಲು ಹುಲಿದಾಯಿ
ಒಲಿದು ನಿಮ್ಮಯ ಮಗಳು ನಾನೆಂ-
ದುಲಿಯಲಾರದೆ ಮೂಕ ಭಾವವ
ತಲೆಯ ತೂಗುತೆ ತನ್ನ ಮುಖಭಂಗಿಯಲಿ ತೋರಿಹುದು ೯

ಹರಸಿ ಹುಲಿಯನ್ನದರ ಮರಿಗಳ
ಹರುಷದಿಂ ಖರ್ಜೂರವೀಯುತೆ
ವರಭಸಿತಮಂ ತೊಡೆದು ಅವುಗಳ ಹಣೆಗೆ ಮುದದಿಂದ
ತೆರಳುವೆನು ನಾನಿನ್ನು ಮಗಳೇ
ಹರನು ನಿಮ್ಮಂ ಸಲಹಲೆಂದಾ
ಚರವರೇಣ್ಯನು ಕ್ಷಿಪ್ರದಿಂದಾ ಗವಿಯ ತೊರೆದಿಹನು ೧೦

ತುಂದೆಯಗಲಿದ ಮಗಳು ಮನದಲಿ
ನೊಂದು ಕಂಬನಿ ಸುರಿಸುವಂದದಿ
ನಿಂದಿಹುದು ಕಣ್ಣೀರ ಕರೆಯುತಲಲ್ಲಿ ಹುಲಿದಾಯಿ
ಕಂದಗಳು ನಿಜಮಾತೆಯಳುವುದ-
ನಂದರಿದು ತಾವಜ್ಞನಗಲಿಕೆ-
ಯಿಂದೆ ಬಳಲುತೆ ಮೋರೆ ಸಪ್ಪಗೆ ಮಾಡಿ ನಿಂದಿಹವು ೧೧

ಒಂದೆ ಮುನಿಜನರಿರ್ದ ತಾಣದೊ-
ಳೊಂದಿ ಹುಲಿ ಹುಲ್ಲೆಗಳು ಸ್ನೇಹದಿ
ನಂದದಿಂ ಕರಿ ಸಿಂಹ ಶಿಖಿ ಸರ್ಪಂಗಳೊಂದೆಡೆಯೋಳ್
ನಿಂದು ನೆಮ್ಮದಿಯಿಂದ ಬಾಳ್ವುದ-
ನೆಂದಿಗೂ ನಾವ್ ಕೇಳಿ ಬಲ್ಲೆವು
ಇಂದು ಯೋಗಿಯ ನೆರೆಯೊಳಾ ಪುಲಿ ಸೌಮ್ಯವಾಗಿಹುದು ೧೨

ಕರವರರು ಬಂದಿಳಿದ ತಾಣಕೆ
ಕರೆಪರೇತಕೆ ರೇಣುಕಾಪ್ರಿಯ
ಸರಸನಾಮದಿ ಜನರುಯೆಂಬೀ ವಿಷಯೆವರುಹಲ್ಕೆ
ಒರೆದಿಹೆನು ರೇಣುಕೆಯ ಕತೆಯಂ
ಹರುಷದಿಂದಾಲಿಪುದು ಜನತತಿ
ಗುರುವರೇಣ್ಯರು ತೋರಿದರು ಮಹಿಮೆಯನು ತಾವಲ್ಲಿ ೧೩

ಪರಮಋಷಿ ಜಮದಗ್ನಿಯೆಂಬವ-
ನಿರುತಿಹನು ಜಪತಪದೊಳಿಲ್ಲಿಯ
ಉರು ತಪೋವನದೋಳ್ ಪ್ರಶಾಂತತೆಯಿಂದೆ ಕೆಲವರ್ಷ
ಪರೆಯುವಯ ಕುಡಿಮೀಸೆ ಬಹು ಸುಂ-
ದರವದನ ನಗೆಮೊಗವು ನಿಡುಜಡೆ
ಕೆಲದಿ ಜಪಮಂ ಯೋಗದಂದದಿ ಶೋಭಿಸುತ್ತಿಹನು ೧೪

ಒಂದು ದಿನ ಮೀಯಲ್ಕೆ ಕೊಳದಡಿ-
ಯೊಂದಿರಲು ಜಮದಗ್ನಿಯಾ ದಿನ
ಬಂದಳಲ್ಲಿಗೆ ಕೊಡವ ತುಂಬಲ್ಕೋರ್ವ ರಾಜಸುತೆ
ನಿಂದು ನೋಡಿದಳಿವನ ಚೆಲುವಂ
ಕುಂದರದನೆಯು ಸುಂದರಾಂಗನೆ
ಮಂದಗಮನೆಯು ಸೊಕ್ಕು ಜವ್ವನೆ ಮೋಹ ಪಾಶದೊಳು ೧೫

ಬಿದ್ದಳಾತನ ಮುದ್ದು ಮೊಗವಂ
ಕದ್ದು ನೋಡುತೆ ಹೃದಯ ಕಂಪಿಸೆ
ಹೊದ್ದ ಬಟ್ಟೆಯು ಜಾರೆ ಕುಚಗಳ್ ತೋರೆ ನಾಚಿಕೆಯು
ಮುದ್ದು ಮೊಗದೋಳ್ತೀವಿ ಕೈಕಾಲ್
ಗದ್ಗದನೆ ನಡಗುತ್ತೆ ನಿಂದಳು
ಸದ್ದು ಮಾಡದೆ ಕಾಮಪರವಶಳಾಗಿಯಾ ಲಲನೆ ೧೬

ನೋಡಿದನು ಇವಳಿರವ ಋಷಿವರ
ತಾಡಿತನು ಮನ್ಮಥನ ಬಾಣದಿ
ಏಡಿಸುತೆ ನುಡಿದಿರ್ದನಾಕೆಗೆ ಬಾಹ್ಯದೀ ನುಡಿಯ
ಬೇಡ ಬೇಡೆಲೆ ಕಾಂತೆ ನಮ್ಮಯ
ಕಾಡು ಜೀವನ ನಿನಗೆ ತಕ್ಕುದೆ ,
ನಾಡೆ ನೋಡೆಲೆ ನೀನು ರಾಜಕುಮಾರಿಯಾಗಿರುವೆ ೧೭

ಆರು ನೀನೆಲೆ ವೀರರಮಣಿಯೆ
ನೀರನೊಯ್ಯಲ್ಕೀ ಸರಕೆ ವೈ
ಯಾರದಿಂ ಬಂದಿರ್ಪೆ ಕುಡಿನೋಟವನು ಬೀರುತಲಿ
ಸಾರಜವ್ವನ ಸೊಕ್ಕು ಮೈಯೊಳು
ಸೂರೆಗೊಂಡಿರೆ ನನ್ನನೇತಕೆ
ಮಾರಪಾಶದಿ ನಿರ್ನೆರಂ ನೂಕುತಿಹೆ ಕಮಲಾಕ್ಷಿ ೧೮

ನಾನು ಸಲೆ ಶ್ರುತಕೀರ್ತಿವರ್ಮನ
ಸಾನುರಾಗದ ಕುವರಿ ಮುನಿವರ
ನೀನೆನಗೆ ಪತಿಯಾಗು ನಾ ಸತಿಯಾಗಿ ರಾಜಿಸುವೆ
ಏನು ದೈವದ ಘಟನೆಯಿದ್ದಿತೊ !
ನೀನು ನಾನಿಬ್ಬರ ಸುಯೋಗವು
ಕಾನನದ ಜಲದೇವಿ ಸಾಕ್ಷಿಯೊಳಿಲ್ಲಿ ಜರಗಿಹುದು ೧೯

ಸೋಜಿಗವು ನೋಡರಸುಗುವರಿಯು
ಓಜೆಗೆಟ್ಟಾರಣ್ಯವಾಸಿಯು
ಈ ಜಟಾಜೂಟಕ್ಕೆ ಮೋಹಿಸಿ ಕುಂದನಪ್ಪುವರೆ ?
ನೀ ಜಗನ್ಮೋಹಿನಿ ವಿಲಾಸಿನಿ
ನಾ ಜಪದ ಸನ್ಯಾಸಿ ಮಾನಿಸಿ
ಮೂಜಗವು ನಗದಿಹುದೆ ನಿನ್ನ ಮನೋರಥವನರಿದು ೨೦

ಕೇಳಿ ತಾ ಜಮದಗ್ನಿನುಡಿದುದ
ತಾಳಲಾರದೆ ಮದನ ಬಾಧೆಯು
ಪೇಳಿದಳು ಮುನಿಪರಗೆ ಲಜ್ಜಾಭೀತಿಯಂ ತೊರೆದು
ಕೇಳು ನನ್ನಯ ಮಾತ ಮುನಿವರ
ತಾಳಲಾರೆನು ಕಾಮತಾಪವ
ಬಾಳುವೆನು ನಿನ್ನೊಡನೆ ನಾ ಸತಿಯಾಗಿ ಯತಿವರ್ಯ ೨೧

ಅರಮನೆಯ ಸುಖ ಬೇಡ ಯತಿವರ
ತೊರೆವೆ ವಸ್ತ್ರಾಭರಣಗಳ ನಾಂ
ಚರಿಪೆ ನಿನ್ನೊಡನಡವಿಯೋಳ್ವಾಸಿಪೆ ಕುಟೀರದಲಿ
ನಿರುತ ನಿನ್ನಯ ನೆರಳಿನಂದದಿ
ಮರೆಯದಾನನುಸರಿಪೆ ಋಷಿವರ
ಕರುಣಿಸೆನ್ನಯ ಬಿನ್ನಪಂಗ ಸೆರಗೊಡ್ಡಿ ಬೇಡುವೆನು ೨೨

ಪಿಡಿಯೊ ನನ್ನಯ ಕರವ ಮುನಿವರ
ಪಡೆವೆ ನಾ ಗಾಂಧರ್ವಲಗ್ನವ
ಮಡದಿ ನಾನಾಗಿರುವೆ ಋಷಿಪತ್ನಿಯರ ಸಂಗದಲಿ
ಮೃಡನು ನಮ್ಮಿರ್ವರಿಗೆ ಯತಿವರ
ಕಡು ಸೊಗವ ತಾನಿತ್ತು ಸಲಹಲಿ
ನಡೆಸಿಕೊಡು ನನ್ನೀ ಮನೋರಥವನ್ನು ಕರುಣಾಬ್ಧೇ ೨೨

ನನಗೆ ರೇಣುಕೆಯೆಂದು ಕರೆವರು
ಜನನದಿಂ ನಾಂ ಕ್ಷತ್ರಿಯಳು ನಿಜ
ಮುನಿವರನೆ ನೀಂ ಬ್ರಾಹ್ಮಣೋತ್ತಮನೆಂಬುದಂ ಬಲ್ಲೆ
ಮುನಿಕುಮಾರಕರೆಷ್ಟೊ ಹಿಂದಕೆ
ಮನಸಿನಿಂ ಕ್ಷತ್ರಿಯ ಕುಮಾರಿಯ-
ರೊಗೆತನವ ಮಾಡಿರ್ಪರೆಂಬುದ ಕೇಳಿ ನಾ ಬಲ್ಲೆ ೨೪

ಇದನು ಕೇಳ್ದಾ ಘನ ಮುನೀಂದ್ರನು
ಮುದದೊಳಾ ರೇಣುಕೆಗೆ ಪೇಳ್ದನು
ಹೃದಯಮಂ ನೀನೆನಗೆ ಮಾನಿನಿ ಸಲ್ಲಿಸಿದೆ ದಿಟವು
ಅದರಿನಾಂ ಬಹು ತುಷ್ಟನಾದೆನು
ಬಿದಿಯು ನಮ್ಮಿರ್ವರ ಸುಯೋಗವ-
ನೊದಗಿಸಿರ್ಪುದು ನಿಜವು ರೇಣುಕೆ ಪೇಳ್ವೆ ನೀ ಕೇಳು ೨೫

ರಾಜಸುತೆಯರು ಚಂಚಲೆಯರತಿ
ರಾಜಸೀ ಗುಣದವರುಯೆಂಬುದ-
ನೀ ಜಗದ ಜನವಾಡಿಕೊಳುತಿದೆ ಕೇಳಿ ನಾ ಬಲ್ಲೆ
ಮಾಜಲೇಂ ಮನದನ್ನೆ ನಾನದ
ಸಾಜ ಸತಿಧರ್ಮಕ್ಕೆ ಕುಂದನು
ರಾಜಕುವರಿಯೆ ನೀನು ತಂದೊಡೆ ಜೀವವೆರವಕ್ಕು ೨೬

ಕೊಡುವೆ ನಿನಗೊಂದಾನು ಮಳಲಿನ
ಕೊಡವ ಜಲವುಂ ತುಂಬಿಯುದರೊಳು
ದೃಢಮನದಿ ಕೋಳದಿಂ ಕುಟೀರಕೆ ನಿತ್ಯ ತರಬೇಕು
ನಡೆಯು ತಪ್ಪಲು ಕೊಡವು ಒಡೆವುದು
ದಿಡದಿ ರುಂಡವು ಉರುಳಿ ಬೀಳ್ವುದು
ಮಡದಿ ನೀನೆನಗಪ್ಪೊಡೀ ವ್ರತವನ್ನು ಪಾಲಿಪುದು ೨೭

ತನು ಮನೋಭಾವದಲಿ ರೇಣುಕೆ
ಅನುಸಯದಿ ಪರಿಶುದ್ಧಳಪ್ಪೊಡೆ
ನಿನಗೆ ನಾ ಪತಿಯಾಗುವೆನು ನೆರೆ ನಂಬು ಮದಿರಾಕ್ಷಿ
ಎನಲು ಮೈನಡುಗಿರ್ದುದಾಕೆಯ
ವನಿತೆ ತಾನವನನ್ನು ಬಿಡದಿಹ
ಮನಸು ಕರಿಗೊಂಡಿರಲು ತಾನೊಪ್ಪಿದಳು ಹರಿಣಾಕ್ಷಿ ೨೮

ಪರಮಋಷಿ ಜಮದಗ್ನಿ ರೇಣುಕೆ-
ಯರ ವಿವಾಹವು ಪರ್ಣಕುಟಿಯಲಿ
ಜರುಗಿಹುದು ಗಾಂಧರ್ವವಿಧಿಯಿಂದಗ್ನಿಸಾಕ್ಷಿಯಲಿ
ಸರಸದಿಂ ಸುಖಭೋಗಹೊಂದುತ
ಹರುಷದಿಂ ನಲಿದಾಡುತೀರ್ವರು
ಹರೆಯ ಹೌಸನು ರತಿಸುಖದೊಳೋಲಾಡಿ ತಣಿಸಿದರು ೨೯

ಮೂರು ಮಕ್ಕಳು ಜನಿಸಲವರಿಗೆ
ತೀರ ಚಿಕ್ಕವ ಪರಶುರಾಮನು
ಶೂರ ಧೀರನು ಕೊಬ್ಬಿದಾ ಕ್ಷತ್ರಿಯರ ಹತಿಸಿದನು
ವೀರಮಾತಾ ರೇಣುಕೆಗೆ ತಾ
ಭೂರಿ ಪ್ರೇಮಾಸ್ಪದನು ಸದ್ಗುಣಿ
ಮೀರಿ ಶ್ರದ್ಧೆಯೊಳಾತ್ಮಪಿತನಾಜ್ಞೆಯನು ಪಾಲಿಪನು ೩೦

ಎಂದಿನಂದದೊಳೊಂದು ದಿನ ತಾ-
ನಿಂದುವದನೆಯು ರೇಣುಕೆಯು ಸಲೆ
ಮಂದಗಮನದಿ ಮಳಲ ಕೊಡಮಂ ಪೊತ್ತು ಕೊಳದೆಡೆಗೆ
ಬಂದಿರಲು ಸರದಲ್ಲಿಯೋರ್ವನು
ಸುಂದರಾಂಗನು ಕಾಮಿನಿಯರೊಡ-
ನುದು ಗಂಧರ್ವನು ಜಲ ಕ್ರೀಡೆಯೊಳು ರತನಾಗೆ ೩೧

ನಿಂದು ನೋಡಿದಳದನು ರೇಣುಕೆ-
ಯೊಂದಿತಾಕೆಯ ಮನದೊಳಾಸೆಯು
ನಂದದಿಂದೀ ಕ್ರೀಡೆಯೊಳು ನಾ ರಮಿಸದಿರಲೇಕೆ
ಎಂದು ಆಶಾಹುಳವದಂಟಲು
ಕುಂದರದನೆಯು ಬೆದರಿ ಸುಮ್ಮನೆ
ತಂದ ಕೊಡಮಂ ಪೊತ್ತುನಡೆದಿರಲೊಡೆಯಿತಾ ಕೊಡವು ೩೨

ಎದೆಯು ದಡದಡ ಹಾರುತಿರ್ಪುದು
ಗದಗದನೆ ಕಾಲ್ ನಡುಗುತಿರ್ದವು
ಮದದ ಮೈಸಿರಿ ಕಂದಿಹುದು ಮೊಗಕಾಂತಿ ಕುಂದಿಹುದು
ಬದಿಯ ಕುಟಿಯೊಳಗಿರ್ದ ಋಷಿವರ-
ನೆದೆಯೊಳೊಡಮೂಡಿಹುದು ಸಂಶಯ
ಬಿದಿಯ ಲಿಖಿತವನಾರು ತಪ್ಪಿಸುವವರು ಜಗದಲ್ಲಿ? ೩೩

ಒಡೆದ ಕೊಡಮಂ ಪೊತ್ತು ತನ್ನೆಡೆ
ನಡೆತರುವ ಮಡದಿಯನು ನೋಡುತ
ಸಿಡಿಮಿಡಿಯಗೊಂಡಾ ಸತಿಗೆ ನುಡಿದಿರ್ದನಾ ಋಷಿಯು
ಬೆಡಸುಗಾರ್ತಿಯೆ ದುಷ್ಟೆ ದುರ್ಮುಖಿ
ನಡತೆ ಹೀನಳೆ ನಾಚಿಕಿಲ್ಲವೆ ?
ಕಡೆಗೆ ನಿನ್ನ ವ್ರತಕ್ಕೆ ಭಂಗವ ತಂದೆಯಾ ನೀಚೆ ೩೪

ನಿನ್ನ ಗುಣಮಂ ನಾನು ರೇಣುಕೆ
ಮುನ್ನವೇ ಅರಿತಿರ್ದೆನಾದೊಡು
ನಿನ್ನ ನೆಮ್ಮದಿಗಾಂ ವಿವಾಹಿತನಾದೆ ನಿನ್ನೊಡನೆ
ಗನ್ನಗತಕಳೆ ಪಾಪಿ ನೀಚಳೆ
ನಿನ್ನ ಮನಚಾಂಚಲ್ಯಮಂ ನಾ-
ನಿನ್ನು ತಿಳಿಯೆನೆ ? ಜ್ಞಾನದೃಷ್ಟಿಯು ನನ್ನೊಳಿರುತಿರಲು ೩೫

ಕೊನೆಯ ಬಯಕೆಯದೇನಿಹುದು ಪೇಳ್
ನಿನಗೆ ಸಲ್ವುದು ದೇಹದಂಡನೆ
ನನಗೆ ನಿನ್ನಯ ವರ್ತನೆಯು ಎಳ್ಳಷ್ಟು ಸರಿಬರದು
ಎನಲು ಪೇಳ್ದಳು ಸತಿಯು ರೇಣುಕೆ
ನನಗೆ ಬೇರೊಂದಿಲ್ಲ ಬಯಕೆಯು
ಮುನಿವರನ ಪದತಲದಿ ಸಾಯುವುದೊಂದೆ ನನ್ನಿಚ್ಛೆ ೩೬

ಕೊರಳ ಕತ್ತರಿಸೆಂದು ಮಾತೆಯ
ಹಿರಿಯ ಮಗನಿಗೆ ಬೆಸಸಲಾ ಯತಿ
ಕರಳು ಚುರು ಚುರು ಎನ್ನಲಾತನು ಒಪ್ಪದಿರಲಾಗಿ
ಎರಡನೆಯ ಪುತ್ರಂಗೆಯಾಜ್ಞೆಯ-
ನೊರೆಯಲಾತನು ನನ್ನ ಮಾತೆಯು
ಮರೆದು ಮಾಡಿದ ತಪ್ಪ ನೀ ಕ್ಷಮಿಸೆಂದು ಬೇಡಿದನು ೩೭

ಪರಶುರಾಮನಿಗಾಗ ಯತಿವರ-
ನೊರೆಯಲಾಜ್ಞೆಯನಾ ಕ್ಷಣವೆ ತಾ
ಕರದಿ ಕೊಡಲಿಯ ಪಿಡಿದು ಮಾತೆಯ ಶಿರವ ಹಾರಿಸಿದ
ಹರುಷ ಹೊಂದಿದನಾ ಮುನೀಶ್ವರ
ತರಳ ನೀನೇ ಸತ್ಯಸಂಧನು
ವರವ ನೀ ಬೇಡೊಂದೆನಗೆ ನಾನೀವೆನೀಕ್ಷಣದಿ ೩೮

ಎಂದೆನಲು ಸಲೆ ಪರಶುರಾಮನು
ತಂದೆಯಡಿದಾವರೆಗೆ ವಂದಿಸಿ
ತಂದೆ ನಾ ಕಡು ಪಾಪಿ ಸೋಪಾ ಮಾತೃವಧೆಗೈದೆ
ಇಂದಿನೆನ್ನಯ ಪಾಪ ನಶಿಸಲು
ಚೆಂದದಿಂದೆನ್ನವ್ವ ರೇಣುಕೆ-
ಯಿಂದೆ ಬದುಕಲಿ ಸಾಕು ನಾನೀ ವರವ ಬೇಡುವೆನು ೩೯

ಮಗನ ಮಾತಿಗೆ ತುಷ್ಟನಾದನು
ನಗೆ ಮೊಗದಿ ತಾ ಪೇಳ್ದನಾತಗೆ
ಸುಗುಣಮಣಿ ಕರುಣಾ ಹೃದಯ ಸುಕುಮಾರ ನೀನಿರುವೆ
ಬಗೆಯದೆನ್ನಾಜ್ಞೆಯನು ತಕ್ಷಣ
ಮಗನೆ ನೀ ಪಾಲಿಸಿದೆ ಧನ್ಯನು
ಮಗಳ್ದು ಜೀವಿಸಲಯ್ಯ ನಿನ್ನಯ ಮಾತೆ ನೋಡೆಂದು ೪೦

ಯೋಗ ದಂಡವನವಳ ದೇಹಕೆ
ಬೇಗದಿಂ ಮುಟ್ಟಿಸುತೆ ಮಂತ್ರವ-
ನಾಗ ಋಷಿವರನುಚ್ಚರಿಸೆ ಗಡ ಜೀವ ಕಳೆದುಂಬಿ
ಬಾಗಿ ನಿಂದಳು ಸತಿಶಿರೋಮಣಿ
ಯೋಗಿಯಾ ಮುಂದೊಂದನಾಡದೆ
ಭೋಗಿಸಲು ಬೇಕಾಗಬಾರವ ಕರ್ಮಫಲವನ್ನು ೪೧

ಎಂದು ಯತಿ ನುಡಿದಿರಲು ರೇಣುಕೆ-
ಗಂದು ಸಂದಿತು ಕುಷ್ಟರೋಗವು
ಮುಂದಭಾಗ್ಯಳ ಕಾಲು ಕೈ ಬೆರಳ್ಮೊಂಡವಾಗಿಹವು
ಬಂದು ಕೀವವು ರಸಿಗೆ ಮೆಣ್ದು-
ರ್ಗಂಧ ವಿಡಿದಿರೆ ಪೇಳ್ದನಾ ಯತಿ
ಇಂದಿನಿಂದಿರಬೇಡ ರೇಣುಕೆ ನೀ ಕುಟೀರದಲಿ ೪೨

ಹೊರ ಹೊರಡು ಬೇರೆಡೆಗೆಪಾಪಿಯೆ
ಮರುಕ ಬಾರದು ನನಗೆ ನಿನ್ನೊಳು
ಬರಿದೆ ನಿಷ್ಠುರನೆಂದು ನನ್ನಂ ತೆಗಳಬೇಡಬಲೆ
ವರಯತಿಯ ನುಡಿಗೇಳಿಯಾಕೆಯು
ಸರಿದು ದೂರಿಂ ನಮಿಸಿ ಪಾದಕೆ
ಹೊರಳಿ ನೋಡದೆಯೊಂದನಾಡದೆ ಮುಂದೆ ನಡೆದಿಹಳು ೪೩

ವನವನವ ನದಿ ಕೊಳ್ಳಗಿರಿ ನಿ-
ರ್ಜನ ಪ್ರದೇಶಗಳಲ್ಲಿ ಚರಿಸುತೆ
ಕೊನೆಗೆ ಏಳ್ಕೊಳ್ಳಗಳು ಕೂಡಿರ್ದದ್ರಿಗೈದಿಹಳು
ಮುನಿಯು ಓರ್ವನು ಏಕ ಲಿಂಗನು-
ಯೆನಿಪನಲ್ಲಿಯೆ ತಪವ ಗೈಯುತ
ಘನತರದ ಶಾಂತಿಯಲಿ ಗುಹೆಯೊಳು ವಾಸಿಸುತ್ತಿಹನು ೪೪

ಏಕಲಿಂಗಯ್ಯೆಂಬ ಜೋಗಿಯ-
ನಾಕೆ ರೇಣುಕೆ ಕಂಡು ಸಹಜದಿ
ಏಕ ಮನದಿಂ ಬಂದು ಪಾದಕೆ ಬಿದ್ದು ಬೇಡಿದಳು
ಸಾಕು ಸಾಕೀ ಜನ್ಮ ತಂದೆಯೆ
ಏಕೆ ನಾಂ ಪುಟ್ಟಿದೆನೊ ಶಿವ ! ಶಿವ !
ಏಕೆ ಋಷಿ ಜಮದಗ್ನಿಯಾ ಕರವಿಡಿದು ಬಾಳಿದೆನೋ ೪೫

ನನ್ನ ಸಂಶಯಗೊಂಡು ಕೊಲ್ಲಿಸಿ
ನನ್ನ ಪುನರಪಿ ಬದುಕಿಸಿರ್ದನು
ನನ್ನ ಪಾಲಿಗೆ ಕುಷ್ಟ ರೋಗದ ಶಾಪವಿತ್ತಿಹನು
ತನ್ನ ಪರ್ಣಕುಟೀರದಿಂ ಗಡ
ನನ್ನ ಹೊರ ಹೊರಡಿಸಿದನಯ್ಯೋ !
ಇನ್ನು ನಾನೇಂ ಗೈವೆ ತಂದೆಯ ಸನ್ನಿಧಿಗೆ ಬಂದೆ ೪೬

ಎಂದೆನಲು ಏಕಯ್ಯ ಜೋಗಿಯು
ಮುಂದ ಭಾಗಿನಿಗಿಂತು ಪೇಳ್ದನು
ತಂದೆ ನೀನೆಂದೆನ್ನ ನಂಬಿದೆ ನನ್ನ ಕಂದಮ್ಮಾ
ಹಿಂದೆಯಾದುದ ಮರೆತು ಬಿಡು ನೀ–
ನಿಂದು ಚಿಂತಿಸಬೇಡ ಮಗಳೇ
ಮುಂದೆ ನಿನ್ನಯ ಭಾಗ್ಯವುಜ್ವಲಮಕ್ಕು ಶಿವ ಕೃಪೆಯಿಂ ೪೭

ನಂಬಿ ಬಂದವರನ್ನು ಪ್ರೇಮದೊ-
ಳಿಂಬುಗೊಟ್ಟಾಂ ಸಲಹಲಾರೆನೆ?
ಶಂಭುವಿನ ಕೃಪೆ ನಿನಗೆಯಾಗುವುದಪ್ಪ ನಿಶ್ಚಯವು
ನಂಬು ನೀನೀ ನುಡಿಯ ಮಗಳೇ
ಹಂಬಲವ ಬಿಡು ಪತಿಸುತರ್ಕಳ
ಶಾಂಭವಿಯು ನೀನಾಗಿ ಮೆರೆಯುವೆಯಮ್ಮ ಶೀಘ್ರದಲಿ ೪೮

ನಿನಗೆ ಶಿವಮಂತ್ರವನು ಪೇಳುವೆ
ನೆನೆ ಮಗಳೆ ಪ್ರತಿ ನಿತ್ಯ ತಪ್ಪದೆ
ತನು ಮನೋ ಭಾವಗಳು ಪರಿಶುದ್ಧತೆಯ ಪೊಂದುವವು
ಓಂ ನಮ ಶ್ಶಿವಯೆಂಬ ಮಂತ್ರವ
ಮನದೊಳಿಡೆವಿಡದುಚ್ಚರಿಸೆ ನೀಂ
ವನಜಮುಖಿ ನಿನಗಾ ಶಿವನು ಪ್ರತ್ಯಕ್ಷನಾಗುವನು ೪೯

ತಂದೆಯಾಡಿದ ಮಾತನಾಲಿಸಿ
ನಂದನೆಯು ವಂದಿಸುತೆ ಪಾದಕೆ
ಅಂದಿನಿಂ ಶಿವಮಂತ್ರಮಂ ಜಪಿಸಲ್ಕೆ ಹತ್ತಿದಳು
ಹಿಂದೆಯಾದುದು ಮರೆತು ಹೋಯಿತು
ಮುಂದಿನಾ ಚಿಂತೆಯದು ತೊಲಗಿತು
ಇಂದು ಪದ್ಮಾಸನದಿ ಕುಳಿತಾ ಮಂತ್ರ ಜಪಿಸುವಳು ೫೦

ಕೆಲವು ದಿನ ಜಪಗೈಯುತಿರಲಾ
ಲಲನೆಯುತಿನಿಷ್ಠೆಯಲಿ ಶಂಭುವು
ಒಲಿದನಾ ದೃಢಭಕ್ತಿಗಾಕೆಯ ಮುಂದೆ ತಾ ಬಂದು
ತಲೆಯ ಜಡೆಯೊಳು ಗಂಗೆ ಶಶಿಕಲೆ
ಬಲದ ಕೈಯೊಳು ತಿಸುಳಿ ಮೈಯೊಳು
ಪುಲಿದೊಗಲು ಸರ್ಪಾಭರಣದಿಂದೆಸೆದನರ್ತಿಯಲಿ ೫೧

ನೋಡಿದಳು ಕಣ್ದೆರೆದು ಶಿವನಂ
ನಾಡೆ ಸಾಷ್ಟಾಂಗವನು ಗೈದಳು
ಬೇಡಿಕೊಂಡಳು ಕರುಣೆಯಂ ನೀಡೆಂದು ಪರಶಿವಗೆ
ಬಾಡಿ ಹೋದವು ವ್ರಣಗಳೆಲ್ಲವು
ಸೋಡೆ ಮೊಗಸಿರಿ ಪೆರ್ಚಿಹುದು ಮೇ-
ಣೋಡಿ ಹೋದುದು ಋಷಿಯ ಶಾಪವು ಮುಕ್ತಳಾಗಿಹಳು ೫೨

ಶಿವನು ಪೇಳಿದನಾಗಳಾಕೆಗೆ
ತವ ಯಶೋದುಂದುಭಿಯು ರೇಣುಕೆ
ಭುವನದೊಳೆಲ್ಲಮ್ಮ ನಾಮದಿ ಮೊಳಗುವದು ನೋಡಾ
ಜವದಿ ನಿನ್ನಯ ಜಾತ್ರೆಯನುದಿನ
ನವನವೋತ್ಸಾಹದೊಳು ಜರಗುವ-
ದವಿರತಂ ತವ ಕೀರ್ತಿಚಂದ್ರಮ ಬೆಳಗುತಿರ್ದಪನು ೫೩

ಅಂಟಿಸಿಂ ರೇಣುಕೆಯ ಮೂರ್ತಿಯು
ನಿಂದುದೇಳ್ಕೊಳ್ಳಗಳ ಮಧ್ಯದಿ
ಚಂದವಾದೊಂದಾಲಯವ ಕಟ್ಟಿದರು ಮೂರುತಿಗೆ
ಬಂದವರು ಏಳ್ಕೊಳ್ಳದೆಲ್ಲಮ
ನೆಂದುಘೋಷ ಘೋಷವೆಂದು ಘೋಷಿಸು-
ತಿಂದಿಗೂ ಸಾಗಿಹರು ದೇವತೆಯಾದಳಾ ಸಾಧ್ವಿ ೫೪

ಸೂಳೆಯರು ಕೊಜ್ಜೆಯರು ಮುಗ್ಧರು
ಕೀಳು ಕುಲದವರಿತರ ಭಕ್ತರು
ಬಾಳ್ವೆಹೀನರು ದೇವದಾಸಿಯರಲ್ಲಿ ಬರುತಿಹರು
ಮೇಳದಾ ಜೋಗವ್ಮುಗಳು ಕೊಡ
ಗಳನು ಹಡಲಿಗೆಗಳನು ಹೊತ್ತುರೆ
ತಾಳ ಟಮುಕಿ ಪದಂಗಳೊಂದಿಗೆ ಕುಣಿಯುತಿರ್ದಪರು ೫೫

ಮುಂದೆ ಸಾಗಿರಲೊಂದು ವರ್ಷಂ
ಬಂದಿಹುದು ಬರಗಾಲ ನಾಡಿಗೆ
ಸಂದ ಕೆರೆ ಹೊಳೆ ಹಳ್ಳಗಳು ಬತ್ತಿದವು ನೋಡಕಟಾ!
ಒಂದು ಹನಿ ನೀರಿಲ್ಲದಲೆ ಜನ
ಬೆಂದು ಬೆಂಡಾಗಿಹುದು ದನಗಳು
ನೊಂದು ಬಳಲುತ್ತಿರ್ದಪವು ನೀರಿನ ತುಟಾಗ್ರತೆಯಿಂ ೫೬

ಎಲ್ಲಮನ ಜಾತ್ರೆಯೊಳಗೆಲ್ಲರು
ಎಲ್ಲೆಡೆಯ ಚರಿಸುತ್ತೆ ನೀರಿಗೆ
ಮೆಲ್ಲ ಮೆಲ್ಲನುಧೋಉಧೋಎನ್ನುತ್ತ ಸಾಗಿದರು
ಎಲ್ಲಮನು ಕಿವುಡಾದಳೇನೋ !
ಕಲ್ಲೆದೆಯು ತಾ ಕರಗದೇತಕೊ !
ನಿಲ್ಲರೈವೊಂದೆಡೆಗೆ ಗಂಟಲವೊಣಗಿ ಬಾಯಾರಿ ೫೭

ದಾರಿ ದಾರಿಗೆ ಬಿದ್ದುಕೊಂಡರು
ನೀರು ಕುಡಿದರು ಕೊಳಚಿಯೊಳು ಹಾಯ್ !
ಮಾರಿ ಬೇನೆಯು ಬಂದು ಹಲವರು ಸತ್ತುಹೋಗಿಹರು
ಯಾರು ಮಾಡುವದೇನು ಶಿವ ! ಶಿವ !
ಭೂರಿ ಹಾಹಾಕಾರವೆದ್ದಿತು
ಕಾರಿರುಳು ಕವಿದಿತ್ತು ಭೀಕರವಾಗಿ ನಾಲ್ದೆಸೆಗೆ ೫೮

ಅನಿತರೊಳ್ಗಾ ಬಂದನಲ್ಲಿಗೆ
ಮುನಿವರಂ ಬೂದೀಶ ಯೋಗಿಯು
ಜನದ ಬವಣೆಯ ಕಂಡು ತಲ್ಲಣಗೊಂಡು ಚಿಂತಿಸಿದ
ಮುನಿದಳೇಂ ರೇಣುಕೆಯು ಪಾಪದ
ಜನಗಳಿಗೆ ಶಾಪವನು ಕೊಟ್ಟಳೊ !
ಅನುದಿನಂ ಯಾತ್ರಿಕರು ಬಕ ಬಕ ಬಾಯಿ ಬಿಡುತಿಹರು ೫೯

ಬಳಿಕ ಯಾತ್ರಿಕರಲ್ಲಿ ಕೆಲವರು
ಕುಳಿತ ಶ್ರೀ ಬೂದೀಶಯೋಗಿಯ
ಬಳಿಗೆ ಬಂದಾತಂಗೆ ಪೊಡಮಟ್ಟಿಂತು ಬೇಡಿದರು
ಮಳೆಯು ಬಾರದುದೇಕೆ ಯೋಗಿಯೆ
ಇಳೆಯು ಎಲ್ಲೆಡೆ ಬಾಯಿ ಬಿಡುತಿದೆ
ತೊಳಲುವವು ಜನದನಗಳೆಲ್ಲವು ಕಾಯೊ ನೀ ತಂದೆ ೬೦

ಪಾಪಿಗಳ್ ನಾವ್ ದಿಟವು ತಂದೆಯೆ
ಕೋಪಗೊಂಡಾ ಶಿವನು ಮಳೆಯಂ
ರೂಪಿಸದೆ ಸೆಳೆದಿರ್ದನಕ್ಕಟ ನಾವನಾಥರೆಲಾ
ಈ ಪರಿಸ್ಥಿತಿಯಲ್ಲಿ ರೇಣುಕೆ
ತಾಪ ಕೊಡುತಿಹಳೇಕೊ ತಿಳಿಯದು
ಮಾಪುರುಷ ನೀ ಸಲಹದಿರೆ ನಾವೆಂತು ಬದುಕುವೆವು ? ೬೧

ಶಿವನು ತಮ್ಮಂ ಕಳಿಸಿಕೊಟ್ಟನೊ
ಶಿವನು ನೀವೇಂ ನಾವು ಬಲ್ಲೆವೆ ?
ತವೆ ಜಲಾಭಾವದಲಿ ಬಹುಪರಿ ಬಳಲುವೆವು ನೋಡಾ
ಶಿವಶಿವಾ! ಶಂಕರ ಕೃಪಾಕರ !
ಭವಹರಾ ! ಜಯ ಜಯ ಮಹೇಶ್ವರ !
ತವಕದಿಂ ಮಳೆಯನ್ನು ಕೊಡು ನಮಗಿಂದು ಯೋಗಿವರ ೬೨

ಎಂದು ಹಲಬುತ್ತಿರಲು ಯೋಗಿಯು
ಬಂದ ಜನಕಭಯವನು ನೀಡುತ-
ಲೆಂದನಾಗ ಪರೇಶ ನಾಳಿಗೆ ಮಳೆಯ ಸುರಿಸುವನು
ಇಂದು ನೀವ್ ಚಿಂತಿಸಲು ಬೇಡಿರಿ
ಸಂದಿಹುದು ನಿಮ್ಮಳಲು ಶಿವನಿಗೆ
ತಂದು ಬಿಡುವನು ನಾಳೆ ಮಳೆಯನು ನೋಡಿರೆಂದೆನಲು ೬೩

ಮರುದಿನು ಕೊಳ್ಳದಲಿ ಸುರಿ ಮಳೆ
ಕರೆದಿರಲು ಎಲ್ಲಮನ ಭಕ್ತರು
ಹರುಷ ಮಿಗೆ ಕುಣಿದಾಡಿದರು ಶಿವಯೋಗಿಯಂ ಸ್ಮರಿಸಿ
ಜರಗಿಹುದು ಎಲ್ಲಮನ ಜಾತ್ರೆಯು
ಸರಸದಿಂದಾ ಸುತ್ತು ನಾಡಿನ
ಪುರುಷ ಸ್ತ್ರೀಯರು ಬಂದು ಯೋಗಿಗೆ ಭಕ್ತಿ ಸಲಿಸಿದರು ೬೪

ಎಲ್ಲಮನ ಗುಡ್ಡದ ಸಮೀಪದೊ-
ಳಲ್ಲಿ ಸಿದ್ಧೇಶ್ವರನ ಕೊಳ್ಳದಿ
ಬಲ್ಲಿದರು ಬೂದೀಶ್ವರರು ಸಲೆ ತಪದೊಳಿರ್ದಪರು
ಅಲ್ಲಿ ಶಿವರಾತ್ರಿಯನು ಕಳೆಯಲು
ಉಲ್ಲಸದಿ ಕೂಡಿಹರು ಭಕ್ತರು
ಮಲ್ಲಿಕಾರ್ಜುನಸ್ವಾಮಿಯಂ ಭಜಿಸುತ್ತ ಭಕ್ತಿಯಲಿ ೬೫

ಯೋಗಿಯಾ ಭಜನೆಯನು ಸಂತಸ-
ಮಾಗಿ ಕೇಳ್ದರೆ ಪೇಳ್ದನವರಿಗೆ
ಪೋಗುವಾ ನಡಿರಯ್ಯ ನಾವುಗಳೆಲ್ಲ ಶ್ರೀಗಿರಿಗೆ
ರಾಗದಿಂ ಮಲ್ಲೇಶದರ್ಶನ-
ವೀಗ ಪಡೆಯುವಿರಂತೆಯೆನ್ನಲು
ಯೋಗಿಮಾತಿಗೆ ನಕ್ಕುಬಿಟ್ಟಿತು ನೆರೆದ ಜನವೆಲ್ಲ ೬೬

ಎಲ್ಲಿ ಶ್ರೀ ಗಿರಿಯಿಲ್ಲಿಯಿಹುದರಿ ?
ಅಲ್ಲಿಗೀಗಳೆ ಪೋಪುದೆಂತುಟು ?
ಮಲ್ಲಿಕಾರ್ಜುನ ದರ್ಶನವು ನಮಗೆಂತು ಲಭಿಸೀತು ?
ಬಲ್ಲಿದರು ಚೇಷ್ಟೆಯನು ಮಾಳ್ಪರೆ ?
ಎಲ್ಲಮನಗುಡ್ಡದಲಿ ಶ್ರೀಗುರು
ಮಲ್ಲಿಕಾರ್ಜುನ ನೆಲಸಬಹುದೇ ತಿಳಿಯದೆಮಗಕಟಾ ! ೬೭

ಜನವು ತಾಳ್ದಚ್ಚರಿಯ ಮನದೊಳು
ಎನಿತೊ ದೂರಿಹ ಮಲ್ಲಿಕಾರ್ಜುನ-
ನಿನಿತು ಸನಿಹದಿ ಕಾಂಬನೇ ? ಶಿವಯೋಗಿ ಪುಸಿಯುವನೇ ?
ಎನುತೆ ನೋಡಲು ಮುಂದೆ ಹೊಳೆದುದು
ವಿನುತ ಶ್ರೀಗುರುಮಲ್ಲಿಕಾರ್ಜುನ-
ನನುಪಮದ ಮಂದಿರದಿ ಚಿನ್ಮಯಲಿಂಗ ಕಂಗಳಿಗೆ ೬೮

ಅಲ್ಲಿ ಯಾತ್ರಿಕರೆಲ್ಲ ಕೂಡಿಹ-
ರಲ್ಲಿ ಯಾತ್ರೆಯ ಸೊಬಗು ನಡೆದಿದೆ
ಮಲ್ಲಿಕಾರ್ಜುನಲಿಂಗಪೂಜೆಯು ಸಾಂಗವಾಗಿಹುದು
ಅಲ್ಲಿಹಳು ಭ್ರಮರಾಂಬೆ ಗುಡಿಯಲಿ
ಅಲ್ಲಿ ಸಿದ್ಧನಕೊಳ್ಳ ಕಾಂಬುದು
ಅಲ್ಲಿ ತೋರ್ಪುದು ಕದಳಿವನ ಪಾತಾಳ ಗಂಗೆಯದೊ ! ೬೯

ಎಂದು ನಿಬ್ಬೆರಗಾಗಿ ಜನಗಳು
ನಿಂದು ನೋಡಿದರೆಲ್ಲ ದೃಶ್ಯವ-
ನಂದು ರಾತ್ರಿಯೊಳಲ್ಲಿ ಕೊಳ್ಳದೊಳಲ್ಪನಿಮಿಷದಲಿ
ಕುಂದಿಹೋಯಿತು ಮಾಯೆಯಿಂದಾ-
ನಂದ ದೃಶ್ಯವು ಜನರು ಕೊಳ್ಳದ
ಮುಂದೆ ಮೊದಲಿನ ಹಾಗೆ ನಿಂದಿಪರೇನಿದಚ್ಚರಿಯು ! ೭೦

ಶಿವನ ಕೃಪೆವಡೆದಂಥ ಯೋಗಿಗೆ
ಶಿವನೆ ತಾನಾಗಿರ್ದ ಮಹಿಮಗೆ
ಭುವನದೊಳ್ ದುಸ್ಸಾಧ್ಯವೆಂಬುವದುಂಟೆ ಬೂದೀಶ
ಶಿವಕರುಣದೊಳಷ್ಟಸಿದ್ಧಿಗ-
ಳವಿರತಂ ತಾ ಪೊಂದಿ ಭಕ್ತರ
ಭವರುಜೆಯ ನೀಗುವನು ತಾನಾ ಸಿದ್ಧಿಗಳ ಬಲದಿ ೭೦

ಬಂದ ಜನ ಸಂದೋಹಕಾತನು
ನಂದದಿಂ ಮಲ್ಲೇಶದರ್ಶನ-
ದಿಂದ ಸದ್ಭಕ್ತಿಪ್ರಭಾವವ ಬೀರಿದನು ನೋಡಾ
ವಂದಿಸುತಲಾ ಯೋಗಿಪಾದಕೆ
ಬಂದ ಜನ ಸಂದೋಹ ಯೋಗಿಯ
ಸುಂದರದ ಸದ್ಬೋಧೆಯಂ ಕೇಳುವದು ಭಕ್ತಿಯಲಿ ೭೧

ಭಕ್ತಿಯೊಂದಿರಬೇಕು ನಮ್ಮೊಳು
ಭಕ್ತಿಗೇ ಶಿವನೊಲೆಯುವನು ನಿಜ
ಭಕ್ತಿಯೇ ನಿಜಸುಖದ ಮಾರ್ಗವು ಸಂಸೃತಿಯ ಜನಕೆ
ಭಕ್ತಿ ತಾಪತ್ರಯವ ಕಳೆವುದು
ಭಕ್ತಿ ಶಾಂತಿಯನುಂಟು ಮಾಳ್ಪುದು
ಭಕ್ತಿಯಂ ಪಾಲಿಸಿರಿಯೆಂದಪ್ಪಣೆಯ ತಾನಿತ್ತ ೭೩

ಎಲ್ಲಮನ ಗುಡ್ಡದಲಿ ಯೋಗಿಯು
ಲಲ್ಲೆಯಿಂ ಮಳೆಗರೆದು ಭಕ್ತರಿ-
ಗೆಲ್ಲರಿಗೆ ಶ್ರೀ ಮಲ್ಲಿಕಾರ್ಜುನ ದರ್ಶನಂ ಗೈಸಿ
ಚೆಲ್ವಪುಲಿ ಮರಿಗಳೊಡನಾಡುತ-
ಲಲ್ಲಿರುವ ಪುಲಿದಾಯಿಯಂ ಸಲೆ
ಉಲ್ಲಸಿತ ಮುಖ ಶಾಂತಗೊಳಿಸಿದನವಗೆ ಶರಣಾರ್ಥಿ ೭೪

**ಅಂತು ಹತ್ತನೆಯ ಸಂಧಿಗೆ ೬೬೦ ಪದ್ಯಕ್ಕೆ ಮಂಗಲಮಕ್ಕುಂ**
**ಭದ್ರಂ ಶುಭಂ ಮಂಗಲಂ**

ಶ್ರೀಗುರುಬಸವಲಿಂಗಾಯ ನಮಃ

# ಹನ್ನೊಂದನೆಯ ಸಂಧಿ

## ಬೆಂಗಳೂರ

ಸೂಚನೆ ಇಂದ್ರಜಾಲಿಗನಲ್ಲ ತಾನು ಮ-
ಹೇಂದ್ರಜಾಲಿಗನಲ್ಲವೈ ಯತಿ
ಸಾಂದ್ರಗುಣಮಣಿಹಾರ ಭಕ್ತರಸುದ್ಧರಿಪ ಧೀರ

ಬಿಟ್ಟು ಗುಡ್ಡವ ಬೂದಿಯೋಗಿಯು
ನೆಟ್ಟನೇ ತೆಂಕಣದಿಶೆಯ ಕಡೆ
ದಿಟ್ಟಿಯನ್ನಿಟ್ಟತ್ತ ನಡೆದನು ಲೋಕಹಿತಕಾಗಿ
ಬಟ್ಟೆಯೊಳು ಬಹು ಪುಣ್ಯಕ್ಷೇತ್ರಗ-
ಳಟ್ಟಹಾಸದಿ ನೋಡಿ ತಣಿಯುತ
ಕಟ್ಟಕಡೆಗೈತಂದನಾ ಬೆಂಗ್ಳೂರ ಪತ್ತನಕೆ

ಪರಮ ಯೋಗಿಯು ತನ್ನನಗರಕೆ
ಚರಣವಿಟ್ಟಿಹ ವಾರ್ತೆಯಂ ಸಲೆ
ಚರಭಕುತ ಶ್ರೀಮಂತ ಕೆಂಪೇಗೌಡ ತಾ ಕೇಳಿ
ಕರೆಸಿ ಸೆಟ್ಟರ ಸಾವುಕಾರರ-
ನಿರದೆ ಯೋಗಿಯ ಸನ್ನಿಧಿಗೆ ಬಂ-
ದೆರಗಿದನು ಪಾದಕ್ಕೆ ಸರ್ವರಗೂಡಿ ಭಕ್ತಿಯೊಳು

ಕುಶಲ ಪ್ರಶ್ನೆಗಳಾದನಂತರ
ಅಸುಮ ಮಹಿಮರು ನುಡಿದರಾತಗೆ
ವಸುಧೆಯೋಳ್‌ಶ್ರೀಮಂತ ಕೆಂಪೇಗೌಡ ನೀನು ಕಣಾ
ಹೆಸರು ಪಡೆದಿಹೆ ಶಿವನ ಕೃಪೆಯಿಂ
ಪೊಸನಗರಮಂ ರಚಿಸಿ ಭುವಿಯೊಳು
ಮಿಸುಪ ನಗರದ ಸಂಗಡವೆ ತವ ಕೀರ್ತಿ ಬೆಳೆಯುವದು ೩

ಬರಸಿಕೊಂಡನು ವೈಭವದಿ ಗುರು–
ವರನ ತನ್ನರಮನೆಗೆ ಗೌಡನು
ಚರವರೇಣ್ಯನ ಪಾದಪೂಜೆಯನೆಸಗಿ ಸಂಭ್ರಮದಿ
ಸರಸ ಲಿಂಗಾರ್ಚನ ಪ್ರಸಾದಕೆ
ಹರುಷದಿಂದಣಿಮಾಡಿಯೆಲ್ಲವ
ಪರಮ ಯೋಗಿಯ ನಿರಿಸಿಕೊಂಡಿಹನಲ್ಲಿ ಕೆಲದಿನವು ೪

ಬೆಂಗಳೂರನು ಕಟ್ಟಿಸಿದ ಘನ–
ಲಿಂಗ ಭಕ್ತನು ಕೆಂಪೆಗೌಡನು
ಜಂಗಮಾರ್ಯರಿಗಾಗಿ ಸುಂದರ ಮಠವ ರಚಿಸಿದನು
ಮಂಗಳಾತ್ಮಕ ಬೂದಿಯೋಗಿಯ
ಸಿಂಗರದ ಮಠವಿಂದಿಗೂ ಸಹ
ಬೆಂಗಳೂರೊಳು ಕಂಗೊಳಿಸುವದು ಲೋಕ ಸೇವೆಯೊಳು ೫

ಶರಣಕೆಂಪೇಗೌಡ ಯೋಗಿಯ
ಕರುಣದಿಂ ಗಣ ಪರ್ವ ಮಾಡಿಸಿ
ತಿರುಕರಿಂ ಜಂಗಮರ ವರೆಗೆಲ್ಲರನು ತಣಿಸಿದನು
ಚರವರರು ಘನವಂತ ಗೌಡನ
ಹರಸಿದರು ಸಂತೋಷದಿಂದಲಿ
ಧರೆಯೊಳಗೆ ನಿನ್ನಯ ಸುಕೀರ್ತಿಯು ಮೆರೆಯಲೆಂತೆಂದು ೬

ನಿತ್ಯ ಭಕುತರ ಸೇವೆಕೊಳ್ಳುತೆ
ನಿತ್ಯಲಿಂಗಾನಂದವೊಂದುತೆ
ನಿತ್ಯವನುಭವಗೋಷ್ಠಿಯಿಂ ಜನಮನವ ತಣಿಸುತ್ತೆ
ಸತ್ಯವ್ರತಿಗಳು ಕಾಲ ಕಳೆಯುತ-
ಲತ್ಯಧಿಕ ಶಿವಯೋಗ ಸಾಧನ–
ತತ್ಪರರು ತಾವಾಗಿ ಭಕ್ತೋದ್ಧಾರಗೈಯುತಿರೆ ೭

ಗುರುಗಳಾಶೀರ್ವಾದಬಲದಿಂ
ಸರಸದಿಂದಭಿವೃದ್ಧಿ ಹೊಂದುತೆ
ಮೆರೆದಿಹುದು ಸಲೆ ಉತ್ತರೋತ್ತರವಾಗಿ ತನ್ನಗರ
ಧರೆಯೊಳಗೆ ಕರ್ಣಾಟ ರಾಜ್ಯದ
ಪರಮ ಸುಂದರ ರಾಜಧಾನಿಯು
ಇರುತಿರಲ್ಕೀ ನಗರ ವೈಭವವನ್ನು ನೋಡಲ್ಕೆ ೮

ಬರುತಿಹುದು ಪರದೇಶಗಳ ಜನ
ಹರುಷಗೊಳ್ಳುವುದಿದರ ಪೆರ್ಮೆಯ-
ನರಿದು ಕೌತುಕಬಟ್ಟು ಕೊಂಡಾಡುವದು ಮನದಣಿಯೆ
ಪರಮ ಯೋಗಿಯ ಕೃಪೆಯುವಡೆದಾ
ಪುರಕೆ ಘನತೆಯು ಬಾರದಿರದೇಂ?
ಪುರವ ರಚಿಸಿದ ಮಹಿಮ ಕೆಂಪೇಗೌಡ ಕೇವಳನೇ ? ೯

## ಸಂಗಪ್ಪಸೆಟ್ಟಿ

ಬೆಂಗಳೂರಿನೊಳಿರ್ದನೋರ್ವನು
ಲಿಂಗ ಭಕ್ತನು ಸೆಟ್ಟಿಸಂಗಪ
ಜಂಗಮಾರ್ಯರೊಳಮಿತ ಭಕ್ತಿಯನಿಟ್ಟು ನಡೆವವನು
ಲಿಂಗತನುಮನವಾದ ಸೆಟ್ಟಿಗೆ
ಕೊಂಗಿಮನದ ಕುಪುತ್ರನೋರ್ವನು
ಭಂಗ ತರುತಿರ್ದಪನು ದುರ್ವರ್ತನದಿ ಮನೆತನಕೆ ೧೦

ಶರಣ ಸಂಗಪ ಸೆಟ್ಟಿ ಸಹಜದೊ–
ಳರಿದು ಸ್ವಾಮಿಯ ಮಹಿಮೆಯಂ ಸಲೆ
ಭರದಿ ಬಂದೆರಗಿದನು ಸಾಷ್ಟಾಂಗದೊಳು ಸನ್ನಿಧಿಗೆ
ಕರಮುಗಿದು ಬೇಡಿದನು ವಿನಯದಿ
ಗುರುವರನೆ ನನ್ನಯ ಕುಮಾರನು
ಮರುಳ ಸಂಗದಿ ಬಸವ ಶೆಟ್ಟಿಯು ದುಷ್ಟನಾಗಿಹನು ೧೧

ಎಷ್ಟು ಬುದ್ಧಿಯ ಹೇಳಿದೊಡು ತಾ
ಕೆಟ್ಟ ಚಾಳಿಗಳನ್ನು ಬಿಡದಲೆ
ಎಟ್ಟಿತನದಿಂ ಚರಿಸುವನು ಮನಬಲ್ಲ ತೆರನಂತೆ
ದುಷ್ಟವ್ಯಸನಂಗಳಿಗೆ ದ್ರವ್ಯವ–
ನೆಷ್ಟೊ ತಾ ಹಾಯ್ । ನಷ್ಟಪಡಿಸಿದ
ಕಷ್ಟ ಬಂದೆಡೆಗೊಂಡಿತೆನಗೀ ಮುಪ್ಪಿನವತೆಯೊಳು ೧೨

ಮನಕೆ ಶಾಂತಿಯುಯಿಲ್ಲಗುರುವರ
ಮನೆಯ ಶಾಂತಿಯು ಕದಡಿ ಹೋಗಿದೆ
ನನಗೆ ಸಂಸಾರವಿದು ಬಹು ತಲೆಭಾರವಾಗಿಹದು
ಮನೆಯೊಳಾತನ ಮಡದಿಗೋಳನು
ನೆನೆಸಿದೊಡೆಯೆದೆಯೊಡೆದು ಪೋಪುದು
ದಿನದಿನವು ಹೊಡೆಬಡಿದು ಪಾಡಿದನವಳ ಒಡವೆಗಳ ೧೩

ಏನನಾದೊಡು ಮಾಡಿಯಾತನ
ಹೀನವೃತ್ತಿಯ ಬಿಡಿಸಿ ಪ್ರಭುವರ
ಮಾನ ಕಾಯುವುದೆನ್ನ ಮನೆತನದೀ ಪ್ರಸಂಗದೊಳು
ಮಾನನಿಧಿಗಳ್ ನೀವ್ ಸಮರ್ಥರು
ಶ್ವಾನಗುಣಿಯಾದೆನ್ನ ಪುತ್ರನ
ಜ್ಞಾನುಭವಪಯೋಧಿಯೊಳು ಕೃಪೆಯಿಂದುದ್ಧರಿಸಬೇಕು ೧೪

ಎಂದು ದೈನ್ಯದಿ ಬೇಡಿಕೊಳ್ಳಲು
ಮಂದಭಾಗ್ಯನ ಗೋಳನಾಲಿಸಿ
ಅಂದು ಕರೆಸಿದನಾ ಬಸವಸೆಟ್ಟಿಯನು ಶಿವಯೋಗಿ
ಸಂದ ದುಶ್ಚಟಗಳನು ನೀಗಲು
ಚೆಂದದಿಂ ಬುದ್ಧಿಯನು ಪೇಳ್ದನು
ಬಂದ ಬಸವನ ಮನವು ಪಲ್ಲಟವಾಯಿತಾ ಕ್ಷಣದಿ ೧೫

ಗುರುಗಳಾತನ ಮೈದಡವಿ ಮೇಣ್
ಶಿರದಿ ಕರವಿಟ್ಟುರುಹಿದರು ಗಡ
ತರಳ ನೀ ಕೆಟ್ಟಿರುವೆ ದುಷ್ಟರ ಸಂಗದಿಂದಕಟಾ!
ಸರಳ ಹೃದಯನು ನೀನಿರುವೆ ನಿಜ
ದುರುಳ ಜನಗಳು ಹೆಣ್ಣು ಹೆಂಡದಿ
ಮರುಳು ಮಾಡಿದರಯ್ಯ ನಿನ್ನನು ಬಲ್ಲೆನಾನದನು ೧೬

ಪಿತನು ಕಷ್ಟದಿ ಕೂಡಿಸಿಟ್ಟಾ
ವಿತತ ಧನಮಂ ಕಳೆದುಬಿಟ್ಟಿಹೆ
ಪಿತಗೆ ಮಾತೆಗೆ ಮುಪ್ಪಿನೋಳ್ ದುಃಖವನು ಕೊಡಬಹುದೇ ?
ಸುತರು ತಾಯ್ತಂದೆಗಳ ಪಾಲಿಪು-
ದತಿ ಹಿತದ ಕರ್ತವ್ಯವಲ್ಲವೆ ?
ಮಾತೆ ಪಿತರಾ ಮರಗು ನಿನಗೇಂ ತಟ್ಟದಿರ್ದಪ್ಪುದೆ ? ೧೭

ಶಿವನು ಕೊಟ್ಟೀ ತನುವ ಯುವಕನೆ
ಅವಿನಯದಿ ಹಾಳ್ಗೆಡಿಸಬಹುದೇ ?
ಭವಕೆ ನೀ ಸಲೆ ಮಾರುಗೊಟ್ಟಿಹೆ ನಿನ್ನ ದೇಹವನು
ಭವಹರನ ನೆನೆಯುತ್ತೆ ಮುಂದಿ-
ನ್ನವನಿಯೊಳ್ ಕಾಯಕವ ಕೊಂಡುರೆ
ಸುವಿನಯದಿ ಪರಸಾದ ಕಾಯುವ ಮಾಡು ಹುಚ್ಚಪ್ಪ ೧೮

ಸತ್ಯ ಶರಣರು ತನುವ ಬಳಲಿಸಿ
ನಿತ್ಯದೊಳ್ ಪರಿಶುದ್ಧಕಾಯಕ-
ವತ್ಯಧಿಕ ಭಕ್ತಿಯಲಿ ಗೈದರು ಅರಿಯೆಯಾ ನೀನು ?
ಉತ್ತಮರ ಮಾರ್ಗವನು ನೀ ಪಿಡಿ
ವಿತ್ತಹಾರಕ ಮಿತ್ರರಂ ಬಿಡು
ಸ್ತುತ್ಯವಹ ಕರ್ತವ್ಯಗಳ ನೀ ಪಾಲಿಸೈ ಮರುಳೇ ೧೯

ಕಾಯಕದಿ ಗುರುಲಿಂಗಜಂಗಮ-
ದಾಯತದ ದಾಸೋಹಗೈದೊಡೆ
ಕಾಯುವನು ಕಡೆತನಕ ಪರಶಿವನೆಷ್ಟು ಕೈಬಿಡದೆ
ಮಾಯೆಮೋಹದ ಬಲೆಗೆ ಬೀಳದೆ
ಕಾಯವನ್ನಪವಿತ್ರಗೊಳಿಸದೆ
ಕಾಯಕವ ತನುಮನಧನಂಗಳ ನೆರವಿನಿಂ ಮಾಡು ೨೦

ಬಿಡು ಮಗನೆ ದುರ್ಜನರ ಸಂಗವ
ಮಡದಿ ಮಕ್ಕಳಗೂಡಿ ಬಾಳೆಲೆ
ದುಡಿದ ಸಂಪದವನ್ನು ಬಳಸಲು ಬೇಡ ದುಷ್ಕೃತಿಗೆ
ಬಿಡದೆ ಗುರುತಾಯ್ತಂದೆಗಳ ಹಿತ-
ನುಡಿಯ ನೀನನುಸರಿಸು ತಪ್ಪದೆ
ನಡೆ ಪ್ರಪಂಚದೊಳೆಚ್ಚರದಿ ಹಿಡಿ ಶರಣರಡಿಯನ್ನು ೨೧

ಎಂದು ಪ್ರೇಮದಿ ನುಡಿದ ಮಾತುಗ-
ಳೆಂದು ಬಿಂಬಿಸೆ ಬಸವಸೆಟ್ಟಿಯು
ಮುಂದಿರುವ ಬೂದೀಶಯೋಗಿಯ ಪಾದಪಂಕಜಕೆ
ವಂದಿಸಿದನತಿ ಭಕ್ತಿಯಿಂದಲಿ
ಅಂದಿನಿಂ ತಾ ಮುಂದೆ ಸತ್ಪಥ-
ದಿಂದ ಸಾಗುತೆ ಮನೆತನಕೆ ಸತ್ಕೀರ್ತಿತಂದಿಹನು ೨೨

ಹಿಗ್ಗಿದರು ತಾಯ್ತಂದೆಗಳು ಬಹು
ಎಗ್ಗನಾದಾ ಮಗನು ಗುರುಗಳ
ಅಗ್ಗಳದ ನುಡಿಗೇಳಿ ಪಶ್ಚಾತ್ತಾಪದಿಂ ಬೆಂದು
ಕುಗ್ಗೆ ಪಾಪವಿಚಾರವೆಲ್ಲವು
ತಗ್ಗೆ ಅವಿವೇಕತ್ವ ಮೋದದ
ಬುಗ್ಗೆ ತಾ ಚಿಮ್ಮುತಿರೆ ಪರಿವರ್ತನೆಯ ಪೊಂದಿರಲು ೨೩

## ಸಿದ್ಧಗಂಗಾ (ಆಕಾಶ ಗಮನ)

ಒಂದು ದಿನ ಬೂದೀಶ ಯೋಗಿಯು
ಚಂದದಿಂ ಬೆಂಗ್‌ಳೂರ ಭಕ್ತರ
ವೃಂದದೋಳ್ ಶ್ರೀ ಸಿದ್ಧಗಂಗಾಕ್ಷೇತ್ರಕರ್ತಿಯಲಿ
ಬಂದು ಕೆಲ ದಿನ ತಂಗಿಯಲ್ಲಿಯು
ನಂದದಿಂದುದ್ಧರಿಸಿ ಭಕ್ತರ
ಮುಂದೆ ಶಿವಗಂಗಾಸುಕ್ಷೇತ್ರಕೆ ನಡೆಯಲನುವಾಗೆ ೨೪

ಸ್ವಾಮಿಯೊಡನೆಯೆ ಭಕ್ತರೆಲ್ಲರು
ಪ್ರೇಮದಿಂ ಸಲೆ ಸಿದ್ಧರಾಗಿರೆ
ಆ ಮಹಾ ಜನರಲ್ಲಿ ನಂಜುಂಡಾರ್ಯನೆಂಬವನು
ಸ್ವಾಮಿಯೇ ನಾಂ ವೃದ್ಧನಾಗಿಹೆ
ಸೀಮೆಯಂ ದಾಂಟಲ್ಕಶಕ್ತನು
ಆ ಮಹಾ ಶಿವಗಂಗೆಗಾಂ ಬರುತಿರ್ಪ ಬಗೆಯೆಂತು? ೨೫

ನುಡಿಯಲಾ ನಂಜುಂಡನೀ ಪರಿ
ಬಿಡು ಬಿಡಾ ಚಿಂತೆಯನು ವೃದ್ಧನೆ
ಮೃಡನು ನಿನಗಾಯಾಸವಿಲ್ಲದಲಲ್ಲಿಗೊಯ್ಯುವನು
ನಡೆಯಿರ್ಕೆ ನನ್ನೊಡನೆ ಭಕ್ತರೆ
ಗಡನೆ ಶಿವಗಂಗಾಸುಕ್ಷೇತ್ರಕೆ
ಕಡು ಮುದದಿ ಸದ್ಭಕ್ತರೆಮ್ಮಯ ಹಾದಿಕಾಯುವರು ೨೬

ನೆರೆಸಿ ತನ್ನಯ ಸುತ್ತು ಭಕ್ತರ
ಕರದಿನೆಲ್ಲರ ಶಿರವ ಸ್ಪರ್ಶಿಸೆ
ಭರದಿ ಕಂಗಳ ಮುಚ್ಚಿರೆಂದೆಲ್ಲರಿಗನುಜ್ಞೆಯನು
ಒರೆದಿರಲು ಕಣ್ಮುಚ್ಚೆ ಸರ್ವರು
ಕರುಣಿ ಶ್ರೀ ಬೂದೀಶನವರಿಗೆ
"ಹರಹರಾ! ಮಾದೇವ ಬಸವಾ ಶಿವನೆ"ಯೆಂದೆನ್ನಿ ೨೨

ಇಂತು ಆಜ್ಞೆಯ ನೀಡೆ ಭಕ್ತರು
ಸಂತಸದಿ ಶಿವ ಬಸವರಂ ಸಲೆ
ನಿಂತ ತಾಣದಿ ಧ್ಯಾನಮಾಡುತ್ತಿರಲು ಸುವಿರಾಗಿ
ಕಂತು ಹರನಂ ಸ್ಮರಿಸಿ ಮನದಲಿ
ಸಂತಸದೊಳಾಕಾಶ ಮಾರ್ಗದಿ
ಚಿಂತೆಯಿಲ್ಲದೆ ಸಾಗಿಸಿದನವರನ್ನು ಕ್ಷೇತ್ರಕ್ಕೆ ೨೩

ಏನು ಸೋಜಿಗವರರೆ !ಕ್ಷಣದೊಳು
ಮಾನನಿಧಿ ಭಕುತರ್ಗೆ ಯೋಗಿಯು
ಸಾನುರಾಗದೊಳೆಲ್ಲರಿಗೆ ಕಣ್ದೆರೆಯಿರೆಂದೆನಲು
ತಾನೆ ಶಿವಗಂಗಾ ಸುಕ್ಷೇತ್ರವು
ಭಾನುತೇಜದಿ ಹೊಳೆಯುತಿರ್ಪುದು
ಏನು ಬಣ್ಣಿಪುದಾ ಸುಯೋಗಿಯ ಲೀಲೆಯಿೂ ಪರಿಯ ೨೪

ಹೇಗೆ ಬಂದೆವೊ ನಾವು ಇಲ್ಲಿಗೆ?
ಬೇಗ ಶಿವಗಂಗಾ ಸುಕ್ಷೇತ್ರಕೆ
ಯೋಗಿ ತಾನೇಂ ಮಾಟಗೈದನೊ! ಮಂತ್ರ ಹಾಕಿದನೊ!
ರಾಗದಿಂ ಕಣ್ಮುಸಗಗೈದನೊ!
ಯೋಗ ಬಲದಿಂದೆಮ್ಮ ತಂದನೊ!
ಹೀಗೆ ನಾನಾ ರೀತಿಯೊಳ್ ಕೌತುಕವತೋರಿದರು ೨೫

### ಧಾರವಾಡ

ಯೋಗಿಗಳು ಶಿವಗಂಗೆಯಿಂ ಸಲೆ
ಬೇಗ ಬಂದರು ಧಾರವಾಡಕೆ
ರಾಗದಿಂ ಸದ್ಭಕ್ತರಿದಿರ್ಗೊಂಡವರ ಕರೆತಂದು
ಯೋಗ ಮುದ್ರಾಂಕಿತನ ಜ್ಞಾನಿಯ
ಯೋಗಕನುಸಂಧಾನಕನುಗುಣ-
ಮಾಗಿ ಇಳಿಸಿದರಲ್ಲಿಯೊಂದೇಕಾಂತ ಸ್ಥಲದಲ್ಲಿ ೩೧

ಜನರು ಸಂಜೆಯು ಮುಂದೆ ದರ್ಶನ-
ವನು ಪಡೆದು ಆನಂದದಿಂದವ-
ರನುಪಮಾಶೀರ್ವಾದಮಂ ಪ್ರತಿನಿತ್ಯ ಪಡೆಯುವರು
ಜನಕೆ ಶ್ರೀಗಳು ಬೋಧೆಗೈಯುತೆ
ತನು ಮನೋಭಾವಂಗಳಂ ಸಲೆ
ಅನುದಿನಂ ಪರಿಶುದ್ಧಗೊಳಿಪರು ಮುತ್ರವಾಗ್ಜಲದಿಂ ೩೨

ಒಂದು ದಿನ ಶಿವಯೋಗಿವರ್ಯನು
ಚೆಂದದಿಂ ಪೋಗುತಿರೆ ಮಾರ್ಗದೊ-
ಳಂದು ಬಾಬಣ್ಣೆಂಬವನ ಪೋಲೀಸರೊಯ್ಯುವದನು
ಮುಂದೆ ಎದುರಿಗೆ ಬರಲು ಕಂಡನು
ಮಂದ ಭಾಗ್ಯನಿಗಂದು ಮರಣದ
ದಂಡನೆಯು ಕಾಯ್ದಿದ್ದಿತಾರೋಪದೊಳು ಸಿಕ್ಕುದರಿಂ ೩೩

ಸಂಕಲೆಯ ತೊಡಿಸಿಹರು ಕೈಗಳಿ-
ಗಂಕಿತದೊಳಿಟ್ಟಿರ್ಪರಾತನ
ಮಂಕುಹಿಡಿದಂತಿರ್ದ ನಡುವಿಗೆ ನೇಣು ಬಿಗಿದಿರಲು
ಶಂಕೆಗೊಂಡೆಡ ಬಲದ ಜನಗಳು
ಮಂಕನನ್ನೇ ನೋಡುತಿರ್ದರು
ಬಿಂಕದಿಂ ಹಿಂದಿಂದೆ ಪೋಲಿಸರ್ಕೈತರುತಲಿಹರು ೩೪

ಆರೊ ದುಷ್ಟರು ಕೊಲೆಯ ಮಾಡಿಹ-
ರೂರೊಳೊಬ್ಬನ ಮುಂದೆಯಲ್ಲಿಂ
ಜಾರಿ ಪಾರಾಗಿಹರು ಹೆಣದೆಡೆ ನಿಂತ ಬಾಬುವನು
ಹಾರಯಿಸಿ ಹಿಡಿದವನ ಕೋರ್ಟಿಗೆ
ಸೇರಿಸಲು ನ್ಯಾಯಾಧಿಪತಿ ಸುವಿ–
ಚಾರಣೆಯ ಮಾಡಲ್ಕೆ ಬಾಬುವೆಯಾದನಪರಾಧಿ ೩೫

ಈ ಕೊಲೆಯ ಮಾಡಿಲ್ಲ ನನ್ನ-
ನ್ನೇಕೆ ಹಿಡಿಯುವಿರೆನಲು ಪೋಲಿಸ-
ರೇಕೆ ಬೊಗಳುವೆ ಸಾಕು ಬಿಡು ಮತ್ತಾರು ಕೊಲ್ಲುವರು ?
ಈ ಕೊಲೆಯ ಮಾಡಿಲ್ಲವೆಂಬುದ-
ಕೇಕ ಸಾಕ್ಷಿಯನಾದರೂ ಕೊಡು
ಈ ಕೊಲೆಯ ಮಾಡಿಲ್ಲಿ ನಿಂದಿಹೆ ಬೇರೆಯಾರಿಹರು ? ೩೬

ತರಲಿ ಸಾನಲ್ಲಿಂದ ಸಾಕ್ಷಿಯ
ಅರುವಿನಿಂ ಪೇಳುವೆನು ತಿಳಿಯಿರಿ
ಹರನು ಬಲ್ಲ ನಿರಾಪರಾಧಿಯು ನಾನು ದಿಟವೆನಲು
ಬರಿದೆ ಗಳುಹಲು ಬೇಡವೀ ಕೊಲೆ
ಜರೆಗಿದಾ ಸ್ಥಳದಲ್ಲಿ ನಿಂತವ-
ನಿರದೆ ಕೊಲೆಗೈದಿರುವನಲ್ಲದೆ ಬೇರೆಯಾರಿಹರು ? ೩೭

ದಾರಿಯಲಿ ಬರುವಾಗ ಸಹಜದಿ
ನೇರವಾಗೀ ಪೆಣವ ಕಾಣುತ
ಯಾರು ಸತ್ತವರೆಂಬುದನ್ನರಿಯಲ್ಕೆ ಸಾ ಬಂದೆ
ಯಾರು ಕೊಂದರೊ ಶಿವ ಶಿವಾ ! ಯೆಂ-
ದಾರಯಿದು ದುಃಖಿಸುತಲಿರೆ ನಾ
ಸಾರಿದಿರಿ ನೀವನಿತರೊಳ್ಪಿಡಿದಿಹಿರಿ ನನ್ನನ್ನು ೩೮

ಇದನು ನಂಬದೆ ಪೋಲಿಸರು ನೆರೆ
ಬೆದರಿಸುತೆ ಬಾಯಿಯನು ಮುಚ್ಚಿಸಿ
ಬದಿಯೊಳಡ್ಡಾಡುತಿಹ ಜನರಂ ಸಾಕ್ಷಿಯಾಗಿರಿಸಿ
ಒದಗಿಸುತೆ ಬಹು ಸುಳ್ಳು ಸಂಗತಿ
ಹದಗೊಳಿಸಿ ವರದಿಯನು ತಕ್ಷಣ
ವಿದಿತಗೊಳಿಸಿದರದನು ಕೋರ್ಟಿಗೆ ದಕ್ಷತೆಯೊಳಾಗ ೩೯

ತಿಳಿದು ಸಾಕ್ಷಿ ಪುರಾವೆಸಿಂ ಹದ-
ಗೊಳಿಸಿದನು ದೇಹಾಂತ ಶಿಕ್ಷೆಯ-
ನುಳುಕಿತಾದೊಡು ನ್ಯಾಯಪತಿಮನ ಶಿಕ್ಷಗೊಡುವಾಗ
ತಿಳಿದು ಮನದ ವಿರುದ್ಧ ವಾಜ್ಞೆಯ
ಕಳುಹಿದನು ಬಾಬುವನು ಕೊಲ್ಲಲು
ಎಳೆದು ಕೊಂಡೊಯ್ದಪರು ಪೋಲಿಸರಾತನಂ ವಧೆಗೆ ೪೦

ಮಡದಿಮಕ್ಕಳು ತಾವು ಎದೆಯೊಡೆ
ಹೊಡೆದು ಕೊಳ್ಳುತೆ ಹಿಂದೆ ಸಾಗಿರೆ
ನಡೆದನು ಬಾಬಣ್ಣ ಕಂಬನಿಗರೆಯುತಲಿ ಮುಂದೆ
ಒಡೆಯ ಶ್ರೀ ಬೂದೀಶಯೋಗಿಯು
ಎಡೆಗೆ ಬರ್ಪುದ ಕಂಡು ಬಾಬುವು
ಅಡಿಗೆ ನಮಿಸುವೆನೆಂದು ಪೋಲಿಸರಪ್ಪಣೆಯ ಕೇಳ್ದ ೪೧

ಪೋಲಿಸರು ನೆಮಿಸಲ್ಕನುಜ್ಞೆಯ
ಲೀಲೆಯಿಂದಿತ್ತಿರಲು ಬಾಬುವು
ಲೋಲ ಶ್ರೀ ಶಿವಯೋಗಿಪಾದಕ್ಕಡ್ಡ ಬಿದ್ದಿಹನು
ಏಳು ಶುಭ ನಿನಗಾಗಲೈಮಗು
ಏಳು ಶುಭ ಕೃಪೆಯಕ್ಕು ಶೀಘ್ರದಿ
ಭಾಳಲೋಚನರೂಪಿಗಳು ತಾವಿಗಿತು ಹರಸಿದರು ೪೨

ಮನೆಯುವರು ಕೇಳಿದರು ಯೋಗಿಗೆ
ಅನಘ ಮೂರ್ತಿಯೆ, ಇಂದು ಇವನಂ
ಕೊನೆಯ ಶಿಕ್ಷೆಗೆ ಗುರಿಯ ಮಾಳ್ಪರು ನ್ಯಾಯತೀರ್ಪಿನಲಿ
ಘನಮಹಿಮರ್ರೆ ತಾವು ಈತಗೆ
ನಿನಗೆ ಶುಭವಹುದೆಂದು ಪೇಳ್ದಿರಿ
ಏನಿತು ಸೋಜಿಗವಿದುವೆ ಗುರುವರ, ತಿಳಿವೆವೆಂತೆಂದನು? ೪೩

ಎಂದು ನುಡಿದುದ ಕೇಳಿ ಯೋಗಿಯು
ಮಂದ ಹಾಸದಿ ಪೇಳ್ದನವರಿಗೆ
ಕಂದುಗೊರಲನು ಕಾಯ್ವನವನನು ಬಿಡಿರಿ ಚಿಂತೆಯನು
ಎಂದು ಕಳುಹಿಸಲಾಗಿ ಸರ್ವರು
ಮುಂದೆ ನಡೆದರು ವಧೆಯ ತಾಣಕೆ
ನಿಂದ ಬಾಬುನ ಕೊರಳ್ಗೆ ನೇಣಂ ಬಿಗಿದು ಜಗ್ಗಿದರು ೪೪

ಸಂದ ಭಾಗ್ಯದಿ ನೇಣು ಹರಿಯಿತು
ಮುಂದೆ ಮೂರ್ಸಲ ಹಾಗೆಯಾಯಿತು
ಒಂದನರಿಯದೆ ನಿಂದರಲ್ಲಿಯೆ ಪಾಶಿಕೊಡುವವರು
ಅಂದು ನ್ಯಾಯಾಧೀಶನೆದೆಯೊ-
ಳೊಂದಿರಲು ತಳಮಳವು ಬೇಗನೆ
ಬಂದಿಯಂ ಬಿಡಿರೆಂದು ಆಜ್ಞೆಯ ಬರೆದು ಕಳುಹಿದನು ೪೫

ಬಿಡುಗಡೆಯ ಹೊಂದಿದನು ಬಾಬುವು
ಮುದದಿ ಮಕ್ಕಳಿಗಾಯ್ತು ಹಬ್ಬವು
ಒಡೆಯ ಶ್ರೀ ಶಿವಯೋಗಿಯಂ ಮನದಲ್ಲಿ ಕೊಂಡಾಡಿ
ನಡೆದು ಬಂದಾ ಯೋಗಿದರ್ಶನ
ಪಡೆದು ಕಾಯ್ಕಪ್ಪುರವನರ್ಪಿಸಿ
ತಡವ ಮಾಡದೆ ನಡೆದರ್ರೆ ನಿಜಗೃಹಕೆ ಸೊಗನಾಗಿ ೪೬

ಶಿವನಧ್ಯಾನವ ಮಾಡುತಿರ್ಪರು
ಭವಶರಧಿಯಂ ದಾಂಟುತಿರ್ಪರು
ತವಕದಿಂ ಪ್ರತಿನಿತ್ಯ ತರಹರವಾಗಿ ಶಿವನಡಿಯ
ಅವಿರತಂ ಮನದಲ್ಲಿರಿಸಿ ಮಿಗೆ
ಭುವಿಗೆ ಸನ್ಮಾರ್ಗವನು ತೋರ್ಪರು
ಭವಹರನ ರೂಪಿಗಳು ನಮ್ಮಯ ಬೂದಿಯೋಗಿಗಳು ೩೭

ಬಂದ ಕಂಟಕವರಿಯಬಲ್ಲರು
ಬಂದುದಂ ಪರಿಹರಿಸಬಲ್ಲರು
ಎಂದಿಗೂ ಪುಸಿಯಾಗದವರಾಡಿರ್ದ ನುಡಿಯುಂ ಗಡ
ಸಂದ ಯೋಗದ ಸಿದ್ಧಿಗಳ ಬಲ-
ದಿಂದೆ ಹಿಂದಿನ ಮುಂದಿನಿಂದಿನ
ಕುಂದುಕೊರತೆಗಳನ್ನು ನೀಗುತೆ ನಂದ ಬಡುತಿಹರು ೩೮

ಮಾಡಿದನು ಲೀಲೆಗಳ ಯೋಗಿಯು
ನೀಡಿದನು ಭಕ್ತರ್ಗೆ ಸುಖಮಂ
ಕೂಡಿದನು ಸರ್ವರೊಳು ತನ್ನವರೆಂಬ ಭಾವದಲಿ
ನಾಡೆ ಸರ್ವೋದ್ಧಾರಗೈಯಲು
ನಾಡುನಾಡೊಳು ಚರಿಸುತಿರ್ದನು
ಬೇಡಿದಿಷ್ಟಾರ್ಥಗಳನೀವನು ಸರ್ವಕುಲಕೆಲ್ಲ ೩೯

**ಅಂತು ಹನ್ನೊಂದನೆಯ ಸಂಧಿಗೆ ೭೦೯ ಪದ್ಯಕ್ಕೆ ಮಂಗಲಮಕ್ಕುಂ**
**ಭದ್ರಂ ಶುಭಂ ಮಂಗಲಂ**

ಶ್ರೀ ಗುರುಬಸವಲಿಂಗಾಯ ನಮಃ

# ಹನ್ನೆರಡನೆಯ ಸಂಧಿ

## (ಸಂಸಾರ–ಸನ್ಯಾಸ)

ಸೂಚನೆ ನಡೆ ನುಡಿಯು ಪರಿಶುದ್ಧವಾಗಿರ-
ಲೊಡನೆ ಸಂಸೃತಿ ಸುಕರವಪ್ಪುದು
ತಡವರಿಸೆ ನಿಸ್ಸಾರವೆಂದನು ಬೂದಿಯೋಗೀಂದ್ರ

ಸೋಮಶೇಖರನೆಂಬ ಭಕ್ತನು
ಕಾಮಿ ನೀಮೃತ್ಕಾಂಚನಂಗಳ
ಆಮಿಷವ ತೊರೆದಾಂತು ವೈರಾಗ್ಯವನು ಯತಿಯೆಡೆಗೆ
ಪ್ರೇಮದಿಂದೈತಂದು ಪೇಳ್ದನು
ಸ್ವಾಮಿಗಳೆ, ಸಂಸಾರಬೇಡೆನ-
ಗಾ ಮಹಾಸುಖವಡೆಯೆ ಸನ್ಯಾಸವನೆ ಬಯಸುವೆನು ೧

ನನಗೆ ಕೊಡು ಸನ್ಯಾಸದೀಕ್ಷೆಯ
ನನಗೆ ಹೆಂಡತಿ ಮಕ್ಕಳಿರ್ದೊಡೂ
ನನಗೆ ಸರ್ವಸುಖೋಪಭೋಗಗಳಿರ್ದೊಡೂ ಸಹಿತ
ನನಗದಾವುದು ಬೇಡವಾಗಿದೆ
ಮನದೊಳಗೆ ಸಂಸಾರ ಹೇಯವು
ಜನಿಸಿಹುದು ನಾನಾಶಿಪೆನು ಏಕಾಂತಜೀವನವ ೨

ದುಃಖಮಯ ಸಂಸಾರವಿದು ನಿಜ
ಸುಖಕೆಯೆಡೆಯಿಲ್ಲೆನಿತು ಇದರೊಳು
ಅಕಟ! ಬಂದೆಡೆಗೊಳ್ಳುವವು ಬಹು ಚಿಂತೆ ವಿಘ್ನಗಳು
ವಿಕಟ ಸ್ವಾರ್ಥವು ಬೆಂಬಿಡದು ದಿಟ
ವಿಕರಿಸುತ್ತಿವೆ ರೋಗಮೃತಿಗಳು
ವಿಕಲನಾಗಿಹೆ ನಾನು ಗುರುವರ ಸಂಸೃತಿಯ ಭ್ರಮೆಯಿಂ ೩

ಆಶೆಯಾಮಿಷ ವಿಷಯಮೋಹವು
ಗಾಸಿಗೊಳಿಪವು ನಿತ್ಯಮನವನು
ಹೇಸಿಕೆಯ ಸಂಸಾರ ನರಕದ ಬೀಡು ಬಗೆಯುವೊಡೆ
ತಾಸು ತಾಸಿಗೆ ಕೋಪ ತಾಪಗ-
ಳೇಸೊ ಶಿವ ! ಮದಮತ್ಸರಂಗಳು
ಹಾಸಿಬಿಟ್ಟಿವೆಯೊ ಪ್ರಪಂಚದಿ ಸೊಗಸದೇನುಂಟು ? ೪

ಬಯಲು ಭ್ರಮೆ ಸಂಸಾರವೆಂಬುದು
ಹುಯಿಲು ಬೂಟಾಟಿಕೆ ಕುತಂತ್ರವು
ಭಯವು ಗಂಡಾಂತರವು ಕೊಲೆಸುಲಿಗೆಗಳ ತಾಂಡವವು
ಜಯವಧರ್ಮಕನೀತಿಗಕ್ಕಟ !
ನ್ಯಾಯನಯವಿನಯಕ್ಕೆಯಪಯಶ
ಮಾಯವಾದೀ ಸಂಸೃತಿಯ ಜ್ಞಾನಿಗಳು ನಂಬಿವರೇ ? ೫

ಸುಳ್ಳು ಹೆಂಡತಿ ಸುಳ್ಳು ಮಕ್ಕಳು
ಸುಳ್ಳು ತಾಯ್ತುತಂದೆಗಳು ಆಪ್ತರು
ಸುಳ್ಳಿನಾ ಕಂತೆಯಿದು ಸಂಸೃತಿಯೆಂಬರೈ ಬುಧರು
ಸುಳ್ಳು ಕನಸಿನ ತೆರದಿ ತೋರಿದೆ
ಮುಳ್ಳು ಸಂಸಾರವಿದು ಭವ ಭಯ-
ವುಳ್ಳ ಸಂಸೃತಿ ನಂಬಿ ನಾ ಕೆಡಲೇಕೆ ಗುರುರಾಯ? ೬

ಹುಟ್ಟಿ ಬಂದಾಗೇನ ತಂದೆನು ?
ಬಿಟ್ಟು ಹೋಗಾಗೇನನೊಯ್ವೆನು ?
ಬಟ್ಟಬಯಲೇ ಕಟ್ಟಕಡೆಗೆಲ್ಲಾ ತಿಳಿದು ನೋಡೆ
ನಟ್ಟನಡುವೀ ಬೆಳದ ಸಂಸ್ಕೃತಿ–
ಯಟ್ಟಹಾಸವ ನೋಡಿರಕ್ಕಟ !
ಕಟ್ಟಿಕೊಂಡಿದೆ ನಿಟ್ಟುಗಳನೇಕವನು ಸುತ್ತೆಲ್ಲ ೭

ನನ್ನ ಹೆಂಡತಿ ನನ್ನ ಮಕ್ಕಳು
ನನ್ನ ಹೊಲಮನೆ ನನ್ನ ದ್ರವ್ಯವು
ನನ್ನ ವೈಭವವೆನ್ನ ಗೌರವವೆಂದಹಂಕರಿಸಿ
ಬೆನ್ನು ಹತ್ತಿದ ಮೃತ್ಯುದೇವತೆ-
ಯನ್ನು ಲೆಕ್ಕಿಸದಿರ್ದೆ ಶಿವ! ಶಿವ!
ಇನ್ನುಮೇಲೆನಗೇಕೆಯಿೂ ಸಂಸಾರದಾ ಭ್ರಮೆಯು ೮

ಕುತ್ತುಗಳು ಯಾವಾಗ ಬರ್ಪವೊ !
ಮೃತ್ಯು ತಾನಾವಾಗ ಪಿಡಿವುದೊ
ನಿತ್ಯ ಜೀವನದಲ್ಲಿ ಕಾಡುವ ಹಗೆಗಳೆಷ್ಟಿಹರೋ
ಎತ್ತನೋಡಿದಡತ್ತ ಶಿವಶಿವ!
ಕತ್ತಲೆಯು ಕವಿದಿಹುದು ನೋಡಾ
ಸತ್ಯ ಸಾಂಬನ ಕಾಂಬುದಕೆ ಬೆಳಕೆಲ್ಲಿಹುದು ಪೇಳಾ ೯

ಎಲ್ಲರನು ವೇಣೆಲ್ಲವನು ನಾ-
ನಿಲ್ಲಿಯೇ ಬಿಟ್ಟೆಲ್ಲಿಗೋ ಗಡ
ತಲ್ಲಣದಿ ಪೋಗುವೆನು ಸಂಸಾರದೊಳಗೇನುಂಟು?
ಸಲ್ಲಲಿತಸನ್ಯಾಸದಿಂ ನಾ-
ನುಲ್ಲಸಿತನಾಗೆನ್ನ ಜೀವವ
ಸಲ್ಲಿಸುವೆ ಶ್ರೀ ಶಂಭುವಿನ ಪಾದಕ್ಕೆ ಭಕ್ತಿಯುಲಿ ೧೦

ಆರಿಗಾರುಂಟೀ ಪ್ರಪಂಚದಿ
ದೂರಸಾರ್ವರು ಆಪ್ತರಿಷ್ಟರು
ಸೂರೆಗೊಂಡಿರೆ ಧನವು ನಾಂ ನಿರ್ಗತಿಕನಾಗಿರಲು
ಸೇರುವರು ಧನ ತುಂಬಿ ತುಳುಕಲು
ಗೌರವವ ತೋರಿಸುತೆ ವಿನಯದಿ
ಹೀರುವರು ಸೊತ್ತನ್ನು ಜಿಗಳಿಯು ರಕ್ತ ಹೀರುವಪ್ಪೋಲ್ ೧೧

ಚಿಂತೆಯಿಂ ಸಂಸಾರ ತುಂಬಿದೆ
ಭ್ರಾಂತಿಯಿಂ ಹುಡುಕುವೆವು ಸುಖವಂ
ಶಾಂತಿಯೆಷ್ಟೆಷ್ಟಿಲ್ಲ ಮನಸಿಗೆ ಹೆಚ್ಚು ದಗದಗಿಯು
ಸಂತಸದಿ ಸನ್ಯಾಸಗೊಂಡುರೆ
ಅಂತರಂಗದಿ ಜಪವನೆಸಗುತೆ
ಮುಂತೆ ಸಾಗಲು ಶಾಂತಿ ತಾ ದೊರಕೊಳ್ಳದಿರದೇನು? ೧೨

ಒಬ್ಬನಿರ್ದೊಡೆ ಚಿಂತೆ ಮದುವೆಯು
ಇಬ್ಬರಾದರೆ ಚಿಂತೆ ಮಕ್ಕಳ
ತಬ್ಬಿಕೊಳ್ಳಲು ಮಕ್ಕಳಾದೊಡೆ ಬಡತನದ ಚಿಂತೆ
ಹಬ್ಬ ಹುಣ್ಣಿವೆ ಬರಲು ಚಿಂತೆಯು
ನಿಬ್ಬಣದ ಜನವೆರ್ಚೆ ಚಿಂತೆಯು
ಒಬ್ಬ ಮಗನೂ ಮುಪ್ಪಿನಲಿ ನೋಡದಿರೆ ಬಹು ಚಿಂತೆ ೧೩

ನನಗೆ ಹಿತವಹರಾರು ಜಗದೊಳು
ಜನನಿ ಜನಕರೊ ಆಪ್ತರಿಷ್ಟರೊ ?
ತನುಜ ತನುಜೆಯರೋ ಸಹೋದರರಕ್ಕತಂಗಿಯರೋ ?
ಮನಕೆ ಹೊಳೆಯದು ಯಾರುಯೆಂಬುದು
ಕೊನೆಗೆ ಶ್ರೀ ಗುರುರಾಯನೋರ್ವನೆ
ನನಗೆ ಹಿತಮಂಗೈವನೆಂಬುದ ನಂಬಿ ಬದಿರುವೆ ೧೪

ಲೋಕವೆಂಬುದು ನಾಟ್ಯರಂಗವು
ಬೇಕುಬೇಕಾದವರು ಪಾತ್ರವ-
ನೇಕ ರೀತಿಯೊಳಾಡಿ ಸ್ವಾರ್ಥವ ಸಾಧಿಪರು ನೋಡಾ
ಸಾಕು ಸಾಕೀ ಹಾಳು ಸಂಸ್ಕೃತಿ
ಸ್ವೀಕರಿಸೆ ನೆಮ್ಮದಿಯು ದೊರಕದು
ಬೇಕೆನಗೆ ಸನ್ಯಾಸ ಗುರುವರ ಸಾಕು ಸಂಸಾರ ೧೫

ನಾನೆ ಕರ್ತನು ನನ್ನದೆಲ್ಲವು
ಏನಹಂಕಾರದಲಿ ನುಡಿವೆನೊ !
ನಾನು ಮಮಕಾರಕ್ಕೆ ಪಕ್ಕಾಗಿರುವೆ ಸಂಸ್ಕೃತಿಯೋಳ್
ನಾನು ಸನ್ಯಾಸವನು ಕೊಂಡೊಡೆ
ತಾನಹಂಕೃತಿ ಮಮಕೃತಿಯು ಪೋಣ್
ಮೌನದಾಳ್ವವು ನಿಜವು ದೀಕ್ಷೆಯ ನೀಡು ಗುರುರಾಯ ೧೬

ಪೊಡವಿಯೊಳು ಸಂಸಾರಗ್ರಹವಿದು
ಓಡಿದ ಮೇಲೆಂದೆಂದು ಬಿಡದೈ
ಅಡೆತಡೆಗಳೆಡೆಬಿಡದೆ ಮಾನವಜೀವಿಗಳ ಮೇಲೆ-
ಯೆಡಸಿ ಮನಮಂ ನುಗ್ಗುಮಾಳ್ಪವು
ಮೃಡನ ಧ್ಯಾನಕೆ ವೇಳೆಯೆಲ್ಲಿದೆ ?
ಕಡೆತನಕ ಭವಬಾಧೆ ತಪ್ಪದಿದೆಂಥ ದುರ್ದೈವ! ೧೭

ಆದಕಾರಣದಿಂದೆ ಗುರುವರ
ಮೋದದಿಂ ಸನ್ಯಾಸ ದೀಕ್ಷೆಯ-
ನೀ ದಿನವೆ ಕೊಟ್ಟೆನ್ನನುದ್ಧರಿಸೆಂದು ಪೊಡಮಟ್ಟು
ಕಾದಿಹನು ಗುರುವರನ ಆಜ್ಞೆಯ
ಹಾದಿಯನು ತಾ ಸೋಮಶೇಖರ
ಸಾಧುವರ್ಯರು ಕೆಲ ನಿಮಿಷ ಸಲ ಮೌನವಾಗಿರ್ದು ೧೮

ಸೋಮಶೇಖರನಾಡಿದಾ ನುಡಿ
ಪ್ರೇಮದಿಂ ನೆರೆ ಬಗೆದು ಪೇಳ್ದರು
ಭೂಮಿಯೊಳ್ ಸುಳ್ಳಲ್ಲ ಸಂಸಾರವಿದು ಕನಸಲ್ಲ
ಸೋಮಧರನಾಜ್ಞೆಯೊಳು ಸರ್ವವು
ನೇಮದಿಂ ಕೊನೆಗೊಳ್ವುದಂತ್ಯದಿ
ಈ ಮಹೀತಳದಲ್ಲಿ ದೃಶ್ಯಕೆ ಮಿಥ್ಯವೆಂಬುವರೇ ? ೧೯

ಶರಣ ಬಸವಾದಿಗಳು ಸಂಸೃತಿ-
ದೊರೆದರೇಂ ? ಸಂಸಾರದೊಳ್ತಾ-
ವಿರಿಸಿದರು ವರಭೋಗ ಮೋಕ್ಷವ ಮಾರ್ಗದರ್ಶನಕೆ
ಬರಿದೆ ನೀನೇತಕ್ಕೆ ತೊರೆಯುವೆ ?
ವಿರತಿಯಿಂ ನಿನಗೇಂ ಪ್ರಯೋಜನ ?
ಕೊರತೆ ನಿನಗೇಂ ಬಂದಿಹುದು ಸಂಸಾರ ತ್ಯಜಿಸಲ್ಕೆ ? ೨೦

ಹಿಂದಿನಾ ಋಷಿವರರು ವನದೊಳು
ಸಂದದಿಂ ಸಂಸಾರಗೈದರು
ಮುಂದಮತಿಗಳ ಹಾಗೆ ಸತಿಸುತರನ್ನು ತೊರೆದಿಹರೇ ?
ಇಂದು ನೀಂ ಸಂಸಾರಮಂ ತೊರೆ-
ವಂದವೇನಿದು ನನಗೆ ತಿಳಿಯದು
ಕುಂದುಯೆಲ್ಲಿದೆ ಬಾಳ್ವೆಗೈದೊಡೆ ಮಹಿಮರಂದದಲಿ ೨೧

ಗಂಡ ತಾ ಸುಳ್ಳಲ್ಲ ತನ್ನಯ
ಹೆಂಡತಿಯು ಸುಳ್ಳಲ್ಲ ಮಕ್ಕಳ
ತಂಡವದು ಸುಳ್ಳಲ್ಲ ಬಾಂಧವರೆನಿತು ಸುಳ್ಳಲ್ಲ
ಕಂಡುಕಂಡೂ ಸುಳ್ಳುಯೆಂದೊಡೆ
ಚಂಡಿತನವದು ನ್ಯಾಯವಲ್ಲವು
ಕಂಡರಿದ ಸಂಸಾರಮಂ ಸುಳ್ಳೆಂದು ಸಾಧಿಪರೇ ? ೨೨

ಎಲ್ಲವೂ ಸುಳ್ಳಾದೊಡಲೆ ಜಗ-
ವೆಲ್ಲ ಪುಟ್ಟಿಸಿದಂಥ ದೇವರು
ಸುಳ್ಳು ತಾನಾದಾನು ಸರ್ವವು ಶೂನ್ಯವಾದೀತು
ಎಲ್ಲವೂ ಸುಳ್ಳೆಂಬುದೇ ಪುಸಿ
ಎಲ್ಲ ಸತ್ಯಮನಿತ್ಯಮಾದೊಡು
ಎಲ್ಲವೂ ಸುಳ್ಳೆಂದೊಡೀ ಜಗವೆಂತು ನಡೆದೀತು ೨೩

ಸತ್ಯ ಶರಣರು ಸಂಸ್ಕೃತಿಯೊಳುರೆ
ಸ್ತುತ್ಯಕಾಯಕವೆಸಗಿ ಪ್ರತಿದಿನ
ನಿತ್ಯದಾಸೋಹಿಗಳೆನಿಸಿ ಬಾಳಿದರು ಸೊಗಸಾಗಿ
ಉತ್ತಮರದೀ ಮಾರ್ಗನೀಂ ಪಿಡಿ-
ಯುತ್ತೆ ಭೃತ್ಯಾಚಾರವೆಸಗಲು
ಸತ್ಯ ಸಾಂಬನು ಹೊತ್ತು ಕುಣಿಯುವ ನಿನ್ನ ಸೋಮೇಶ ೨೪

ಹೇಡಿಗಳ್ ಸಂಸಾರಮಂ ಬಿ-
ಟ್ಟೋಡುತಿಹರಾಶ್ರಮಕೆ ಸೋಮನೆ
ಕೇಡುಮಾಡದೆ ಒಳಿತಗೈದೊಡೆ ಸೊಗವು ಸಂಸಾರ
ನಾಡೆ ನೀ ನಾಗರಿಕನಾಗಿಯು
ಮಾಡು ಸಂಸಾರವನು ಸದ್ಗತಿ
ನೀಡುವನು ಶಂಕರನು ಸನ್ಯಾಸದೊಳಗೇನುಂಟು ? ೨೫

ಮಡದಿಮಕ್ಕಳ ರಕ್ಷಿಸುವ ಹೊಣೆ
ಪಡೆದಿರುವೆ ನಿಜವಾಗಿ ಸೋಮನೆ
ಕಡೆತನಕ ನೀನವರ ಕೈಬಿಡಬೇಡವೆಲೆ ಮರುಳೇ
ಮಡದಿಮಕ್ಕಳಬಿಟ್ಟು ಪೋಪರ
ಮೃಡನು ಮೆಚ್ಚನು ಲೋಕ ಮೆಚ್ಚದು
ಪಿಡಿಯೊ ಸಂಸಾರವನು ಸದ್ಗತಿಯುಂಟು ಅದರೊಳಗೆ ೨೬

ನಾಳೆ ಬಪ್ಪುದು ಬರಲಿಯಿಂದೇ
ಬಾಳು ಕಹಿಯಾಗಿರಲಿ ಸೋಮನೆ
ಸೀಳಿಯೊಗೆಯಲಿ ನಿನ್ನ ದೇಹವ ಲೋಕಕಂಟಕರು
ಪಾಳುಗೆಡವಲಿ ನಿನ್ನ ದ್ರವ್ಯವ
ಬೀಳುಗೆಡವಲಿ ಹೊಲ ಮನೆಗಳಂ
ತಾಳಬೇಕೈ ಶರಣರಂದದಿ ಧೈರ್ಯದಿಂದದನು ೨೭

ಜಗವರಿಯೆ ಸಂಸಾರ ದುಃಖವ
ಸುಗಮಗೊಳಿಸಲು ಲಿಂಗತತ್ವವ
ಸೊಗದಿ ಶರಣರು ಬೆಳಗಿಹರು ನಮ್ಮೀಸಮಾಜದಲಿ
ಸುಗುಣಿಗಳ್ ನಿಸ್ವಾರ್ಥಿಗಳ್ಸಲೆ
ಬಗೆದು ಲಿಂಗವನಿರಿಸಿ ದೇಹದಿ
ಜಗವ ಕೈಲಾಸವನು ಗೈದರು ಲಿಂಗಕಳೆಯಿಂದ ೨೮

ಸ್ವಾರ್ಥಮಯವಾದೀ ಪ್ರಪಂಚದಿ
ಅರ್ಥಗಳಿಸುವುದೊಂದೆ ಧ್ಯೇಯವೆ ?
ಸ್ವಾರ್ಥಸಾಧನೆಗಾಗಿ ಭ್ರಷ್ಟಾಚಾರಗೈಯುವರೇ ?
ಅರ್ಥಮಯ ಶಿವಶರಣ ವಚನವ
ಸಾರ್ಥಕಂಗೊಳಿಸಲ್ಕೆ ಸೋಮನೆ
ವ್ಯರ್ಥ ಸನ್ಯಾಸದ ವಿಚಾರವ ತ್ಯಜಿಸು ಮನದಿಂದ ೨೯

ಅರಿವ ಪಿಡಿ ಆಶೆಯನು ಬಿಡು ನೀಂ
ಬರುವ ವಿಘ್ನವಿಪತ್ತುಗಳು ಸಲೆ
ಪರಿದು ಪೋಪವು ನಿಶ್ಚಯಂ ಶಿವಕರುಣ ನಿನಗಕ್ಕು
ಅರಿವ ಹಿಡಿದೇ ಭಕ್ತಿಯನ್ನಾ-
ಚರಿಸು ಪರಸುಖವನ್ನು ಪಡೆಯುವೆ
ಅರಿವು ಭಕ್ತಿಗಳೆರಡು ಕೂಡಲು ಸೊಗಸು ಸಂಸಾರ ೩೦

ವರವಿವೇಕ ವಿರಾಗ ಭಾವವು
ಸರಸ ಭಕ್ತಿಯು ಒಸಗೆಯುಂ ಮೇ-
ಳೈರದೆ ನೀತಿ ಸುಧರ್ಮಶೀಲತೆ ಪ್ರೇಮ ಸಹಕಾರ
ಪರಮ ದಾಸೋಹಂ ಸುಕಾಯಕ-
ವೆರಸೆ ಸಂಸಾರಾರ್ಣವವು ನೆರೆ
ಪರಮ ಶಾಂತಿಯ ತಾಣವಪ್ಪುದದೇಕೆ ಸನ್ಯಾಸ? ೩೧

ಚಿಂತೆಯಂ ನೀನೇಕೆ ಮಾಡುವೆ ?
ಚಿಂತೆಮಾಡಿದೊಡೇನು ಬಪ್ಪುದು ?
ಚಿಂತೆಯಿಂದಲೆ ದೇಹ ಕೃಶವಾಗುವದು ಚೈತನ್ಯಂ
ಚಿಂತೆಯಿಂ ಗಡ ಕುಗ್ಗಿ ಪೋಪುದು
ಸಂತತಂ ಸಚ್ಚಿಂತನೆಯ ನೀ-
ನಂತರಂಗದಿ ಗೈಯುತಿರೆ ಸಂಸಾರ ಸೊಗಸಕ್ಕು ೩೨

ಇರುವನಕ ಹರನಾಮಸ್ಮರಣೆಯ
ತೊರೆಯದಿರು ಪ್ರತಿನಿತ್ಯ ಸೋಮನೆ
ಧರೆಯೊಳಗೆ ಸಂಸಾರವಿದು ಬಹುಸುಗಮಗೊಳ್ಳಲ್ಕೆ
ಹರ ಕರುಣ ಪಡೆಯುವುದೆ ಜೀವನ-
ಗುರಿಯು ಸಂಸಾರದೊಳು ನೋಡಾ
ಅರಿದು ನೀನದ ಚರಿಸು ಪರಸುಖವಪ್ಪುದೈ ನಿನಗೆ ೩೩

ಕಷ್ಟಬಂದಾಗೆಲ್ಲ ಲೋಕವು
ಇಷ್ಟದೇವರ ಸ್ಮರಣಗೈವುದು
ಕಷ್ಟ ಬಯಲಾದೊಡನೆ ಮನಬಲ್ಲಂತೆ ಚರಿಸುವದು
ದುಷ್ಟಮನಸಿನ ಚಪಲತೆಯು ನಾ-
ನೆಷ್ಟು ಬಣ್ಣಿಸಲಯ್ಯ ಸೋಮನೆ ?
ಬಿಟ್ಟು ಬಿಡದಲೆ ಇಷ್ಟ ದೇವರ ನನೆ ಪ್ರಪಂಚದೊಳು ೩೪

ಕೆಲವರಿಗೆ ಸಂಪತ್ತೆ ದೇವರು
ಕೆಲವರಿಗೆ ಹೆಂಡತಿಯೆ ದೇವತೆ
ಕಲವರಿಗೆ ಸೊಗಸಾದ ಹೊಲಮನೆ ತೋಟಪಟ್ಟಿಗಳು
ಕೆಲವರಿಗೆ ಕಾರ್-ರೇಡಿಯೋಗಳು
ಬಲು ಮುದದ ದೇವರುಗಳಾಗಿವೆ
ನಿಲುಕದವರಿಗೆ ನಿತ್ಯಸುಖಸಂಸಾರದಲಿ ಸೋಮ ೩೫

ನೆನೆವುದಂ ಬಿಡಬೇಡ ಶಿವನಂ
ತನುಮನೋಭಾವಕ್ಕೆ ಶಾಂತಿಯು
ಅನವರತ ನೆಲಸುವದು ಸಂಸಾರದೊಳು ದಿಟವಾಗಿ
ನೆನಪು ಘನವಾಗಿರಲು ಶಿವ ತಾ
ನಿನಗೆ ದೃಢವಾದಂಥ ಮನವನು
ಅನುಗೊಳಿಸುವನು ನಂಬು ಸನ್ಯಾಸದೊಳಗೇನುಂಟು ? ೩೬

ಸತಿಪತಿಗಳೊಂದಾಗಿ ಮಾಡುವ
ಅತಿಥಿಸೇವೆಯೆ ಶಿವನ ಸೇವೆಯು
ಅತಿಹಿತದಿ ಗುರುಲಿಂಗಜಂಗಮ ಸೇವೆ ಮಾಡಿದೊಡೆ
ಸುತರು ನಿನ್ನನುಕರಣಮಾಳ್ಪರು
ಸತತ ನಿನ್ನಯ ವಂಶಕೀರ್ತಿಯು
ಕ್ಷಿತಿಯೊಳಗೆ ಬೆಳಗುವದು ಸನ್ಯಾಸದೊಳಗೇನುಂಟು ? ೩೭

ಹರನ ಪೂಜೆಯು ಶರಣಸಂಗವು
ಇರದೆ ಕೇಳುವ ಸತ್ಯಶ್ರವಣವು
ದೊರಕಿದೊಡೆ ಸಾಕಯ್ಯ ಸಂಸಾರದೊಳು ಭಯವಿಲ್ಲ ?
ಕೊರತೆ ಕುಂದುಗಳೇನು ಬಾರವು
ದುರಿತ ದುರ್ಗುಣ ದೂರವಪ್ಪವು
ಸ್ಮರಹರನ ಶರಣರೊಳು ಕಾಲವ ಕಳೆವ ಭಕ್ತರಿಗೆ ೩೮

ಹಿಂದಿನಾ ಶಿವಶರಣರಾಡಿದ
ಚೆಂದಮಾದಾ ಹಿತದ ನುಡಿಗಳ-
ನೆಂದಿಗೂ ಮರೆಯದಲೆ ನೀನಾದರಿಸು ಸಂಸ್ಕೃತಿಯ
ಸಂದ ಶರಣರ ವಚನಚಯದಲಿ
ಇಂದಿಗೂ ಚಿದಮೃತವು ತುಂಬಿದೆ
ಮಂದ ಭಾಗ್ಯನು ನೀನು ಸನ್ಯಾಸಕ್ಕೆ ಹಂಬಲಿಪೆ ೩೯

ಪರಶಿವನ ರೂಪಿಗಳು ಶರಣರು
ಧರೆಯೊಳಗೆ ಬಹು ಪುಣ್ಯಚರಿತರು
ಪರಮ ಸುಖಶಾಂತಿಯನು ಬೀರಿದ ಭಾಗ್ಯಶಾಲಿಗಳು
ನಿರಸ ಸಂಸಾರದೊಳು ಬೆಳಕ-
ನ್ನಿರಿಸಿ ಜನತೆಗೆ ಮಾರ್ಗದರ್ಶನ-
ವಿರದೆ ಮಾಡಿರಲೇಕೆ ಬೇಕಾ ಗೊಡ್ಡು ಸನ್ಯಾಸ ? ೪೦

ವನದೊಳಗೆಯಾಚರಿಸಿ ಜಪತಪ-
ವನು ಮಹಾ ಸನ್ಯಾಸಿಗಳು ಸಲೆ
ಕೊನೆಗೆ ಮೋಕ್ಷವ ಪಡೆದರದು ಕೇಳ್ ಸ್ವಾರ್ಥಸಾಧನೆಯು
ಜನಕೆಯದರಿಂದೇಂ ಪ್ರಯೋಜನ ?
ವಿನುತ ಶರಣರು ಜನರ ಮಧ್ಯದೊ-
ನವರತ ತಾವಿದ್ದು ಮೋಕ್ಷವನಿತ್ತರೆಲ್ಲರ್ಗೆ ೪೧

ಬಗೆದೊಡೀ ಜಗದಲ್ಲಿ ಸನ್ಯಾ-
ಸಿಗಳು ಎಷ್ಟಿಹರಯ್ಯ ಸಂಸಾ-
ರಿಗಳು ಎಷ್ಟಿಹರೆಂಬುದಂ ನಾವ್ ಗಣನೆ ಮಾಡಿದೊಡೆ
ಸಿಗುವರತ್ಯಲ್ಪ ಜನ ಸನ್ಯಾ-
ಸಿಗಳು ಸಂಸಾರಿಗಳು ಬಹು ಸಂ-
ನ್ಯಾಗತರು ದೊರೆಯುತ್ತಿರೆ ಸೃಷ್ಟಿಯ ನೇಮ ಮೀರುವರೇ ? ೪೨

ಜಂಗಮನ ಪರಿ ಬೇರೆ ನೋಡಾ
ಜಂಗಮನು ಸನ್ಯಾಸಿಯಲ್ಲವು
ಜಂಗಮನು ಅವಿವಾಹಿತನು ತಾನಾದೊಡೆಯು ಜೀವ-
ರಂಗದೊಳ್ತಾ ನಿಂದು ಲೋಕದ
ತುಂಗ ಸೇವೆಯ ಮಾಡುತಿರ್ಪನು
ಜಂಗಮಗೆ ಸನ್ಯಾಸಿಯೆಂಬರದೆಂಥ ಹುಚ್ಚರಲಾ ೪೩

ಲಿಂಗ ಧರಿಸಿದ ಭಕ್ತವೃಂದಕೆ
ಜಂಗಮನು ತಾ ಕಲಿಸಿಕೊಟ್ಟನು
ಲಿಂಗಿಗಳ್ ತಮ್ಮಂತೆ ವಿಶ್ವಕ್ಕೆಲ್ಲ ಪ್ರೇಮವನು
ಸಂಗಳಿಸಬೇಕೆಂಬ ತತ್ತ್ವವ
ಮಂಗಲಾತ್ಮನು ಭಕ್ತಿಯೆಂದಾ
ಲಿಂಗತತ್ತ್ವಕೆ ಪೆಸರನಿಟ್ಟನು ಭಕ್ತಿ ಕೇವಳವೆ ? ೪೪

ಹಿತದ ಕಾರ್ಯಗಳಾವು ಲೋಕ–
ಕ್ಕಹಿತಕಾರ್ಯಗಳಾವುಯೆಂಬುದ-
ನತಿವಿವೇಕದಿ ತಿಳಿಯುವುದೆ ಸುಜ್ಞಾನವೆಂದರುಹಿ
ಹಿತವಗೈದಹಿತವನೆ ವರ್ಜಿಪ
ಪ್ರತಿರಹಿತ ಸಚ್ಛೀಲ ತತ್ತ್ವವ
ವಿತತಗೊಳಿಸಿದನಯ್ಯ ಜಂಗಮಮೂರ್ತಿ ಸೋಮೇಶ ೪೫

ಜಗಹಿತಕೆ ಸರ್ವಸ್ವವೆಲ್ಲವ
ಸುಗಮದಿಂದರ್ಪಿಸುವ ತ್ಯಾಗವ
ಸೊಗಸಿನಿಂ ಕಲಿಸಿದನು ಜಂಗಮ ಮೂರ್ತಿ ಭಕ್ತರಿಗೆ
ಸೊಗಸು ನೋಡಾ ವೀರಶೈವವು !
ಜಗಕೆ ಭಕ್ತಿ ಜ್ಞಾನ ತ್ಯಾಗದ
ಬಗೆಯ ತೋರಿಸುತಿಹುದು ಶರಣರ ಸಂಸ್ಕೃತಿಯು ನೆವದಿ ೪೬

ಅದರಿನೀಂ ಸನ್ಯಾಸದಾಸೆಯ
ಬದಿಗಿರಿಸಿ ಸದ್ಭಕ್ತನಾಗಿಯೆ
ಹೃದಯ ತುಂಬಿರೆ ಭಕ್ತಿಜ್ಞಾನತ್ಯಾಗ ಸಂಕುಲದಿಂ
ಹದಗೊಳಿಸು ಸಂಸಾರಮಂ ನೀಂ
ಮುದದಿ ಕಾಯಕವೆಸಗು ದಾಸೋ–
ಹದ ಪರಿಯನಾಚರಿಸಿ ಪಡೆ ಸತ್ಕೀರ್ತಿ ಸೋಮೇಶಾ ೪೭

ಎಂದರುಹಿ ಸೋಮೇಶನಿಗೆ ತಾ
ಮುಂದೆ ನಡೆದನು ಬೂದಿಯೋಗಿಯು
ಎಂದಿನಂದದ ತನ್ನ ಕಾಯಕವನ್ನು ಜರಗಿಸಲು
ಸುಂದರದ ನದಿಕೊಳಗಳೆಡೆಯಲಿ
ಅಂದ ಬನಸಿರಿ ಮಧ್ಯದೋಳ್ತಾ
ಬಂದು ನಿಂದನು ಯೋಗಿವರ ಲಿಂಗಾನುಸಂಧಾನಿ ೪೮

ಸ್ವಾಮಿಗಳ್ ಪೇಳಿರ್ದ ತೆರದೊಳು
ಆ ಮಹಾ ಸದ್ಭಕ್ತ ಸೋಮನು
ನೇಮದಿಂ ಸತ್ಕಾಯಕದಿ ದಾಸೋಹಗೈಯುತ್ತ
ಕಾಮ ಕ್ರೋಧಾದಿಗಳ ತೊರೆಯುತೆ–
ಪ್ರೇಮಮಂ ಸರ್ವರೊಳು ಬೆಳೆಸುತೆ
ಸೋಮಶೇಖರ ಕೃಪೆಗೆ ಸಲೆ ತಾ ಪಾತ್ರನಾಗಿಹನು ೪೯

ಸುಗಮ ಸಂಸಾರವನು ತೊರೆಯುತ
ಬಿಗಿತರದ ಸನ್ಯಾಸತಾಳ್ದೊಡೆ
ಜಗವು ತಾ ಹಾಳಪ್ಪುದದರಿಂ ಲೇಸು ಸಂಸೃತಿಯು
ಬಗೆದು ಸಂಸೃತಿಮಹತಿಯಂ ಸಲೆ
ಸೊಗದಿ ನೀವದ ಪಿಡಿವುದೆಂದಾ
ನಿಗಮಮೂರುತಿ ಪೇಳ್ದನುಡಿಯಂ ನಂಬಿ ನಡೆಯೋಣ ೫೦

## ಶಿವಯೋಗ ಮಂದಿರ

ಮುಂದೆ ತಾ ಬೂದೀಶ ಯೋಗಿಯು-
ದೊಂದು ದಿನ ಸುಕಪೋತ ಪರ್ವತ-
ದಂದವಾದ ಮಲಾಪಹಾರಿಯ ಬನಕೆ ಸಹಜದೊಳು
ಬಂದು ಬೂದೀ ಬಸವನಂ ತಾ-
ನೊಂದು ಗಿಡದಡಿ ಸ್ಥಾಪಿಸಿರ್ದನು
ಇಂದಿನಾ ಶಿವಯೋಗಮಂದಿರವೆನಿಪ ತಾಣದಲಿ ೫೧

ಮುಂದೆ ಕೆಲ ಸಂವತ್ಸರಂಗಳು
ಸಂದುಹೋದವು ಕಾಲಗತಿಯಿಂ
ಹಿಂದುಳಿದ ಲಿಂಗಾಂಗಿ ಧರ್ಮವನುದ್ಧರಿಸಲೆಂದು
ಇಂದುಧರನಾಣತಿಯೊಳೋರ್ವನು
ಬಂದನಿಳೆಗವತಾರಿಪುರುಷನು
ಚೆಂದವಾದ ಕುಮಾರ ನಾಮವನಾಂತು ಶಿವಯೋಗಿ ೫೨

ಚಿತ್ತರಗಿಪೀಠದ ಚರಾಧಿಪ-
ನುತ್ತಮನು ಶ್ರೀ ಮಾಂತಯೋಗಿಯು
ಸುತ್ತು ನಾಡೊಳಗಾಗ ಪೆಸರ್ವಡೆದಿರ್ದುದಂ ಕೇಳಿ
ಚಿತ್ತಜಾರಿಯೊಲಿರ್ದ ಯೋಗಿಯ
ಪತ್ತೆಸಾರ್ದವರಡಿಗೆ ವಂದಿಸಿ
ತತ್ತ್ವವೇತ್ತನು ಬೇಡಿಕೊಂಡನು ಶ್ರೀ ಕುಮಾರೇಶ ೫೩

ಪರಮ ಪೂಜ್ಯರೆ, ವೀರಶೈವರು
ತೊರೆದು ಧರ್ಮಾಚಾರಮಂ ಜಗ-
ವರಿಯೆ ಚರಿಪರನಾಢ್ಯತನದಿಂದದಕೆ ಗುರುವರ್ಯ
ವರ ಸಮಾಜಾಧಾರಸ್ತಂಭಗ-
ಳುರುತರದ ಪೀಠಗಳ ಮರಿದೇ-
ವರಿಗೆ ಶಿವಯೋಗಾಶ್ರಮವ ಸಲೆ ರಚಿಸಲೆಳಸಿರುವೆ ೫೪

ಆದ ಕಾರಣದಿಂದ ಯತಿವರ
ಮೇದಿನಿಯೊಳೇಕಾಂತವಾಗಿ-
ದರ್ಾದಿಯಿಂ ಸುಪವಿತ್ರವಾಗಿಹ ಪುಣ್ಯತಾಣವನು
ಆದರಿಸಿ ತೋರಿಸುವುದೆಂದೆನ
ಮೋದದಿಂ ಮಾಂತೇಶ ಯೋಗಿಯು
ಸಾದರದಿ ತಾನೇರಿ ತೇಜಿಯು ಹೊರಟನರಸಲ್ಕೆ ೫೫

ಅಂದು ನಿಬಿಡಾರಣ್ಯವಾಗಿಹ
ಇಂದಿನಾ ಶಿವಯೋಗ ಮಂದಿರ-
ಕಂದದಿಂ ಬಂದಿರಲು ಕಾಣಿಸಿತೊಂದು ಬಿಲ್ವವನ
ನಂದಿ ವಿಗ್ರಹವೊಂದು ವೃಕ್ಷದ
ಮುಂದೆ ಕಟ್ಟೆಯ ಮೇಲೆ ಮಂಡಿಸೆ
ಚೆಂದಪೂದೊಂದಾವು ಮಲಗಿರಲಲ್ಲಿ ಸನಿಹದಲಿ ೫೬

“ಕಾನನದ ಸಿರಿಸೊಬಗಿನೊಪ್ಪುವ
ಈ ನೆಲವು ಸೊಗಸಾದುದೆಂದೆನೆ”
ತಾನು ಹಿರಿಹಿರಿ ಹಿಗ್ಗಿದನು ಶ್ರೀ ಹಾನಗಲ್ಲೇಶ
ಏನು ಚಿತ್ರವೊ ನಂದಿಯಿರುವೆಡೆ-
ಗೇನು ಕಾರಣ ಬಂದು ನಿಂದನೊ
ಜ್ಞಾನಿಗಳ್ ಸಲೆ ಪೇಳ್ವುದೆಂದೆನೆ ಯೋಗಿ ಮಾಂತೇಶ ೫೭

“ಹಿಂದೆಯೊಮ್ಮೆ ಪುಣ್ಯ ತಾಣಕೆ
ಬಂದಿಹನು ಬೂದೀಶಯೋಗಿಯು
ಚೆಂದವಾಗಿಹ ಬನದ ಸಿರಿಯಂ ಕಂಡು ಸಂತಸದಿ
ನಂದಿವಿಗ್ರಹವಾತನೇ ಸಲೆ
ಅಂದು ಸ್ಥಾಪನಗೈದು ಪೋದನು
ಅಂದಿನಿಂದಿಂ ನಂದಿಮೂರ್ತಿಯು ರಾಜಿಸುವುದಲ್ಲಿ ೫೮

ಬೂದಿ ಬಸವೇಶ್ವರನ ಪೆಸರಿಂ-
ದಾದಿಯೋಳ್ಜನ ಕರೆಯುತಿರ್ದರು
ಹಾದಿಕಾರನದೋರ್ವ ಕೊಟ್ಟೂರ್ ಬಸವದರ್ಶನಕೆ
ಹಾದಿಯಿಂದೀ ಹೊರಟಿರಲು ತಾ
ಹಾದಿ ತಪ್ಪೀ ತಾಣಕೈದಿರ-
ಲಾ ದಿನವೆ ತಾ ಬೂದಿ ಬಸವನ ಕಂಡು ನಲಿದಾಡಿ ೫೯

ಈತನೇ ಕೊಟ್ಟೂರು ಬಸವನು
ಈತನೆನ್ನಾರಾಧ್ಯ ದೇವನು
ಈತನನ್ನರಸಲ್ಕೆ ನಾನಾಸತ್ತೆ ಬೇಸತ್ತೆ
ಓತು ತಾನಿತ್ತೆನ್ನ ಸೆಳೆದನು
ಈತನೇ ಪರದೈವವೆಂದತಿ
ಪ್ರೀತಿಯಿಂ ಕುಣಿದಾಡಿದನು ಪುಲಕದೊಳು ಹೊರೆಯೇರಿ ೬೦

ಇದನು ಕಂಡಾ ನೆರೆಹೊರೆಯ ಜನೆ
ಮುದದಿ ತಾವಾ ಬಸವ ಮೂರ್ತಿಗೆ
ಹೃದಯ ಭಕ್ತಿಯು ಸೂಸೆ ಕೊಟ್ಟೂರ್ ಬಸವನಿಂತೆಂದು
ನದಿಯ ಜಲದಿಂ ಪೂಜೆಗೈದರು
ಪದುಳದಾ ಪೆಸರ್ಮುಂದೆ ಹಾಗೆಯೆ
ವಿದಿತವಾಯುತ್ತಿಂದಿಗೂ ಇಂತೆಂದಾ ಪೇಳಿದನು ೬೧

ಪರಮ ಪಾವನೆ ನದಿ ಮಲಪ್ರಭೆ
ಪರಿಯುತಿಹ ಸುಕಪೋತ ಪರ್ವತ-
ಪರಿಸರದಿ ಶ್ರೀ ಪಾಂತಯೋಗಿಯ ಆಜ್ಞೆಗನುಸರಿಸಿ
ಚರವರೇಣ್ಯರು ಹಾನಗಲ್ಲಿನ
ವರವಿರಕ್ತ ಕುಮಾರ ಯೋಗಿಗ-
ಳಿರದೆ ನದಿಯಾ ತಟದಿ ಶಿವಯೋಗಾಶ್ರಮವ ರಚಿಸಿ ೬೨

ವೀರಶೈವಾಚಾರ ಧರ್ಮದ
ಸಾರಮಂ ವಟುಗಳ್ಗೆ ಬೋಧಿಸಿ
ತೋರಿದರು ಲಿಂಗಾರ್ಚನೆಯ ಮೇಣ್ ಯೋಗ ಸಾಧನೆಯ
ಚಾರು ಸತ್ಪಥವನ್ನು ಷಟ್‌ಸ್ಥಲ
ಪಾರಮಾರ್ಥಿಕ ತತ್ತ್ವಗಳ ಸಲೆ
ಬೀರಿದರು ಮುಂಬರುವ ಗುರುವಿರತರ್ಗೆ ಸನ್ಮತರು ೬೩

ಗುರು ವಿರಕ್ತಾಶ್ರಮದ ಪೀಠಗ-
ಳಿರದೆ ಹಬ್ಬುತ್ತಿರೆ ಸಮಾಜದಿ
ಪರಮ ಯೋಗಿಗಳವಕೆ ಸತ್ಪಾತ್ರರನು ಅಣಿಗೊಳಿಸಿ
ಮೆರೆಸಿದರು ಜಾಗ್ರತಿಯ ಧರ್ಮದಿ
ನುರಿತ ಯೋಜಕರವರು ಜಾಣರು
ಸುರುಚಿರದ ಲಿಂಗಾಂಗಿ ಧರ್ಮದ ಕಾರಣಿಕ ಪುರುಷರ್ ೬೪

**ಅಂತು ಹನ್ನೆರಡನೆಯ ಸಂಧಿಗೆ ೭೭೩ ಪದ್ಯಕ್ಕೆ ಮಂಗಲಮಸ್ತು**

**ಭದ್ರಂ ಶುಭಂ ಮಂಗಲಂ**

ಶ್ರೀ ಗುರುಬಸವಲಿಂಗಾಯ ನಮಃ

# ಹದಿಮೂರನೆಯ ಸಂಧಿ

## ಶಿಶುನಾಳ

ಸೂಚನೆ- ಮೆರೆವ ಶಿಶುನಾಳಿಂದೆ ಪುಲಿಗೆರೆ-
ವರಗೆ ಮುಂದಕೆ ನವಿಲುಗುಂದಕೆ
ಚರಿಸಿದರು ನರಗುಂದ ಗ್ರಾಮಕೆ ಬೇಗ ಯತಿವರರು

### ವಸಂತ ಕಾಲ

ತರು ಕುಲವು ಚಿಗರೊಡೆದಿಹುದು ಮೇಣ್
ಸುರಭಿ ಪುಷ್ಪಗಳರಳಿ ನಲಿವವು
ಪರಮೆಗಳ್ ಝೇಂಕಾರದಿಂ ಮಕರಂದ ಪೀರುವವು
ಮಿರುಪ ಮಾಮರದಲ್ಲಿ ಕೋಗಿಲೆ
ಸರಸ ಕುಹು ಕುಹು ನಾದಗೈವುದು
ಸರದೊಳರಸಂಚೆಗಳು ಬೆಳ್ಳಗೆ ಕಂಗೊಳಿಸುತಿಹವು ೧

ನವಿಲುಗಳು ನಲಿದಾಡುತಿರ್ದವು
ಕವಿಯ ಹೃದಯವು ಕಣಿಯುತಿರ್ಪುದು
ಭುವನದೊಳ್ಮನ್ಮಥನ ಕಾಟವು ಭರದಿ ಪೆರ್ಚಿಹುದು
ಸವಿಗನಸ ಕಾಂಬುವರು ಮನದೊಳು
ಯುವಕರಾಗಿಹ ನಲ್ಲ ನಲ್ಲೆಯ-
ರವಿರತಂ ಕೊರಕೊರಗಿ ಸಣ್ಣಾಗಿಹರು ವಿರಹಿಗಳು ೨

ಪರಿಯುವವು ತಿಳಿನೀರ ನದಿಗಳು
ಮಿರುಗುವದು ಮೇಲ್ ನೀಲಗಗನವು
ಸರಗಳತಿ ರಮಣೀಯಮಪ್ಪವು ಕಮಲ ಪಂಕ್ತಿಯಲಿ
ತರತರದ ಬಣ್ಣದ ಮನೋಹರ
ಸುರ ಕುಸುಮ ಸೌಂದರ್ಯವಿಡಿದಿದೆ
ಧರಣಿ ಪಸಿರುಡಿಗೆಯಲಿ ಕಣ್ಣಿಗೆ ಶೋಭೆ ನೀಡುವದು ೩

ಮುಂದೆ ಶ್ರೀ ಬೂದೀಶಯೋಗಿಯು
ಬಂದು ಶಿಶುನಾಳಿಂಗೆ ಪ್ರೇಮದಿ
ಚೆಂದದಿಂ ಹಜರತ್ ಶರೀಫರ ಭೆಟ್ಟಿಯಾಗಲ್ಕೆ
ಸಂಧಿಯಿಂ ಕಾಯುತಿರೆ ಶಿಷ್ಯರ
ವೃಂದದೊಳ್ಕುಳಿತಾ ಶರೀಫರು
ಸುದಸಿಂಹಾಸನವನೊಂದಣಿಮಾಡತೊಡಗಿದರು ೪

ಇದನು ಕಂಡಾ ಶಿಷ್ಯವೃಂದವು
ಮುದವೆರಸಿ ಕೇಳಿದರು ಗುರುವಿಗೆ
ಸದಮಲನೆ ನೀ ಸ್ವಂತಮಾಸನವೇಕೆ ಸರಿಮಾಳ್ಪೆ ?
ಒದಗುವರೆ ಮಹನೀಯರೀ ಘನ
ಸದನಕೋರ್ವರುಯೆಂದು ಅಚ್ಚರಿ–
ಯೊದವಿ ಹೃದಯವು ಸ್ಫುರಣಗೊಂಡಿರೆ ಕೌತುಕವು ಪಡೆ ೫

ಕೇಳಿ ತಾವಿದನಾ ಶರೀಫರು
ಪೇಳಿದರು ಸಂತೋಷದಿಂದಲಿ
ಕೇಳಿರೀ ನಮ್ಮಾಲಯಕೆ ಶಿವಯೋಗಿ ಬರುತಿಹನು
ಭಾಳಲೋಚನರೂಪಸನಾತನು
ಏಳು ಜನ್ಮಕೆಸಿಗದ ದರ್ಶನ
ಮೇಳುಗೂಡಿಹುದಿಂದು ಸಲೆ ನಾವೆಲ್ಲ ಧನ್ಯರಲಾ ೬

ಇದಿರುಗೊಂಡಾ ಶಾಂತಮೂರ್ತಿಯು
ಸಾದರದಿ ಬರಮಾಡಿಕೊಂಡಾ
ಪಾದಪೂಜೆಯ ಸದನದೊಳ್ಸಲೆ ಮಾಡಿ ಸುಖಿಸೋಣ
ಬೂದಿಯೋಗಿಯುಯೆಂಬ ಪೆಸರಂ
ಮೇದಿನಿಗೆ ತಾ ಪೊತ್ತು ತಿರುಗುತೆ
ಮೋದದಿಂ ಸಂತ್ರಸ್ತಜೀವರನುದ್ಧಸುರಿತಿಹನು ೭

ಊರ ಕೊಳದಡಿಯಲ್ಲಿ ಯೋಗಿಯು
ಮಾರಹರನೆಂಬಂತೆ ಕುಳಿತುದ
ಸಾರ ಭಕ್ತ ಸಮೇತ ಸಾಬರು ಕಂಡು ಸಂತಸದಿ
ಭೂರಿ ವಿನಯದಿ ಪಾದಕೆರಗುತೆ–
ಕೋರಿ ತಮ್ಮಾಲಯಕೆ ಬರವನು
ಮೀರಿದುತ್ಸಾಹದೊಳು ಕೊಂಡೊಯ್ದಿಹರು ಭವನಕ್ಕೆ ೮

ಬೂದಿಯೋಗಿಯ ದಿವ್ಯನೆಲೆಗಿಹ
ಪಾದಪೂಜೆಯ ಮಾಡಿ ಸ್ತೋತ್ರವ
ಮೋದದಿಂ ಸಲೆ ಪಾಡಿ ಮಂಗಲ ನೀಡಿ ತಣಿದಿಹರು
ಮೇದಿನಿಯೊಳೀತನೆ ಜಗದ್ಗುರು-
ವಾದ ಭವಸಾಗರವ ದಾಟಿಸ-
ಲಾದಿ ಜಂಗಮನಾದನೆಂದುರೆ ಹಾಡಿ ಹರಸಿದರು ೯

ಉಸುರಿದನು ಶಿಶುನಾಳಧೀಶನು
ಅಸಮ ಮಹಿಮಾಶಾಲಿ ಯೋಗಿಯು
ವಸುಧೆಯೊಳ್ತಾ ಬಂದು ಬೆಳಕಂ ತಂದ ಗುರುವರನು
ಬಸವಳಿದು ಬಿಸುಸುಯ್ವ ಜನತೆಗೆ
ಪೊಸ ಕಳೆಯ ತಾನಿತ್ತು ನಿಂದನು
ಹಸನಗೈದನು ಅವರ ಬಾಳನು ಲೋಕಹಿತಕರ್ತ ೧೦

ಗುರುವು ಬಂದನು ಹರನು ಬಂದನು
ಚರನು ಬಂದನು ಯೋಗಿ ಬಂದನು
ವಿರತ ಬಂದನು ಬೂದಿ ತಂದನುಯೆಂದು ಕುಣಿದಾಡಿ
ಪರಮ ಯೋಗಿಯ ಘನತೆಯಂ ಸಲೆ
ನೆರೆದ ಭಕ್ತಜನಕ್ಕರುಹಿ ಮಿಗೆ
ಹರುಷವಾರಿಧಿಯಲ್ಲಿ ಮಿಂದನು ಶರಣ ಶಿಶುನಾಳ ೧೧

ನೋಡಿದನು ಸರ್ವರನು ಪ್ರೇಮದೊ-
ಳಾಡಿದನು ಅವರೊಡನೆ ಮುದದಿಂ
ನಾಡೆ ಶರಣ ಶರೀಫರೌದಾರ್ಯವನು ಕೊಂಡಾಡಿ
ಹಾಡಿ ಹರಸಿದನೆಲ್ಲರನು ತಾ-
ನಾಡುತಾಡುತ ಮಾಯವಾದನು
ಕೂಡಿದಾ ಜನರೆಲ್ಲರಚ್ಚರಿಗೊಂಡು ನಿಂದಿರಲು ೧೨

## ಪುಲಿಗೆರೆ

ಪುಲಿಗೆರೆಗೆ ಶಿವಯೋಗಿ ಬಂದನು
ಲಲಿತಮಾದುಪವನದಿ ನಿಂದನು
ಸಲೆ ಶಿವಾಲಯದಲ್ಲಿರುವ ಶ್ರೀ ಸೋಮನಾಥೇಶ
ನಲವಿನಾ ಯೋಗಿಯನು ಕಾಣಲು
ಒಲುಮೆಯಿಂ ಪ್ರೇರಣೆಯನಿತ್ತಿರೆ
ಮಲಹರನು ಬೂದೀಶನಲ್ಲಿಗೆ ಬಂದನಾತುರದಿ ೧೩

ತೆರೆದಿರಲು ದೇಗುಲದ ಬಾಗಿಲು
ತರಹರದೊಳೊಳವೊಕ್ಕು ಲಿಂಗಕೆ
ಶರಣು ಶರಣೆಂದೆನುತಲಲ್ಲಿಯ ಕಂಬದಾಸರಕೆ
ಒರಗಿ ಮಂಡಿಸಿ ಲಿಂಗಧ್ಯಾನದೊ-
ಳಿರುತಿರಲು ಮಂದಿರದ ಅರ್ಚಕ-
ನರಿಯದೀತನ ನೋಡಿ ಕೆರಳಿಂತೆಂದರಾ ಕ್ಷಣದಿ ೧೪

ಆರು ನೀಂ ಬೈರಾಗಿ ಇಲ್ಲಿಂ
ಸಾರುಗುಡಿಯಪವಿತ್ರಗೊಳಿಸಿದೆ
ದೂರ ಸರಿ ನಿಂ ಬ್ರಾಹ್ಮಣೇತರರಿಲ್ಲಿ ಬರಬಹುದೆ?
ಧೀರಯೋಗಿಯು ಕೇಳಿಯಾ ನುಡಿ
ಸಾರಿದನು ಅಲ್ಲಿಂದೆ ಹೊರಗಡೆ
ಊರ ಸನಿಹದಗಸ್ತ್ಯತೀರ್ಥದ ಕಡೆಗೆ ಮನಸೊಂದು ೧೫

ಮಿಂದು ತೀರ್ಥದಿ ಮಂತ್ರ ಜಪಿಸುತೆ
ಸಂದ ಮಾಮರದಡಿಯೆ ಪೂಜಾ-
ನಂದ ಸಂಭ್ರಮದಲ್ಲಿ ಮೈಮರೆದವರು ಕೇಳಿತಿಹರು
ಬಂದು ಪೂಜಾರಿಗಳು ಲಿಂಗಕೆ
ಚಂದದಿಂದಭಿಷೇಕ ಗೈಯಲು
ಮುಂದಿರುವ ಕೊಡವೆತ್ತೆ ಜಲಮೊಷ್ಟೈಷ್ಟುಯಿಲ್ಲದಿರೆ ೧೬

ಬೆರಗುವಟ್ಟರು ಬೆರಳು ಕಚ್ಚುತೆ
ಅರಿಯಬಾರದು ಯೋಗಿ ಲೀಲೆಯ
ಮರವು ಅಜ್ಞಾನದೊಳು ಮುಳುಗಿದರಾಗ ಭಯಗೂಡಿ
ಉರಿವ ದೀಪವು ನಂದಿ ಹೋಯಿತು !
ಧರಿಪ ಹೂಪತ್ರಿಗಳು ಕಾಣವು
ಹರಹರಾ ನೀನೇನನಿಷ್ಟವತಂದೆಯೆಂದೆನುತೆ ೧೭

ಮನದಿ ಗಾಬರಿಗೊಂಡು ಗ್ರಾಮದ
ಜನಕೆ ತಿಳಿಸಿದರಿದನು ಶೀಘ್ರದಿ
ಜನರು ಅತ್ಯಾಶ್ಚರ್ಯವೊಂದಿದರಿದನು ಸಲೆ ಕೇಳಿ
ಘನಮಹಿಮ ಸೋಮೇಶನಾದಿನ
ಕನಸಿನೊಳ್ಬಂದೋರ್ವ ಭಕ್ತನ
ಮುನಿದಿಹನು ಬೂದೀಶಯೋಗಿಯು ಬೇಗ ಕರೆತನ್ನಿ ೧೮

ಆತನಲ್ಲಿಗೆ ಬಂದು ಪೂಜೆಯು-
ನೋತು ಗೈಯಲು ಕ್ಷೇಮವಪ್ಪುದು
ಪ್ರೀತಿಯಿಂ ಭಕ್ತರುಗಳೆಲ್ಲರು ಕೂಡಿ ಕರೆತನ್ನಿ
ಈ ತೆರದಿ ತಾ ಕಂಡ ಸ್ವಪ್ನವ-
ನಾತನಾಗಳೆ ಪೇಳೆ ಜನರಿಗೆ
ಪೂತ ಶ್ರೀ ಬೂದೀಶನೆಡೆಗೈದಿಹುದು ಜನವೆಲ್ಲ ೧೯

ಪರಮನಡಿದಾವರೆಗೆ ಭಕ್ತಿಯೊ-
ಳೆರಗಿ ಕ್ಷಮೆಯಂ ಬೇಡಿ ವಿನಯದಿ
ಕರುಣಿಪುದು ದೇವಾಲಯಕೆಯೆಂದರ್ಚಕರು ಬೇಡೆ
ಹೊರಟನಲ್ಲಿಂ ಮೇಳದೊಂದಿಗೆ
ಗುರುವರನು ಸೋಮೇಶನಲ್ಲಿಗೆ
ಚರಣ ತೀರ್ಥಪ್ರಸಾದಮಂ ನೀಡಿದನು ಸರ್ವರಿಗೆ ೨೦

ಪಿಡಿದನೇಂ ಮನದಲ್ಲಿಯರ್ಚಕ-
ರಾಡಿದಾ ಅಪಮಾನವಚನವ
ಗಡನೆ ಕ್ಷಮಿಸಿದನವರ ತಪ್ಪನು ನೆರೆ ದಯಾಘನನು
ಪೊಡವಿಯೊಳ್ಮಿಗಿಲೆನಿಪ ಯೋಗಿಯ
ತಡವಿದವರಿಗೆ ಶ್ರೇಯವಪ್ಪುದೆ ?
ಕಡೆಗೆಯಡಿಗೆರಗಿರ್ದರನುತಾಪದೊಳು ಮಿಗೆ ಬೆಂದು ೨೧

ಸೋಮನಾಥನ ಪೂಜೆಯಂ ಸಲೆ
ಪ್ರೇಮದಿಂದೆಸಗಲ್ಕೆ ತ್ವರಿತದಿ
ಸ್ವಾಮಿ ಬೂದೀಶ್ವರನು ಪೂಜಾರಿಗಳಿಗರುಹಿದನು
ನೇಮದಂದದಿ ಜಲಭಸಿತ ಪೂ-
ವಾ ಮಹಾಮಂದಿರದೊಳಿರಬರೆ
ನಾಮಧಾರಿಗಳರ್ಚಕರು ತಾವ್ ಮೌನದಿಂದಿರಲು ೨೨

ಗುರುವರನು ತಾ ಪೇಳ್ದನವರಿಗೆ
ಮರುಳರೈ ನೀವರ್ಚಕರು ದಿಟ
ಜರೆಯುವಿರಿ ಜಾತ್ಯಂಧಕರು ನೀವನ್ಯಮತದವರ
ಹರನು ನಿಮ್ಮಯ ಸೊಕ್ಕ ಮುರಿಯಲು
ಮರೆಯ ಮಾಡಿಹನೆಲ್ಲವಸ್ತುಗ-
ಳಿರದೆ ದೇವರ ದರ್ಶನಕೆ ಸರ್ವರನು ಬರಮಾಡಿ ೨೩

ಎನಲು ಡಂಗುರ ಹೊಯ್ಸಿದರು ಗಡ
ಜನರು ನಾನಾ ಕುಲದವರು ದರು-
ಶನಕೆ ಬಂದಾ ದೇವರೆದುರಿಗೆ ನಿಂದರಳ್ತಿಯಲಿ
ವಿನುತ ಯತಿವರ ಪೇಳ್ದನರ್ಚಕ-
ರನು ಕುರಿತು ಸಾಗಿಸಿರಿ ಪೂಜೆಯ
ಚಿನುಮಯನು ಸಾಮಗ್ರಿಯೆಲ್ಲವನೀವನೆಂದೆನಲು ೨೪

ಹರನಿಗತಿ ಸಂತೋಷವಾಯಿತು
ಬರಿಯ ಕುಂಭವು ಜಲದಿ ತುಂಬಿತು
ತರತರದ ಹೂಪತ್ರಿಗಳು ಸಲೆ ಸಿದ್ಧವಾಗಿಹವು
ಉರಿವ ಮಂಗಳ ದೀಪ ಬೆಳಗಿತು
ಹರುಷದಿಂ ಪೂಜಾಮಹೋತ್ಸವ-
ವೆರಚಿದರು ಪೂಜಾರಿಗಳು ಮುದಗೊಳ್ಳೆ ಜನಮನವು ೨೫

## ನವಿಲುಗುಂದ

ಒಂದು ದಿವಸು ನವಿಲುಗುಂದದ-
ಸಂದ ಭಕ್ತರು ಬಂದು ಯೋಗಿಯ
ನಂದದಿಂದಭಿನಮಿಸಿ ಪಾದಕೆ ಬೇಡಿಕೊಂಡಿಹರು
ಬಂದು ನಮ್ಮಯ ಗ್ರಾಮಕೆಲೆ ನೀ-
ವಿಂದು ನಮ್ಮನ್ನುದ್ಧರಿಸಬೇ-
ಕೆಂದೆನಲು ಭಕ್ತರ ಹಿತಾರ್ಥಕ್ಕಲ್ಲಿ ಪೋಗಿಹರು ೨೬

ಅಲ್ಲಿ ನಿತ್ಯಶಿವಾನುಭವವ-
ನ್ನೆಲ್ಲರಿಗೆ ಬೋಧಿಸುತ ಕಾಲವ-
ನಲ್ಲಿಯೇ ಕಳೆಯುತ್ತಿರಲ್ಕಾ ವೂರೊಳಿರುವಂಥ
ಚೆಲ್ವ ಪೇಟೆಯ ಸೆಟ್ಟರಾಮನೆ-
ಯಲ್ಲಿರುವ ಗಂಗಮ್ಮನೆಂಬಳು
ಎಲ್ಲ ಸ್ವಾಮಿಯ ಲೀಲೆಗಳ ತಾ ಕೇಳಿ ಬಂದಿಹಳು ೨೭

ಹುಟ್ಟುಗುರುಡಿಯು ಕಣ್ಣು ಪಡೆಯಲು
ಮೊಟ್ಟ ಮೊದಲೊಳೆಯೆದ್ದು ನಸುಕಿನೊ-
ಳಿಷ್ಟಮೂರ್ತಿಯ ಬೂದಿಯಂಗಳ ಕಸವ ಗುಡಿಸುವಳು
ಇಟ್ಟ ಕೈಯನ್ನಾಡಿಸುತೆ ತಾ
ತುಟ್ಟ ತುದಿವರೆಗುಡುಗುತಿರುವಾ
ಹುಟ್ಟು ಗುರುಡಿಯನೊಂದು ದಿನ ಬೂದೀಶ ನೋಡಿದನು ೨೮

ಯಾರು ನೀನೆಲೆ ತಾಯೆ ನಸುಕಿನೊ
ಳಾರಿಗೂ ತಿಳಿಗೊಡದೆ ಕಸವನು
ಮೀರಿ ಜಾಗ್ರತೆಯಿಂದ ಗುಡಿಸುವಿ ಭಕ್ತಿಭಾವದಲಿ
ಕಾರಣವದೇಂ ಪೇಳು ತಾಯಿಯೆ
ಮಾರಹರ ಕೃಪೆಯಪ್ಪುದೌ ನಿನ-
ಗಾರು ನೀಂ ? ಕಸಗುಡಿಪ ಕಾರಣವೇನು ಪೇಳಮ್ಮಾ ೨೯

ಆಗಲಾಕೆಯು ನಮಿಸಿ ಯೋಗಿಗೆ
ಶ್ರೀ ಗುರುವೆ ನಾ ಹುಟ್ಟುಗುರಡಿಯು
ರಾಗದಿಂ ತವ ಮಹಿಮೆಯಂ ಸಲೆ ಕೇಳಿ ಬಂದಿಹೆನು
ಯೋಗಿಸೇವೆಯ ಮಾಡಿದೊಡೆ ನನ-
ಗೀಗ ಕಂಗಳು ಬರ್ಪವೆಂಬುವ
ಭೋಗದಾಶೆಯೊಳಿಲ್ಲಿ ಕಸಮಂ ಗುಡಿಸುತಿರ್ದಪೆನು ೩೦

ಎನಲು ಪೇಳ್ದನು ಯೋಗಿಯಾಕೆಗೆ
ನಿನಗೆ ಶಿವನಿತ್ತಿಲ್ಲ ದೃಷ್ಟಿಯ
ನನಗೆ ಶಿವಸೃಷ್ಟಿಯನು ಮೀರಲು ಬಾರದೌ ಮಗಳೇ
ತನುವ ಸವಿಸಿದೆಯಮ್ಮ ಸೇವೆಯೊ-
ಳನುದಿನಂ ನೀಂ ಪುಣ್ಯವಂತಳು
ನಿನಗೆ ಕಣ್ಣನ್ನೀಯದಿರೆ ಸಲೆ ಕುಂದು ನನಗಹುದು ೩೦

"ಆದ ಕಾರಣದಿಂದೆ ಸಾಧ್ವಿಯೆ
ಮೋದದಿಂ ಕಣ್ಣೊಂದನೀಯುವೆ
ಆದಿಯಿಂ ಕುರುಡಾದ ಕಣ್ಣೊಂದಿರಲಿ ಮೊದಲಂತೆ"
"ಹೋದೊಡೂ ಕಣ್ಣೆರಡು ಹೋಗಲಿ
ಹೋದ ಕಣ್ಣೊಂದೇ ಬರಲಿ ಗುರು-
ಪಾದಮಂ ನಾಂ ನೋಡಿ ನಲಿಯುವೆ ಸಾಕು ಯೋಗೀಂದ್ರ" ೩೧

ಎಂದೆನಲು ಗಂಗಮ್ಮನಾಕ್ಷಣ
ಬಂದಿಹುದು ಕಣ್ಣೊಂದು ತಾ ಮನ-
ದಂದು ನೋಡಿದಳಾ ಯತೀಶ್ವರನನ್ನು ಕಣ್ತುಂಬ
ಮಂದನೆಯ ಪುಲಿಸಿಂತು ನುಡಿದಳು
ತಂದೆ ನೀನೆನಗಿತ್ತೆ ದೃಷ್ಟಿಯ-
ನೆಂದಿಗೂ ನಾಂ ಮರೆಯೆ ನಿಮ್ಮುಪಕೃತಿಯ ಗುರುರಾಯ ೩೩

ಇಂದಿನಿಂ ನಾಂ ಮಠದ ಸೇವೆಯ-
ನಂದದಿಂ ಗೈಯುವೆನು ತಂದೆಯೆ
ಚಂದದಿಂ ಸ್ತ್ರೀವೇಷವುಳಿದಾಂ ಪುರುಷವೇಷದಲಿ
ಎಂದು ಮಠದಂಗಣವ ಗುಡಿಸುತ
ಬಂದ ಭಕ್ತಾದಿಗಳ ಸೇವಿಸು-
ತಂದದಿಂ ಕಾಲವನು ಕಳೆದಳು ಮುಪ್ಪಡಸುವನಕ ೩೪

ಪರಶರಣೆ ಗಂಗಮ್ಮನನುದಿನ
ಗುರುಚರರ ಸೇವೆಯನು ಗೈಯುತೆ
ಮಿರುಪಲಿಂಗದೊಳೊಂದುದಿನ ತಾಸೈಕ್ಯವಾಗಿಹಳು
ಅರಿದವಳ ಘನಭಕ್ತಿಭಾವವ
ನೆರೆದು ದೈವವು ಮಠದೊಳಲ್ಲಿಯೆ
ಶರಣೆಯಾ ಸ್ಮರಣಾರ್ಥ ಗದ್ದುಗೆಯನ್ನು ರಚಿಸಿದರು ೩೫

ಬೂದಿಯೋಗಿಯ ಬೂದಿಮಹಿಮೆಯು
ಮೇದಿನಿಗೆ ತಾ ಪೊಸತು ನೋಡಾ
ಬೂದಿ ಮಂತ್ರಿಸಿ ಊದಲಾಕ್ಷಣ ಕಣ್ಣು ಬರಬೇಕೇ !
ಆದಿ ಪ್ರಭುವಿನ ರೂಪನೀತನು
ಮೋದದಿಂದವತರಿಸಿ ಧರೆಯೊಳು
ಬಾಧೆಯಂ ನೀಗುವನು ದಿಟ ಸದ್ಭಕ್ತಜನಗಣದ ೩೬

ಎಂದು ಜನರಾಶ್ಚರ್ಯದಿಂದಲಿ
ನಂದ ಮೂರುತಿಯನ್ನು ಪೊಗಳ್ದರು
ಚಂದದಿಂದವರಲ್ಲಿ ಭಕ್ತಿಯು ವಹಿಸಿ ಸತ್ಪಥದಿ
ಮುಂದೆ ತಮ್ಮಯ ಜೀವನವ ಸಲೆ
ಸುಂದರಂಗೊಳಿಸಿದರು ನೋಡಾ
ಸಂದ ಯೋಗಿಯ ಲೀಲೆ ಜನಹಿತಕಾರಿ ತಾನಲ್ತೇ ! ೩೭

**ನಾಗಲಿಂಗಯತಿ**

ಬೂದಿಯೋಗಿಯು ನವಿಲುಗುಂದಕೆ
ಸಾದರದಿ ತಾ ಬಂದ ಸುದ್ದಿಯು
ಮೋದದಿಂ ಸಲೆ ನಾಗಲಿಂಗಾರೂಢ ತಾ ಕೇಳಿ
ಹಾದಿಯಂ ಕಾಯುತ್ತನಿಂದಾ
ಬೂದಿಯೋಗಿಯು ಬಂದ ಕೂಡಲೆ
ಸೋದರಸ್ನೇಹದೊಳು ಬಿಗಿದಪ್ಪಿದನು ನಲವಿಂದೆ ೩೮

ಯೋಗಿವರ್ಯನು ನಾಗಲಿಂಗನ
ರಾಗದಿಂ ನಿಜಸುತನ ಭಾವದೊ-
ಳೀಗಳುಂ ಸಲಹುತ್ತ ಪ್ರೇಮದಿ ನೋಡಿಕೊಳುತಿಹನು
ನಾಗಲಿಂಗನು ಬೂದಿಯೋಗಿಯ
ರಾಗದಾ ಪಿತನೆಂಬ ಭಾವದಿ
ಸಾಗುತಿರ್ದನು ಪೂರ್ವಜನ್ಮದ ನಂಟುತನವಿಹುದೇಂ? ೩೯

ತಿನಿಸಿ ಪಣ್ಗಳ ಕುಡಿಸಿ ಹಾಲನು
ಜನನಿಯಂದದಿ ಚಿಪ್ಪಿ ಬಡೆಯುತ
ಮನವು ಸಂತಸಗೊಳ್ಳವೋಲುಪಚರಿಸಲಾ ಮೂರ್ತಿ
ತನಗೆಯಿೊತನು ತಂದೆಯೇ ಸರಿ
ಘನ ಮಹಿಮ ಬಹು ಪುಣ್ಯಶಾಲಿಯು
ಎನುತ'ಅಪ್ಪಾ'ಯೆಂದು ಯೋಗಿಗೆ ಕರೆಯತೊಡಗಿದನು ೪೦

ಕುಳಿತೊಡಪ್ಪಾ ನಿಂತೊಡಪ್ಪಾ
ಬಳಿಯೊಳಪ್ಪಾ ದೂರೊಳಪ್ಪಾ
ಬೆಳಗು ಮಧ್ಯಾಹ್ನದೊಳು ಇರುಳೊಳು ಚಳಿಮಳೆಯೊಳಪ್ಪಾ
ಅಳುತಲಪ್ಪಾ ನಗುತಲಪ್ಪಾ
ತೊಳಲಿದೊಡೆ ಬಳಲಿದೊಡೆ ಅಪ್ಪಾ
ಘಳಿಲನಪ್ಪಾಯೆನುತ ಯೋಗಿಯ ಕಾಡುತಿಹನಾತ ೪೧

ಯೋಗಿವರನಾತನನು ಕೂಸಿನ
ಹಾಗೆ ರಮಿಸುತೆ ಬೇಡಿದುದ ಸಲೆ
ರಾಗದಿಂದೀಯುತ್ತೆ ಪ್ರೈದಡವುತ್ತೆ ಮುದ್ದಿಡುತೆ
ಸಾಗುತಿರಲಾ ತಂದೆ ಮಕ್ಕಳ
ಯೋಗಲೀಲೆಯು ಕೆಲವು ದಿವಸಂ
ನಾಗಲಿಂಗೇಶ್ವರನು ಯೋಗಿಯ ಮಹಿಮೆಯುಂ ಜಗಕೆ ೪೨

ತೋರಬೇಕೆಂದೊಂದು ದಿನ ತಾ
ಚಾರುತರದುದ್ಯಾನ ತರುಗಳ
ಸಾರ ಪುಷ್ಪಫಲಾದಿಗಳ ಮಿಗೆ ಹರಿಹರಿದು ಚಲ್ಲಿ
ಊರೊಳಗೆ ತಾ ಪೋಗಿ ಜನರಿಗೆ
ಸಾರಿದನು ಬೂದೀಶಯೋಗಿಗೆ
ಸೇರಿಹುದು ಹುಚ್ಚೊಂದು ಬನ್ನಿರಿ ನೋಡಿರೆಂದೆನುತ ೪೩

ಕರೆದು ತಂದಾ ಜನಸಮೂಹಕೆ
ಹರಿದು ಬಿದ್ದಾ ಪುಷ್ಪಫಲಗಳ
ಕರವ ಮುಂದಕೆ ಚಾಚಿ ತೋರಿಸಿ ಹಾಸ್ಯಮಾಡಿದನು
ಅರೆರೆ! ಯೋಗಿಯ ಆಟ ನೋಡಿರಿ!
ಮರುಳನಾತನದೆಂಥ ಯೋಗಿಯು ?
ಹರಿಹರಿದು ಚಲ್ಲುವರೆ ಮಹಿಮರು ಪುಷ್ಪಫಲಗಳನು ? ೪೪

ಎಂದೆನಲು ಜನ ಕೇಳಿಯುಚ್ಚರಿ-
ಯಿಂದ ಗದ್ದಲವೆಬ್ಬಿಸುತ್ತಿರೆ
ಬಂದನಲ್ಲಿಗೆ ಬೂದಿಯೋಗಿಯು ಗುಡಿಸಲೊಳಗಿಂದ
ಆಂದಚೆಂದದ ಪುಷ್ಪಫಲಗಳು
ಮುಂದೆ ಬಿದ್ದುದ ನೋಡಿ ಮನದೊಳು
ನೊಂದು ನೆನೆದಿದು ನಾಗಲಿಂಗನ ಆಟವೆಂದೆನುತ ೪೫

ಮಂದ ಹಾಸವ ಬೀರಿ ಮೊಗದೊಳು
ನಿಂದ ಜನ ವೃಂದವನು ನೋಡುತ
ಮುಂದೆ ಬಿದ್ದಿಹ ಪುಷ್ಪಫಲಗಳ ಕೊಂಡು ಕೈಯೊಳಗೆ
ಹೊಂದಿಸಲು ತರುಗಳ್ಗೆ ತಕ್ಷಣ
ಹೊಂದಿಕೊಂಡವು ತಮ್ಮ ಸ್ಥಲಗಳ
ಮಂದಿ ಬೆಕ್ಕಸ ಬೆರಗುವಡುತಿರೆ ನಾಗಲಿಂಗೇಶ ೪೬



ಮಹಾದ್ವಾರದ ಮುಂಭಾಗದ ಮಹಾ ವಟವೃಕ್ಷ

ಬೆಂಡು ಬೆತ್ತಾಸವನು ಅಪ್ಪಾ
ಚೆಂಡು ಬೊಗರೆಯು ಗುಂಡು ಗಜಗವ
ಕೊಂಡುಕೊಡು ನನಗೆಂದು ಹಟಮಂ ಮಾಡತೊಡಗಿದನು
ಕಂಡು ಆತನ ಮೊಂಡತನಮಂ
ಚಂಡಿಕಾಧವನನ್ನು ಸ್ಮರಿಸುತ
ತುಂಡು ಜೋಳಿಗೆಯಿಂದವೆಲ್ಲವ ತೆಗೆದು ಕೊಟ್ಟಿಹನು ೪೭

ನೋಡಿ ಯೋಗಿಯ ಲೀಲೆಯಂ ಜನ
ಹಾಡಿ ಹರಸಿದುದಾತನಂ ಸಲೆ
ನಾಡರಿಯೆ ಶ್ರೀ ನಾಗಲಿಂಗನು ಯೋಗಿಯಂ ಹೊಗಳಿ
ಓಡಿಬಂದಪ್ಪಿದನು ತಂದೆಗೆ
ಕಾಡಿದೆನು ನಾ ನಿನಗೆ ಅಪ್ಪಾ
ಕಾಡಿದುದು ಲೇಸಾಗಲಿಲ್ಲವೆಯೆನುತ ತಾ ಪೋದ ೪೮

ಬೂದಿಯೋಗಿಯು ನವಿಲುಗುಂದದಿ
ಬೂದಿ ಬಸವನ ಮೂರ್ತಿಯೊಂದನು
ಮೋದದಿಂ ಭಕ್ತರ ಸಹಾಯದಿ ಸ್ಥಾಪಿಸಿರ್ದಪನು
ಆದಿನಂದಿಯು ವಿಗ್ರಹವ ಜನ-
ವಾದರಿಸಿ ಪೂಜಿಸುತೆ ನಮಿಸುತೆ
ಮೇದಿನಿಯೊಳತಿ ಸೌಖ್ಯದಿಂ ಬಾಳಿದರು ಕಡೆತನಕ ೪೯

## ನರಗುಂದ

ನವಿಲುಗುಂದದ ತೆಂಕಣದ ಕಡೆ-
ಗವರು ಸಂಚರಿಸುತ್ತೆ ಬರುತಿರೆ
ಜವದಿ ಕಾಣಿಸಿತಾಗ ನರಗುಂದೆಂಬ ಸುಗ್ರಾಮ
ಶಿವನರೂಪಿಗಳೂರ ಹೊರಬದಿ
ತವೆ ಮನೋಹರಮಾಗಿ ಕಾಂಬುವ
ನವಕುಸುಮತರುಲತೆಗಳಿಂ ಶೋಭಿಸುವ ತಾಣವನು ೫೦

ಕಂಡು ಹಿರಿಹಿರಿ ಹಿಗ್ಗಿಯಲ್ಲಿಯೆ
ಮಂಡಿಸಿದನಾನಂದಮೂರ್ತಿ ಪ್ರ-
ಚಂಡವಾಗಿರ್ದೊಂದು ವಟುವೃಕ್ಷದ ಕೆಳಗೆ ಮುದದಿ
ಕಂಡ ಸ್ಥಲ ಹೂ ಪತ್ರಿ ಫಲಗಳ
ಮಂಡನದಿ ಪರಿಶೋಭಿಸುತ್ತಿರೆ
ಹೊಂಡವೊಂದೆಡೆಯಲ್ಲಿ ಕಂಗೊಳಿಸಿತ್ತು ಚೆಲ್ವಾಗಿ ೫೧

ಸ್ಥಲವು ನಿರ್ಜನವಾಗಿಹುದು ಸಲೆ
ಬಲು ಪ್ರಶಾಂತವು ಕಾಣುತಿದೆ ದಿಟ
ಮಲಿನತೆಗೆಯೆಡೆಯಿಲ್ಲ ಸುಂದರವಾದ ಬನಸಿರಿಯು
ನಲಿಯುತಿದೆ ಸುತ್ತೆಲ್ಲ ನೋಳ್ಪೊಡೆ
ಕೆಲ ಬಲದಿ ಹಕ್ಕಿಗಳು ಉಲಿವವು
ಮಲಹರನ ವಾಸಕ್ಕೆ ಸೊಗಸಿನ ತಾಣವಾಗಿಹುದು ೫೨

ಆಲದಾ ಮರದಲ್ಲಿ ನೆಲಸಿದೆ
ಕಾಲ ಬ್ರಹ್ಮ ಪಿಶಾಚಿಯೊಂದುಂ
ಬಾಲಯುವಕರ ವೃದ್ಧರಂ ಕೊಲ್ಲುತ್ತ ಪ್ರತಿದಿನವು
ಲೀಲೆಯಿಂ ಮೆರೆದತ್ತು ಮರದೊಳು
ಕಾಲಿಡರು ಸನಿಹದಲಿ ಜನಗಳು
ಲೋಲ ಪರ ಶಿವಯೋಗಿ ತಾನಿದನರಿಯದಲ್ಲಿರ್ದ ೫೩

ದನವ ಕಾಯುವ ಬಾಲಕರು ಮೇಣ್
ಸನಿಹ ಹೊಲದ ಕೃಷೀವಲರು ಗಡ
ವಿನಯದಿಂ ಕೈಮುಗಿದು ಯೋಗಿಗೆ ಬೇಡಿಕೊಂಡಿಹರು
ಮುನಿವರರೆ, ಬೇಡಿಲ್ಲಿ ವಾಸಿಪು-
ದನುವ ಸಾಧಿಸಿ ಬ್ರಹ್ಮರಾಕ್ಷಸ
ಮುನಿದು ನಿಮ್ಮಂ ಕೊಂದು ಹಾಕುವದಿಂದು ರಾತ್ರಿಯಲಿ ೫೪

ಎಂದೆನಲು ಶಿವಯೋಗಿವರ್ಯರು
ಮಂದಹಾಸದಿ ನುಡಿದರವರಿಗೆ
ಕೊಂದು ತಿನ್ನಲಿ ಬ್ರಹ್ಮರಾಕ್ಷಸನಿಂದು ನನ್ನನ್ನು
ಎಂದೊಡಾವರದೊಂದು ದಿನವೀ
ಸುಂದ ದೇಹವು ನಾಶವಪ್ಪುದು
ಇಂದು ರಾಕ್ಷಸ ತಿಂದೊಡಾಂ ಬಹು ಧನ್ಯನಾಗುವೆನು ೫೫

ಕೇಳಿಯೂ ನುಡಿಯನ್ನವರು ಸಲೆ
ಹೇಳಿ ಕೇಳೀ ಮರುಳನೀತನು
ನಾಳೆಯಿವನನ್ನಿಲ್ಲಿ ಕಾಂಬುವ ಭಾಗ್ಯನಮಗಿಲ್ಲ
ಪೇಳಿ ನೋಡುವೆವೂರ ಜನರಿಗೆ
ಕಾಳ ರಕ್ಕಸ ಬಲಿಗೆ ಸಿಲ್ಕಿಹ
ಬೋಳಿ ಜಂಗಮನೆಂದು ಸುದ್ದಿಯ ಮಾಡೆ ಜನ ಬಂದು ೫೬

ಕರ ಮುಗಿದು ಶಿರಬಾಗಿಯಾತಗೆ
ಮರುಕದಿಂ ಬೆಸಗೊಂಡರೀ ಪರಿ
ಚರವರರೆ, ತಾವಿಲ್ಲಿ ವಾಸಿಪುದೆಷ್ಟು ತರವಲ್ಲ
ಬರಿದೆ ಜೀವವ ಕಳೆದುಕೊಂಬಿರಿ
ಹಿರಿಯರೆಂದುಂ ಮರುಳರಪ್ಪರೆ ?
ಬರುವುದೆಮ್ಮಯ ಊರ ಮಠದೊಳು ಸೊಗದಿ ವಾಸಿಪುದು ೫೭

ಎನಲು ಪೇಳ್ದನು ಯೋಗಿವರ್ಯನು
ನನಗೆ ರಾಕ್ಷಸಭಯವದಿಲ್ಲವು
ಮನೆಯು ಮಕ್ಕಳು ಮಡದಿ ಸಂಸಾರವದು ನನಗಿಲ್ಲ
ತನುವ ರಕ್ಷಿಸಿಕೊಳ್ಳಲೇತಕೆ?
ಘನಮಹಿಮ ಶಿವ ಕಾಯ್ವನೆಲ್ಲರ-
ನೆನಿತು ಗಾಬರಿಗೊಳ್ಳದಲೆ ನೀವ್ ತೆರಳಿರೆಂದೆನಲು ೫೮

ಮರಳಿ ನುಡಿಯದೆ ಬಂದ ಜನತತಿ
ಹೊರಟಿಹುದು ಸ್ವಗ್ರಾಮಕಾಕ್ಷಣ
ಗುರುವರರು ಸಲೆ ಜಳಕ ಪೂಜೆಯ ಮಾಡ ತೊಡಗಿದರು
ಕರಕರನೆ ಪಲ್ಗಡಿಯುತಲ್ಲಿಗೆ
ಮರವ ನಡುಗಿಸಿಯಾರ್ಭಟಿಸಿ ಮಿಗೆ
ಕರಿಮೊಗದ ಘನಘೋರ ರಕ್ಕಸ ಬಂದು ನುಡಿದಿಹುದು ೫೯

ಆರು ನೀನೆಲೆ ಪೇಳು ಮಾನವ
ಘೋರ ರಾತ್ರಿಯೊಳೇನ ನಡೆಸಿಹೆ
ಕ್ರೂರನಾದೆನ್ನಯ ಪಸಿವ ಹಿಂಗಿಸಲು ಬಂದಿರ್ಪೆ
ಕೂರಸಿಗೆ ಬಲಿ ನೀಡಿ ರಕ್ತವ
ಹೀರುವೆನು ಎಂದೆನುತೆ ಹೊಡೆಯಲು
ಮಾರಕಾಸ್ತ್ರವು ಬಯಲ ಹೊಡೆದಂತಾಗೆ ಶಿವಯೋಗಿ ೬೦

ಶಾಂತಚಿತ್ತದಿ ಲಿಂಗಪೂಜಾ-
ಕಾಂತಿಯೊಂದಿರೆ ತುಂಬ ಮೊಗದಲಿ
ಭ್ರಾಂತಿಗೊಳ್ಳದೆ ಕುಳಿತಿರಲು ರಾಕ್ಷಸನು ಬೆರಗಾಗಿ
ನಿಂತನಲ್ಲಿಯೆ ಪೂಜೆಯೀಕ್ಷಿಸು-
ತಂತು ರಾಕ್ಷಸವೃತ್ತಿಯಳಿದಿರೆ
ಬಂತು ಪೂರ್ವದ ಜನ್ಮಸ್ಮರಣೆಯು ಜ್ಞಾನಮುಂಟಾಯ್ತು ೬೧

ಹಿಂದೆ ಮಾಡಿದ ಪಾಪವೆಲ್ಲವು
ಇಂದು ಬಯಲಾಗಿತ್ತು ಯೋಗಿಯ
ಸಂದ ದರ್ಶನದಿಂದೆ ಲಿಂಗಾರ್ಚನೆಯ ಕಂಡುದರಿಂ
ಬಂದು ಪುರುಷಾಕಾರದಿಂ ತಾ-
ನಂದು ಯೋಗಿಯ ಪದಕೆ ಪೊಡಮಡೆ
ನಂದಮೂರುತಿ ಕೇಳಿದನು ನೀನಾರು ಪೇಳೆಂದು ೬೨

ನಾನು ನರಗುಂದದ ನಿವಾಸಿಯು
ಹೀನಜನ್ಮವ ಕಳೆದೆ ಹಿಂದಕೆ
ಏನು ಹೇಳಲಿ ಗುರುವೆ ನಾ ಬಹು ಪಾಪಿಯಾಗಿರ್ದೆ
ನಾನು ಘನಸಿರಿವಂತನಾದೊಡು
ದಾನಧರ್ಮವನೆನಿತು ಮಾಡದೆ
ಮಾನಹಾನಿಗೆ ತಕ್ಕಮಾರ್ಗವ ಹಿಡಿದು ನಡೆದಿರ್ದೆ ೬೩

ಪರರ ಸಂಪದ ಸೆಳೆದೆನೈ ನಾಂ
ಪರರ ಹೆಂಡಿರ ಕೆಡಿಸಿದೆನು ಮೇಣ್
ಪರರ ಜೀವವ ಘಾತಮಾಡಿದೆ ಪರರ ನಾಂ ಸುಲಿದೆ
ದೊರೆತ ಪಾಪದ ಧನದ ಆಶೆಯ-
ನಿರಿಸಿಕೊಂಡೇ ಸತ್ತೆನಕ್ಕಟ !
ದೊರೆದುದೆನಗೀ ಬ್ರಹ್ಮರಾಕ್ಷಸಜನ್ಮ ಪಾಪದೊಳು ೬೪

ಗುರುವೆ ತಮ್ಮಯ ದರ್ಶನದಿ ಮೇಣ್
ಪರಮ ಲಿಂಗಾರ್ಚನೆಯ ನೋಟದೊ-
ಳರಿವು ತಾನುದಿಸಿದುದು ಪಾಪವು ನಾಶವಾಗಿಹುದು
ಕರುಣಿಪುದು ನನ್ನನ್ನು ತಾವೆನೆ
ಗುರುಗಳಾತನ ಮಸ್ತಕದಿ ಸಲೆ
ಕರವನಿಟ್ಟಾಶೀರ್ವದಿಸಲವ ಬೆರೆದ ಬಯಲಲ್ಲಿ ೬೫

ಮರುದಿನಂ ಗುರುವರರು ಗ್ರಾಮದ
ನೆರೆಯೊಳಾಗಮಿಸಿರ್ದುದಂ ಜನ-
ರರಿದು ವಿಸ್ಮಿತರಾಗಿಯವರ ಪ್ರಭಾವಮಂ ಹೊಗಳಿ
ಮರಳು ತೊಲಗಿದ ವೃಕ್ಷದಡಿಯೊಳು
ಪರಮಯೋಗಿಯನುಜ್ಞೆಯಿಂದಾ
ಸ್ಮರಣೆಗಾಗಿಯೆ ಬೂದಿಬಸವನ ಸ್ಥಾಪಿಸಿರ್ದಪರು ೬೬

ವರವಿರಕ್ತಪವಾಡಪುರುಷರ
ಚರವರೇಣ್ಯರ ವಿಮಲಚರಿತರ
ಪರಮ ಕರುಣಾಕರರ ಚನಬಸವೇಶ ಸ್ವಾಮಿಗಳ
ದರುಶನಾರ್ಥಿಗಳಾಗಿ ಬೂದೀ-
ಶ್ವರರು ನರಗುಂದದ ಮಠಕೆ ಬರೆ
ಅರಿದವರ ಬರವನ್ನು ಸ್ವಾಮಿಗಳಿದಿರುಗೊಂಡಿಹರು ೬೭

## ನರಗುಂದ ಬಾಬಾಸಾಹೇಬ

ಕರೆದುತಂದವರನ್ನು ಬಹು ಸ-
ತ್ಕರಿಸಿ ಮಠದೊಳು ನಿತ್ಯಲಿಂಗಾ-
ಚರಣೆಯೋಳನುಭಾವಗೋಷ್ಠಿಯೊಳಿರಲು ಸಂತಸದಿ
ದೊರೆಯು ಬಾಬಾಸಾಹೆಬನು ಸಲೆ
ಪರಮಯೋಗಿಯು ತನ್ನ ಗ್ರಾಮಕೆ
ಚರಣವಿಟ್ಟಿಹ ಸುದ್ದಿಯಾಲಿಸಿಯವರ ದರ್ಶನಕೆ ೬೮

ಕುಸುಮಫಲಕಾಯ್ಕಪ್ಪುರಂಗಳ
ಮಿಸುಪ ಪೂಜಾಸಾಧನಂಗಳ
ಅಸಮ ಮಹಿಮರಿಗಾಗಿ ಕಾಣಿಕೆಗಳನು ಕೈಕೊಂಡು
ಎಸೆವ ಪರಿವಾರದೊಳು ಸನ್ನಿಧಿ-
ಗೊಸೆದು ವಂದನಗೈಯಲಾಕ್ಷಣ
ವಸುಧೆಯಾಣ್ಮನೆ ಬಾ ಕುಳಿತುಕೋಯೆಂದು ಪೇಳಿದರು ೬೯

ನನ್ನಯೋಗಕ್ಷೇಮ ಕೇಳದೆ
ನನ್ನನಾಶೀರ್ವದಿಸದೆಷ್ಟುಂ
ನನ್ನಯಾಯುಸ್ಸಂಪದಾರೋಗ್ಯಾದಿಗಳು ಭರದಿ
ಇನ್ನು ಹೆಚ್ಚಲಿಯೆನ್ನದಲೆ ಶ್ರೀ
ಸನ್ನಿಧಿಯು ತಾ ಸುಮ್ಮನಿರುತಿರೆ
ಖಿನ್ನಮುಖನಾಗಿರ್ದನಾ ದೊರೆ ನುಡಿಯದೇನನ್ನು ೭೦

ಬಂದ ಪರಿವಾರದ ಜನಂಗಳು
ಮಂದಭಾಗ್ಯನ ಮನದ ಸ್ಥಿತಿಗತಿ-
ಯಂದವನ್ನರಿವಾಸುಯೋಗಿಪ ಮುಂದೆ ನುಡಿದಿಹರು
ಬಂದಿಹುದೆ ತಪ್ಪಾಯ್ತು ದೊರೆಗಳೆ
ಮಂದಮತಿಯಿವನೆಂಥ ಯೋಗಿಯು
ಬಂದವರು ಯಾರೆಂಬರಿವು ತಾನುಂಟೆಯೊ ಯತಿಗೆ ? ೭೧

ನುಡಿದ ಮಾತನು ಕೇಳಿ ಯೋಗಿಯು
ಒಡನೆ ನುಡಿದನು ಶಾಂತಚಿತ್ತದಿ
ಮೃಡನ ಇಚ್ಛೆಯ ಮೀರುವವರದಾರ್ ಪೇಳು ನೀ ದೊರೆಯೆ
ಪಡೆದ ಹಣೆಬರಹವನು ತಟ್ಟನೆ
ತೊಡೆದುಹಾಕಲದಾರ್ಗೆ ಶಕ್ಯವು ?
ಒಡೆಯರಾ ಹರಿಬ್ರಹ್ಮದೇವೇಂದ್ರರಿಗೆಯುಳವಲ್ಲ ೭೨

ಮೀರಿ ಮೆರೆದಿಹ ನಿನ್ನಭಾಗ್ಯವು
ತೀರಿಬಂದಿದೆ ಕೇಳು ದೊರೆ ನೀಂ
ಯಾರುಮಾಡುವುದೇನು ಇದರೊಳು ವಿಧಿಯ ಲಿಖಿತವದು
ಆರುತಿಂಗಳೊಳೆಲ್ಲ ರಾಜ್ಯವು
ಸೂರೆಹೋಹುದು ತಪ್ಪದೈ ದೊರೆ
ಯಾರ ನೀ ನಂಬಿರುವೆಯವರೇ ನಿನಗೆ ಮುಳುವಹರು ೭೩

ಸೊಗದಿ ಬಾಳಿದ ರಾಷ್ಟ್ರವೆಷ್ಟೋ
ಜಗದಿ ಕಣ್ಮರೆಯಾಗಿ ಹೋಗಿವೆ
ಬಗೆಯೆ ವಿಧಿ ಲಿಖಿತವನು ತಪ್ಪಿಸ ಬಲ್ಲವರ ಕಾಣೆ
ಅಗಚೆಯಾಣ್ಮನು ನೇಮಿಸಿದ ವಿಧಿ
ಜಗವನೇ ಪಲ್ಲಟಿಸುವದು ದಿಟ
ಜಗದೊಳಾವುದು ಸ್ಥಿರವು? ಸರ್ವವು ನಷ್ಟ ಹೊಂದುವದು ೭೪

ಇದಕೆ ಚಿಂತಿಸಬೇಡ ದೊರೆಯೇ
ಮುದದಿ ಧೈರ್ಯವ ತಾಳು ಬಂದುದ–
ಕೆದೆಯುಗೊಟ್ಟಾನಂದದಿಂದನುಭವಿಸು ಫಲವನ್ನು
ಹೆದರಿದೊಡೆ ತಾನಪ್ಪುದೇನೈ ?
ವಿಧಿವಶದಿ ಕಲ್ಯಾಣ ಶರಣರು
ಚದುರಿ ಹೋಪರು ನಾಲ್ದೆಸೆಗೆ ದೊರೆ ನಿನ್ನ ಪಾಡೇನು ೭೫

ಆದಕಾರಣದಿಂದೆ ನಿನ್ನಂ
ಮೋದದಿಂದಾಶೀರ್ವದಿಸದಾಂ
ಪೋದೆನೈ ದೊರೆ ಬೇರೆ ಕಾರಣವಿಲ್ಲವಿದರಲ್ಲಿ
ಕಾದು ಕುಳಿತಿದೆ ವಿಧಿಯು ನಾನದ–
ನೋದಿದೆನು ನಿನ್ನಯ ಮುಖಾಗ್ರದಿ
ಭೇದವುಂಟೇ ನನಗೆ ನಿನ್ನೊಳು ಪೇಳು ನೀ ದೊರೆಯೆ ೭೬

ದೊರೆಗೆಯೀ ನುಡಿ ಸತ್ಯವೆನಿಸಿತು
ಪರಮ ಯೋಗಿಗೆ ನಮಿಸಿಯಾತನು
ತೆರಳಿದನು ಬಹು ಖಿನ್ನ ಮಾನಸನಾಗಿಯರಮನೆಗೆ
ನೆರೆಯ ಪರಿವಾರದ ಜನಂಗಳು
ಬರಿಯ ಬೂಟಾಟಿಕೆಯ ಮಾತದು
ದೊರೆಯೆ ಚಿಂತಿಸಬೇಡೆನುತ ಪರಿಹಾಸವಾಡಿದರು ೭೭

ಯೋಗಿಯೊನುಡಿ ಸತ್ಯವಾಯಿತು
ಬೇಗ ಕುಹಕರು ದೊರೆಯ ವಂಚಿಸಿ
ಪೇಗೆಯುಂ ಹಚ್ಚಿದರು ರಾಜ್ಯಕೆ ಹೊಡಿ ಬಂಡಾಯ
ಯೋಗ ಸಿದ್ಧರು ಜಗದ ಮುಂದಿನ
ಆಗು ಹೋಗುಗಳನ್ನು ಬಲ್ಲರು
ಯೋಗಿಗಳ ನೆರೆ ನಂಬಿ ಬಾಳುವದೊಳಿತು ಜಗದಲ್ಲಿ ೭೮

ನಡೆದ ಬಂಡಾಯಗಳ ತಗ್ಗಿಸಿ
ಒಡೆಯರಾದರು ಆಂಗ್ಲ ಜನಗಳು
ಪಡೆದರಾ ರಾಜ್ಯಗಳ ಸ್ವಾಮಿತ್ವವನುಪಾಯದಲಿ
ಮಡದಿ ಮಕ್ಕಳ ತೊರೆದು ದೊರೆ ತಾ–
ನಡವಿಯಲ್ಲಲಿದಾಡಿ ದುಃಖದಿ
ಕಡೆಗೆ ದುರ್ಮರಣಕ್ಕೆ ಪಕ್ಕಾಗಿಹನು ಹಾ ವಿಧಿಯೇ! ೭೯

ಶರಣರಾ ಘನವನ್ನು ಶರಣರೆ
ಅರಿಯುವರು ಬೇರಾರ್ಗೆ ಸಾಧ್ಯವು ?
ಗುರುವರನ ನಿಲವಂ ಶರೀಫರು ನಾಗಲಿಂಗಾರ್ಯ–
ರರಿದು ಅಪ್ಪಿದರಾತನಾ ನುಡಿ
ಧರೆಯರಿಯೆ ಸಲೆ ಸತ್ಯವಾಯಿತು
ಮೆರೆದ ನರಗುಂದದ ದೊರೆಯ ದುಃಖಾಂತ ಕಥೆಯಿಂದ ೮೦

**ಅಂತು ಹದಿಮೂರನೆಯ ಸಂಧಿಗೆ ೮೫೩ ಪದ್ಯಕ್ಕೆ ಮಂಗಲಮಕ್ಕುಂ**
**ಭದ್ರಂ ಶುಭಂ ಮಂಗಲಂ**

ಶ್ರೀ ಗುರುಬಸವಲಿಂಗಾಯ ನಮಃ

# ಹದಿನಾಲ್ಕನೆಯ ಸಂಧಿ

## ರೋಣ

ಸೂಚನೆ– ರೋಣದಿಂ ಮುಂದಕ್ಕೆ ನರೆಗಲ್
ಮೇಣು ಬಿಂಕದಕಟ್ಟಿ ಹೊಂಬಳ
ಮೇಣಸೂಡಿಗೆ ನಡೆದರೈ ಬ್ಯಾಹಟ್ಟಿ ಗ್ರಾಮಕ್ಕೆ

### ಬೇಸಗೆ

ಬಿಸಿಲ ತಾಪಕೆ ಪಕ್ಷಿಪಶುಗಳು
ಬಸವಳಿದು ಬಾಯ್ಬಿಡುತಲಿವೆ ಜನೆ
ರಸನೆಯಾರಿರೆ ಗಂಟಲೊಣಗಿರೆ ದಾಹ ಹೆಚ್ಚಾಗೆ
ಕಸವಿಸಿಯಗೊಳ್ಳುತಿದೆ ನೀರಿಗೆ
ಪೊಸ ಮಹಾಮರನೆಳಲನಾಸಿಸಿ
ಹಸಿವೆಯಿಲ್ಲದೆ ಜನರು ತಣ್ಣೀರ್ ಕುಡಿಯಲೆಳಸುವರು ೧

ಹುಡಿಯೊಳಗೆ ಕಾಲಿಡಲು ತಕ್ಷಣ
ಸುಡುತಿಹುದು ಉರಿಬಿಸಿಲ ಬೇಗೆಯು
ನಡುಹಗಲ ನೇಸರನು ನೆತ್ತಿಯ ಚುರುಕುಗೊಳಿಸುವನು
ಬಿಡದೆ ಸುರಿವವು ಬೆವರ ಹನಿಗಳು
ದುಡಿಯಲೊಲ್ಲದೆ ಬೈಲು ಹೊಲದೊಳು
ಗಿಡದ ತಂಪಿಗೆ ಮೈಯನೊಡ್ಡಿಹರೈ ಕೃಷೀವಲರು ೨

ಮನೆಯ ಮಾಳಿಗೆಮೇಲೆ ಜನಗಳು
ಮನೆಯ ಕಟ್ಟೆಯ ಮೇಲೆ ಮತ್ತಂ
ಮನೆಯ ಅಂಗಳದಲ್ಲಿ ರಾತ್ರಿಯೊಳೊರಗಿ ಚಡಪಡಿಸಿ
ಮನದಿ ಬೇಸಗೆಯನ್ನು ಶಪಿಸುತೆ
ಕನವರಿಸುತರನಿದ್ರೆಯೊಳ್ತಾವ್
ಕೊನೆಯ ಬೆಳಗಿನ ಜಾವದಲಿ ಸಲೆ ನಿದ್ರೆವೋಗುವರು ೩

ಇಂತ ಬೇಸಗೆಯಲ್ಲಿ ಯೋಗಿಯು
ಸಂತಸದಿ ಜನಸೇವೆಗಾಗಿಯೆ
ಮುಂತೆ ಶಿವ ! ಶಿವ ! ಬಸವನೆನ್ನುತ ಸಾಗಿದನು ನೋಡಾ
ಕಂತುಪರ ಯೋಗೀಂದ್ರಗೇತರ
ಚಿಂತೆ ಜಗದೊಳು ಜನರ ರಕ್ಷಿಪ
ಚಿಂತೆಯೊಂದೇ ಚಿಂತೆ ಬೇಸಗೆ ಗಾಳಿ ಚಳಿ ಮಳೆಯೋಳ್ ೪

ತೊರೆದು ನರೆಗುಂದವನು ಯೋಗಿಯು
ಬರುತಿರಲು ರೋಣಕ್ಕೆ ಮಾರ್ಗದಿ
ಹೊರಟಿಹನು ಕೆಂಚಪ್ಪನೆಂಬವನಾಗಲಾವೂರ್ಗೆ
ಕರೆಯ ತುಂಬಿದ ಗಬ್ಬದೆಮ್ಮೆಯ
ಹೊರಡಿಸಿರೆ ತನ್ನೂರಿಗಾತನು
ಕರುವ ಹಾಕಲು ಮಧ್ಯ ಮಾರ್ಗದೊಳೆಮ್ಮೆ ಮಲಗಿಹುದು ೫

ಹೊರಗೆ ಬಂದವು ಕಾಲುತಲೆಗಳು
ತ್ವರಿತದಿಂದೀಯುವುದು ನಿಜವೆನೆ
ಕರುವನೂರಿಗೆ ಹೊತ್ತುಕೊಂಡೊಯ್ಯುವದಸಾಧ್ಯವಲಾ
ಹರಹರಾ ಮುಂದೇನು ಗತಿಯೆಂ–
ದಿರದೆ ಚಿಂತಿಸುತಿರಲು ಕೆಂಚನು ·
ಗುರುಗಳಲ್ಲಿಗೆ ಸಹಜ ಬಂದರು ಮಾರ್ಗವನುಸರಿಸಿ ೬

ಬಂದ ಯೋಗಿಯ ಪಾದಕೆರಗುತೆ
ನಿಂದು ಕೆಂಚನು ಬೇಡಿಕೊಂಡನು
ತಂದೆ, ಎಮ್ಮೆಯು ಕರುವನೀದೂಡೆ ಪೊರುವುದಾನೆಂತು ?
ಒಂದು ಗಾವುದ ದೂರವಿರ್ಪುದು
ಮುಂದೆ ರೋಣವು ಯಾರು ಗತಿ ನನ-
ಗೆಂದು ದುಃಖದಿ ಬೇಡಿಕೊಂಡನು ಸಲಹುಯೆಂದೆನುತ ೭

ಕತೆಯ ಕೇಳೀ ಯೋಗಿರಾಜನು
ಗತಿಯಿವನದೇನೆಂದು ಮರುಗುತೆ
ಪತಿತ ಮಹಿಷಿಯ ಮೇಲೆ ಹಸ್ತದಿ ಭಸ್ಮಮಂ ತೊಡೆಯೆ
ಆ ತಲೆಯು ಕಾಲ್ಮುದುಡಿಕೊಳ್ಳಲು
ಅತಿ ಚಪಲದಿಂದೆಮ್ಮೆ ನಿಂತಿತು
ನುತಿಸಿ ಯೋಗಿಯ ಮುಂದೆ ನಡೆದನು ಎಮ್ಮೆಯೊಡಗೂಡಿ ೮

ಎಮ್ಮೆ ರೋಣಕೆ ಬಂದು ಈಯಿತು
ನೆಮ್ಮಿ ಯೋಗಿಯ ಮಹಿಮೆಯಿಂ ಸಲೆ
ಒಮ್ಮನದಿ ಸ್ಮರಿಸುತ್ತಲೂರೊಳು ಪೇಳ್ದನೆಲ್ಲರಿಗೆ
ಹುಮ್ಮಸದಿ ಬಂದಲ್ಲಿ ಜನತತಿ
ನಮ್ಮ ಬೂದೀಶ್ವರನ ಪಾದಕೆ
ತಮ್ಮ ವಂದನೆಗಳನು ಸಲ್ಲಿಸಿ ಹಾಡಿ ಹರಸಿದರು ೯

ಕೆಲವುದಿನಮಲ್ಲಿರ್ದು ಯೋಗಿಯು
ಸಲುವ ಸೇವೆಯ ಕೊಂಡು ಭಕ್ತರ-
ನೊಲುಮೆಯಿಂದುದ್ಧರಿಸಿ ಸತ್ಯಪೆದೋರಿ ನಿಂದಿರಲು
ಬಲು ಮುದದಿ ಮಠವೊಂದಕಟ್ಟಿಸಿ
ನೆಲೆಗೊಳಿಸಿದರು ಸ್ಮಾರಕವ ಸಲೆ
ನಲುವಿನಾಸದ್ಭಕ್ತರವರಿಗೆ ಬೂದಿಮಠವೆಂದು ೧೦

## ನರೆಗಲ್ಲು

ಪರಮ ಗುರು ಬೂದೀಶನಲ್ಲಿಂ
ಹೊರಟು ನರೆಗಲ್ಲಿಂಗೆ ಬಂದನು
ವರ ಪತಿವ್ರತೆ ಫಾತಿಮಾಯೆಂಬೋರ್ವ ಮುಸಲಿಮಳು
ಗುರುವಿನಡಿದಾವರೆಗೆ ವಂದಿಸಿ
ಒರೆದಿಹಳು ಭಯ ಭಕ್ತಿಯಿಂದಲಿ
ಗುರುವೆ ನನಗಿನ್ನೆವರಮಾಗಿಲ್ಲೊಂದು ಸಂತಾನ ೧೧

ಕರುಣಿಸುವುದೆನೆ ಯೋಗಿವರ್ಯನು
ವರದ ಜೋಳಿಗೆಯಿಂದೆ ಹೊರದೆಗೆ-
ದೆರಡು ಉತ್ತತ್ತಿಗಳನಾಕೆಯ ಉಡಿಯೊಳಿಟ್ಟೆಂದ
ಕರುಳೆ, ನಿನಗೀರ್ವರು ಸುಪುತ್ರರು
ಕರುಣಿಸುವ ಪರಮಾತ್ಮನಮ್ಮಾ
ಹಿರಿಯ ಮಗುವನ್ನೆನಗೆ ಸಲೆ ನೀನರ್ಪಿಸಲು ಬೇಕು ೧೨

ಪರಮಗುಣಮಣಿ ದಿವ್ಯ ಪುರುಷನು
ಶರಣ ತಾನಾಗುವನು ನಂಬೆಲೆ
ಕಿರಿಮಗನು ನಿನಗಿರಲಿಯಾತನು ಧನಿಕನಾಗುವನು
ಗುರುಗಳಾಡಿದ ನುಡಿಯನಾಲಿಸಿ
ಹಿರಿಯಮಗನನ್ನೀವೆನೆಂದಾ-
ದರಿಸಿ ಪಾದಕೆ ನಮಿಸಿ ಪೋದಳು ಫಾತಿಮಾಸಾಧ್ವಿ ೧೩

ಮುಂದೆಯಾಕೆಗೆ ಗಂಡು ಮಗುತಾ-
ನೊಂದು ಜನಿಸಲು ಹಿಗ್ಗಿಯಾತಗೆ
ಚೆಂದದಿಂದ ಹುಸೇನಸಾಬೆಂದೆಂಬ ಪೆಸರಿಟ್ಟು
ತಂದೆ ತಾಯ್ಗಳು ಬಾಲಲೀಲೆಗ-
ಳಂದದಿಂ ನೋಡುತಿರೆ ಕಂದಗೆ
ಸಂದಿಹೋದವು ಎಂಟು ವರುಷಗಳಾಲಯದಿ ಸೊಗದಿ ೧೪

ಮುಂದೆ ಬಾಲನು ತೊರೆದು ಗೃಹಮಂ
ತುದೆ ತಾಯ್ಗಳ ಮೋಹಮಂ ಮೇಣ್
ಬಂದು ಅಡ್ನೂರೆಂಬ ಗ್ರಾಮದಿ ನೆಲಸಿದನು ನೋಡಾ
ಒಂದು ದಿನ ರೈಲ್‌ಗಾಡಿ ಪೋಪುದ
ನಂದ ಮೂರುತಿ ಕಂಡು ಸಂತಸ-
ದಿಂದೆ ನಿಲ್‌ನಿಲ್ಲೆಂದು ಕೈ ನೀಡುತ್ತಲೊದರಿದನು ೧೪

ಹೊರಟ ಗಾಡಿಯು ನಿಂತು ಬಿಟ್ಟಿತು
ಅರಿಯದೇನುಂ ಡ್ರಾಯ್‌ವ್ಹರನು ಮೇಣ್
ನೆರೆದ ಪ್ಯಾಸೆಂಜರರು ಪರಮಾಶ್ಚರ್ಯವೊಂದಿದರು
ನೆರೆ ಪ್ರಯತ್ನವ ಮಾಡಿದೊಡು ಸಹ
ಸರಿಯದಾಯಿತು ಗಾಡಿ ಮುಂದಕೆ
ಧರೆಗೆ ಚೋದ್ಯವಿದೆಂದು ಜನ ಮಾತಾಡಹತ್ತಿಹುದು ೧೫

ಅನಿತರೊಳಡ್ನೂರ ಶರಣನು
ಸನಿಹದೋಳ್ ಕೈಯೆತ್ತಿ ನಿಂತುದ
ಜನರೊಳೊಬ್ಬನು ನೋಡಿಯೆಲ್ಲರ ದೃಷ್ಟಿ ತಿರುಗಿಸಲು
ಜನರು ಅಡ್ನೂರ್ ಶರಣನಾಟವಿ-
ದೆನುತಲಲ್ಲಿಗೆ ಪೋಗಿಯಾತನ
ವಿನಯದಿಂ ಕರೆತಂದು ಗಾಡಿಯೊಳಿರಿಸಿದರು ನಲವಿಂ ೧೬

ಆಗಲಾತನು ಜನಕೆ ಪೇಳ್ದನು
ಪೋಗುವಾ ನಡಿರಯ್ಯ ಮುಂದಕೆ
ಓೀಗೆ ನುಡಿದಾಕ್ಷಣವೆ ಗಾಡಿಯು ಮುಂದೆ ಸಾಗಿಹುದು
ಚಾಗು ಭಲೆ ಭಲೆ ಭಲೆರೆ ಶರಣನೆ
ಯೋಗಸಿದ್ಧನೆ ನಿನಗೆ ಸರಿಯಾರ್
ಪೋಗುತಿಹ ಗಾಡಿಯನು ನಿಲ್ಲಿಸಿ ಸಾಗಿಸಿದೆ ಧೀರ ೧೭

ಎಂದು ಕೊಂಡಾಡಿದರು ಹರ್ಷದಿ
ಮುಂದೆ ಸಾಬನು ಬೂದಿ ಬಳಿಗೈ-
ತಂದು ಸೇವೆಯ ಮಾಡುತಿರ್ದನು ಭಕ್ತಿಯೊಡಗೂಡಿ
ಒಂದು ದಿನ ಸದ್ಭಕ್ತನೋರ್ವನು
ತಂದುಕೊಟ್ಟನು ಸಾಬರಿಗೆ ಮುದ-
ದಿಂದ ಮಂಚವನದನು ಸಾಬನು ಬೂದಿಗಿರಲೆಂದು ೧೯

ಗುರುವರನ ಹಾವುಗೆಗಳಂ ತಾ-
ನಿರಿಸಿ ಮಂಚದ ಮೇಲೆ ಪ್ರತಿದಿನ
ಸರಸ ಭಕ್ತಿಯೊಳವನು ಪೂಜಿಸಿ ಹರ್ಷಬಡುತಿಹನು
ಶರಣನಾ ಮಂಚವದು ಇಂದಿಗು
ಮೆರೆಯುತಿದೆ ಮಾರುತಿಯ ಗುಡಿಯಲಿ
ಪರಮಭಕ್ತರ ಹಸ್ತದಿಂ ಸಲೆ ಪೂಜೆಗೊಳ್ಳುತಲಿ ೨೦

ಊರೊಳಿರ್ದನದೋರ್ವಗೌಡನು
ವೀರಶೈವನು ಅನ್ನದಾತನು
ಭೂರಿ ಹರಗುರು ಚರರದಾಸೋಹದಲಿ ಬಲ್ಲಿದನು
ಸಾರಸಂಪದ್ಯುಕ್ತ ಗುಣಮಣಿ-
ಹಾರ ಜನಗಣರಾಗಿ ಪಾಪವಿ-
ದೂರನಾಗಿ ಸುಶೋಭಿಪನು ತಾನನ್ನದಾನಪ್ಪ ೨೧

ಸಂತತಿಯು ತನಗಿಲ್ಲದುದರಿಂ
ಚಿಂತಿಪನು ಪಗಲಿರುಳು ಪ್ರತಿದಿನ
ಕಂತುಹರನೇ ಯೋಗಿರೂಪದೊಳಲ್ಲಿ ಬಂದಿರಲು
ಸಂತಸದಿ ದರ್ಶನವ ಪೊಂದುತ
ನಿಂತು ಯೋಗಿಗೆ ಬೇಡಿಕೊಂಡನು
ಚಿಂತೆಯಂ ಬಿಡಿಸಯ್ಯ ಯೋಗಿಯೆ ಪುತ್ರದಾನದಲಿ ೨೨

ಅರಿದು ಯೋಗಿಯು ಭಕ್ತನಿಚ್ಛೆಯ
ಕೊರಗಪೇಷ್ಯ ನಿನಗೆಯೋರ್ವನು
ಪರಮ ಪುತ್ರನು ಜನಿಸುವನು ಸಲೆ ನಿನ್ನ ಕುಲದೀಪ
ಇರಿಸು ಪ್ರಭುಗೌಡೆಂಬ ಪೆಸರನು
ಧರೆಯೊಳತಿವಿಖ್ಯಾತನಪ್ಪನು
ಚರರ ಸೇವೆಯಗೈದ ಪುಣ್ಯವು ವ್ಯರ್ಥ ಹೋಗುವುದೇ ? ೨೩

ಗುರುವರನ ಕರೆದೊಯ್ದು ತನ್ನಯ
ಹಿರಿಮನೆಗೆ ಸಂತೋಷದಿಂದಲಿ
ಉರುತರದ ಸತ್ಕಾರವೆಸಗಿದನಾಗಲಾ ಗೌಡ
ಗುರುಗಳಾಶೀರ್ವಾದದಿಂ ಸಲೆ
ವರಸುತನು ಜನಿಸಲ್ಕೆಯಾತಗೆ
ಇರಿಸಿ ಪ್ರಭುಗೌಡೆಂಬ ನಾಮವ ನಲಿದಿಹನು ಗೌಡ ೨೪

ಮೂಡೆ ಭಕ್ತಿಯು ಗೌಡನೆದೆಯಲಿ
ಮಾಡಿದನು ಸಂಪತ್ ಸಹಾಯವ
ರೂಢಿಯೋಳ್ ನೆಲೆಸಿರ್ದ ಶ್ರೀ ಶಿವಯೋಗಮಂದಿರಕೆ
ಗೌಡನಾ ವಂಶಾಭಿವೃದ್ಧಿಯು
ನಾಡೆ ಚೆಲ್ವರಿದಿರ್ದುದಿಂದಿಗು
ಬೇಡಿದವರಿಗೆಯಿಲ್ಲವೆಂಬುವದಿಲ್ಲವಾ ಗೃಹದಿ ೨೫

## ಬಿಂಕದ ಕಟ್ಟಿ

ಮುಂದೆ ಬಿಂಕದಕಟ್ಟಿಯೆಂಬುವ
ಸುಂದರದ ಗ್ರಾಮಕ್ಕೆ ಯೋಗಿಯು
ಬಂದು ಊರಿನ ಮುಂದಿರುವ ರಮ್ಯೋಪವನದೊಳಗೆ
ನಿಂದು ಸೊಗದಿಂ ಲಿಂಗಪೂಜೆಯು
ನಂದದಿಂ ಗೈಯುತಿರೆ ಭಕ್ತರ
ವೃಂದವಲ್ಲಿಗೆ ಬಂದು ಸಂತಸಭಾವದಿಂಗೂಡಿ ೨೬

ಗುರುವರನಿಗಭಿನಮಿಸಿಯಾತನ
ದರುಶನಾಶೀರ್ವಾದದಿಂ ಸಲೆ
ಪರಮ ಧನ್ಯರು ನಾವೆನುತೆ ಶಿರಬಾಗಿ ನಿಂದಿರಲು
ಪುರದ ಕಿವುಡನು ರಾಮರಡ್ಡಿಯು
ಗುರುವರೇಣ್ಯಗೆ ನಮಿಸಿ ನಿಲ್ಲಲು
ಚರವರನು ಕೇಳಿರ್ದನಾತಗೆ ಕುಶಲ ಪ್ರಶ್ನೆಯನು ೨೭

ಆರು ನೀನೆಲೆ ನಿನ್ನ ಪೆಸರೇಂ
ಊರೊಳಗೆ ತವ ಮಡದಿ ಮಕ್ಕಳು
ಸಾರಸುಖದಿಂದಿರ್ದಪರೆ ಹೊಲ ಬೆಳೆದು ನಿಂತಿಹುದೆ ?
ಮಾರಹರ ಶಿವಯೋಗಿಯೀ ನುಡಿ
ಗಾರು ಮಾರುತ್ತರವನೀವರು ?
ಭೂರಿ ಬಧಿರನು ಜನ್ಮತಃ ಸಲೆ ರಾಮರಡ್ಡಿ ಗಡ ೨೮

ರಾಮರಡ್ಡಿಯು ಸುಮ್ಮನಿರ್ಪುದ-
ನಾ ಮಹಾಜನ ನೋಡಿ ನಕ್ಕಿತು
ಸ್ವಾಮಿಗಳಿಗೋರ್ವನು ನಿವೇದಿಸುತಿರ್ದನಿಂತೆಂದು
ಈ ಮನುಷ್ಯನು ಹುಟ್ಟುಗಿವುಡನು
ಸ್ವಾಮಿಗಳನುಡಿ ಕೇಳಿಸದೆ ತಾ-
ನೀ ಮಹಾಸನ್ನಿಧಿಯ ಮುಂದತಿ ಮೌನದಿಂದಿಹನು ೨೯

ಯೋಗಿಗಳ್ತಾವಿದನು ಆಲಿಸಿ
ಬೇಗದಿಂ ಜನರೆದುರು ನುಡಿದರು
ಈಗಿನೆಮ್ಮಯ ಕುಶಲಪ್ರಶ್ನೆಯು ವ್ಯರ್ಥವಾಯ್ತಲ್ಲ ?
ಯೋಗಿವರನಿಂತೆಂದು ಬಧಿರನ-
ನಾಗ ಸನ್ನೆಯೊಳಾತ್ಮ ಸನ್ನಿಧಿ-
ಗಾಗಮಿಸ ಪೇಳ್ದವನ ಕಿವಿಯೊಳ್ಮಂತ್ರವುಚ್ಚರಿಸೆ ೩೦

ಬಧಿರನಿಗೆ ಕಿವಿಕೇಳಹತ್ತಲು
ವಿಧಿಯು ತೊಲಗಿತು ಯೋಗಿಯಾ ವಾಕ್-
ಸುಧೆಯು ಜ್ಞಾಪಕವಾಗಿ ಮಾರುತ್ತರವನಿತ್ತಿಹನು
ಬದಿಯ ಜನರಾಶ್ಚರ್ಯ ಹೊಂದುತೆ
ಸದಮಲನ ಕೊಂಡಾಡಿ ತಣಿದರು
ಬಧಿರನಾನಂದವನು ಬಣ್ಣಿಸಲಾರ್ಗೆ ಸಾಧ್ಯವಲಾ ೩೧

ಇರುವಳೋರ್ವಳು ಸಾಧ್ವಿ ಬಡವಿಯು
ಪುರದಿ ತಿಲ್ಲಾಪೂರ ಮನೆತನ-
ಸಿರಿಯು ನಿಂಗಮ್ಮೆಂಬ ಭಕ್ತಿಯ ಕಣಿಯು ಸದ್ಗುಣೆಯು
ಕರೆವ ಆವೊಂದನ್ನವಳು ಸಾ-
ಕಿರುವಳಾಕೆಯು ನಿತ್ಯ ಪಾಲನು
ಕರೆದು ಮಾರಿ ಪ್ರಪಂಚಮಂ ಸಲೆ ಸಾಗಿಸುತ್ತಿಹಳು ೩೨

ಯೋಗಿಗಳ್ ತನ್ನೂರ್ಗೆ ಬಂದುದ-
ನಾಗವಳು ನೆರೆ ಕೇಳಿ ಸೇವೆಗೆ
ಸಾಗಿದಳು ಮನದುಂಬಿ ಭಕ್ತಿಯ ಸೊಂಪು ಪೊಗರೇರೆ
ಯೋಗಿಗಾಕಳ ಹಾಲನೀವಳು
ಯೋಗಿಮಠದಂಗಣವ ಗುಡಿಪಳು
ಯೋಗಿ ಪೂಜೆಯುಗೈವ ನೆಲ ಸಾರಣೆಯ ಮಾಡುವಳು ೩೩

ಹೀಗೆ ಸೇವಾಕಾರ್ಯ ನಡೆದಿರ-
ಲಾಗ ದುರ್ವಿಧಿಯಿಂದಲಾಕೆಯ
ರಾಗದಾಕಳವೊಂದು ದಿನವೇನಾಯ್ತೊ ಶಿವಬಲ್ಲ
ರೋಗ ಬಂದೆಡೆಗೊಂಡು ಸಾಯಲು
ಸಾಗಿಸುವುದಾನೆಂತು ಮನೆತನ?
ಯೋಗಿಸೇವೆಗೆ ಹಾಲು ತಪ್ಪಿತು ಏನು ಗತಿಯೆಂದು ೩೪

ಬಂದು ಯೋಗಿಯ ಮುಂದೆ ಭಕ್ತಳು
ವಂದನಂ ಗೈದಿಂತು ನುಡಿದಳು
ತಂದೆ, ನಾ ಬಹು ಮಂದಭಾಗ್ಯಳು ಸತ್ತಿಹುದು ಗೋವು
ಇಂದು ನಿಮ್ಮಯ ಲಿಂಗಪೂಜೆಗೆ
ಸಂದಲಿಲ್ಲವು ಆಕಳಮೃತವು
ಮುಂದೆ ಮಕ್ಕಳಿಗೇನು ಗತಿಯೆಂದೊರಲಿದಳು ಸಾಧ್ವಿ ೩೫

ಯತಿಯು ಕೇಳಿದನಾಗಳಾಕೆಗೆ
ಅತಿ ಮುದದಿ, ನಿನಗುಂಟೆ ಮನೆಯಲಿ
ಸುತರಿಗಮೃತಂಗರೆವ ಬೇರಾವುಗಳು ಪೇಳ್ಮಗಳೇ
ಯತಿಗೆ ಪೇಳ್ದಳು ಸತಿಯು ತಾನಾ-
ನತಳು ತಂದೆಯೆ ಮೂರುವರ್ಷದ
ರತಿಯ ಪೆಣ್ಗರುವುಂಟು ತಾ ಬರಡಾಗಿಹುದು ನೋಡಿ ೩೬

ಯೋಗಿ ಪೇಳಿದನಾಗಳಾಕೆಗೆ
ಪೋಗಿ ನೀ ಕರುವನ್ನು ಇಲ್ಲಿಗೆ
ಬೇಗದಿಂ ಪಿಡಿತಂದು ನನ್ನಯ ಮುಂದೆ ನಿಲಿಸಮ್ಮಾ
ಆಗ ನಾನದನೀಕ್ಷಿಸುವೆನೆನ-
ಲಾಗಿ ಮುದದಿಂ ಪೋಗಿ ಕರುವನು
ಯೋಗಿಯೆಡೆ ತಂದಿರ್ದಳಾತುರದಿಂದ ನಿಂಗಮ್ಮ ೩೭

ಗುರುವು ಕರುವಿನ ಬೆನ್ನತಾನೇ-
ವರಿಸುತಿಂದೆಂದನು ಸುಮೋದದಿ
ಸುರಭಿ ನೀ ಕರುಣಾಳು ಪಾಲ್ಗರೆಯಮ್ಮ ಮಕ್ಕಳಿಗೆ
ಕರುವೆ, ತಾಯಿಯ ಕಳೆದು ಕೊಂಡಿಹೆ
ತರುಳರಂ ರಕ್ಷಿಸುವ ಭಾರವು
ಕರುಳೆ ನಿನ್ನಯ ಮೇಲೆ ಬಿದ್ದಿದೆಯೆಂದು ಭಸ್ಮವನು ೩೮

ತೊಡೆಯು ವತ್ಸೆಯು ಕೆಚ್ಚಲಿಗೆ ಗಡ
ಮೃಡನ ಕೃಪೆಯಿಂ ಪಾಲುತೊರೆಯಲು
ಪಿಡಿದು ಮೊಲೆಗಳ ಹಿಂಡಿಕೊಂಡಳು ಭಕ್ತೆ ನಿಂಗಮ್ಮ
ಒಡೆಯರಾ ಲಿಂಗಾರ್ಚನೆಗೆ ಮೇಣ್
ಹುಡುಗರಿಗೆ ಸಾಕಷ್ಟು ಕುಡಿಯಲು
ಗಡಿಗೆ ತುಂಬಿತು ಪಾಲಿನಿಂ ಶಿವಯೋಗಿ ಲೀಲೆಯಲಿ ೩೯

ಮುಂದೆ ಶಿವಯೋಗೀಶ ಕೃಪೆಯಿಂ
ಸಂದಿಹುದು ಬಹು ವಿಪುಲ ಸಂಪದ
ಚೆಂದದಿಂ ಸಾಗಿಹುದು ಸಂಸಾರವು ಸುಪುತ್ರರೊಳು
ಅಂದಿನಿಂ ನಿಂಗಮ್ಮ ಭಕ್ತಳು
ಬಂದ ಹರಗುರುಚರರಸೇವೆಯ
ಕುಂದು ಕೊರತೆಯು ಬಾರದಂದದಿ ಸಾಗಿಸುತ್ತಿಹಳು ೪೦

ಇಂದಿಗೂ ಆ ಮನೆತನದ ಜನ
ನಂದದಿಂ ಬೂದೀಮಠಕೆ ತಾವ್
ಸಂದ ಗೋವೀದಾಗ ಮೊಸಲಕ್ಷೀರವನು ಕರೆದು
ತಂದು ಸಲ್ಲಿಸುತಿಹರು ತಪ್ಪದೆ
ಇಂದುಧರಕರುಣದೊಳಗಾ ಮನೆ-
ಗೆಂದಿಗೂ ತಪ್ಪಿಲ್ಲ ಹೈನವು ಯೋಗಿ ಮಹಿಮೆಯಲಿ ೪೧

ಅಸುಂಡಿ

ಅರಿದು ಬೂದೀಶ್ವರನ ಮಹಿಮೆಯ
ನೆರೆಯುಸುಂಡೀ ಗ್ರಾಮಮುಖ್ಯರು
ಪರಮನೆಡಗೈ ತಂದು ಬಿನ್ನಹವಮಾಡಿ ಕರೆದೊಯ್ದು
ಇರಿಸೆ ಬಸವನ ಗುಡಿಯೊಳಗೆ ಸಲೆ
ಬರುತಿಹರು ಭಕ್ತರುಗಳಲ್ಲಿಗೆ
ಚರವರರ ದರ್ಶನಕೆ ತಮ್ಮ ಸ್ವಾರ್ಥಸಾಧನೆಗೆ ೪೨

ಒಂದು ದಿನ ಕಾಶಮ್ಮನೆಂಬುವ
ಸಂದ ಪಾರ್ವರ ಸುದತಿಯೋರ್ವಳು
ಬಂದು ಯೋಗಿಯ ಪದಕೆ ವಂದಿಸಿ ಬೇಡಿಕೊಂಡಿಹಳು
ಮಂದ ಭಾಗ್ಯಳು ನಾನು ಗುರುಗಳೆ
ತಂದು ಕಾಣಿಕೆಯೀಯಲೆನ್ನೊಳು
ಒಂದು ಸಹ ಕಾಸಿಲ್ಲ ಬಡವಿಯು ಮಾಡಲೇನಿನ್ನು ೪೩

ಅವಳು ಹುದ್ದಾರೆಂಬ ಮನೆತನ-
ದವಳು ಸಜ್ಜನೆ ಮೇಣ್ ಸುಶೀಲೆಯು
ಸುವಿನಯದಿ ಚೆಪ್ಪಾಳುಗೆಯಜೋಡೊಂದ ಕಾಣಿಕೆಯು
ಅಪರಿಗರ್ಪಿಸಿ ಧರಿಸಬೇಕಂ-
ದವಳು ದೈನ್ಯದಿ ಪ್ರಾರ್ಥಿಸಲು ಮಿಗೆ
ಜವದಿ ತಾನದ ಮೆಟ್ಟಿಯಾಕೆಗೆ ಸಂತಸಂ ಗೊಳಿಸಿ ೪೪

ಹಳೆಯ ತಮ್ಮಯ ಪಾದರಕ್ಷೆಯ
ಕಳೆದು ಆಕೆಯ ಉಡಿಯೊಳಿರಿಸುತೆ
ತಳುವದೀ ನುಡಿಯಾಡಿದನು ಕಾಶಮ್ಮನಿಗೆ ದಯದಿ
ಬೆಳೆಯುವದು ನಿನ್ನೈಸಿರಿಯು ಕೇಳ್
ಬೆಳಕ ಕಾಂಬುದು ನಿನ್ನ ಮನೆತನ
ತೊಳಪ ಭಕ್ತಿಯೊಳಿದನು ಪೂಜಿಸು ಮಗಳೆ ಪ್ರತಿನಿತ್ಯ ೪೫

ಎನಲು ಕಾಶಮ್ಮನು ಸುಶೀಘ್ರದಿ
ಮನೆಗೆ ತಂದಾ ಜೋಡ ಜಗುಲಿಯೊ-
ಳನುನಯದಿ ತಾನಿರಿಸಿ ನಿತ್ಯವು ಪೂಜಿಸುತ್ತಿರಲು
ಧನಕನಕ ಸಂಪದವು ಬೆಳೆಯಿತು
ಮನೆತನವು ಉದ್ಧಾರವಾಯಿತು
ಅನಘ ಮೂರ್ತಿಯ ಕರುಣೆಯಾಕೆಯ ಹಾಡಿ ಹರಸಿದಳು ೪೬

ಅವಿರತಂ ಸೊಗದಿಂದೆ ಕಾಲವ-
ನವಳು ಮಕ್ಕಳು ಮರಿಗಳೊಂದಿಗೆ
ಶಿವನ ರೂಪದ ಯೋಗಿಯಂ ಸ್ಮರಿಸುತ್ತೆ ಕಳೆಯುತಿರೆ
ಅವಳ ಮೊಮ್ಮಗ ಶೇಷಪನು ತಾ
ಭವರಹಿತ ಬೂದೀಶ ಮಹಿಮೆಯ-
ನವಗಣಿಸಿ ಚಮ್ಮಾವುಗೆಯ ಬರಸೆಳೆದು ಜಗುಲಿಯೊಳಿಂ ೪೭

ತೆಗೆದು ಬೀಸಾಡಿದನು ಗರ್ವದಿ
ಬಗೆಯದಾದನು ಯಾರ ಕೃಪೆಯಿಂ
ಸೊಗದಿ ಮನೆಯೊಳ್ಸಂಪದವು ಬೆಳೆದಿರ್ದುದೆಂಬುದನು
ನಗೆಯು ಹೊಗೆಯಾಗುವದು ಮಾನವ-
ನೊಗತನವು ಸಲೆ ನಷ್ಟವಪ್ಪುದು
ಒಗೆಯುವದು ವಿಪರೀತಬುದ್ಧಿ ವಿನಾಶಕಾಲದಲಿ ೪೮

ಸರಿದು ಹೋಯಿತು ಸಿರಿಯು ಭಾಗ್ಯವು
ಹರಿದು ಹೋಯಿತು ಮನೆಯ ಗೌರವ
ಉರಿದು ಹೋಯಿತು ಕುಲದ ದರ್ಪವು ಕಾಡಿಹುದು ವಿಧಿಯು
ಮರಣ ಹೊಂದಿದಳಾ ಸುಶೀಲೆಯು
ಮರೆದು ಹೋಯಿತು ಮನೆತನವು ಹಾಯ್ !
ಚರವರೇಣ್ಯನ ಕರುಣ ಕಳಕೊಂಡವರಿಗೀ ಗತಿಯು! ೪೯

ಎಸೆದ ಯೋಗಿಯ ಜೋಡು ತಿಪ್ಪೆಯೊ-
ಳೆಸೆಯುತಿರೆ ಸಲೆ ಮಿಸುನಿಯಂದದಿ
ಕಸದ ಗೊಬ್ಬರ ತೆಗೆಯಬಂದಿಹ ಭೀಮಪಡ್ಡಿಗಡ !
ಮಿಸುಪ ಸ್ವರ್ಣದ ಜೋಡ ತಾ ಮನ-
ವೊಸೆದು ಮನೆಗೊಯ್ದರ್ಚಿಸುತ್ತಿರೆ
ಕಸವರವು ಹೆಚ್ಚುತ್ತ ಹೋಯಿತ್ತಾತನಾ ಗೃಹದಿ ೫೦

ಮಾಡಿದಾ ಸುಕೃತದೊಳು ಯೋಗಿಯ
ಜೋಡು ಲಭಿಸಿರಲದರ ಮಹಿಮೆಯೊ-
ಳಾಡುತಿರ್ದುದು ಸಂಪದವು ಮನೆಯೊಳಗೆ ಸಂತತವು
ಜೋಡ ತಾನವಗಣಿಸಿ ಯೋಗಿಗೆ
ಕೇಡ ಬಯಸಿದ ಮರುಳ ಮನುಜನ
ಹಾಡು ಏನಾಯ್ತೆಂಬುದನ್ನರಿದಾಚರಿಪುದೊಳಿತು ೫೧

## ಹೊಂಬಳ

ನಂಬಿ ಗುರುಮಹತಿಯನು ಕೇಳ್ದರೆ
ಹಂಬಲದಿ ಗುರುಲಿಂಗ ಪ್ಪಾಲಿಂ-
ಗೆಂಬ ಪೆಸರ ಕನಾಜ ಮೈಲಾರೆಂಬ ಮನೆತನದ
ಹೊಂಬಳದ ಶ್ರೀಮಂತ ಭಕ್ತರು
ತುಂಬಿ ಹೃದಯಾನಂದದಿಂ ಸಲೆ
ಶಂಭುರೂಪದ ಯೋಗಿಯಂ ಕಾಣಲ್ಕೆ ಬಂದಿಹರು ೫೨

ದರುಶನವ ಸಲೆ ಪೊಂದಿ ಯೋಗಿಯ
ಹರುಷದಿಂ ಕರೆದೊಯ್ದು ಊರಿಗೆ
ನೆರೆ ಸಮೀಪದ ಚೆಲ್ವ ಬನಸಿರಿಯುಳ್ಳ ತಾಣದಲಿ
ಇರಿಸಿ ಶಿವಪೂಜಾ ವ್ಯವಸ್ಥೆಯ
ಸರಸದಿಂದೆಸಗಿದರು ಯೊಗಿಗೆ
ವರಧನಿಕ ಗುರುಲಿಂಗಪನು ಗಣಪರ್ವದಾ ನೆಪದಿಂ ೫೩

ಗುರುವರೇಣ್ಯನ ತನ್ನಯಾ ಮಂ-
ದಿರಕೆ ಸಲೆ ಬರಮಾಡಿಕೊಂಡನು
ಪುರದ ಸಾವಿರಗಟ್ಲೆ ಜನಕಾಮಂತ್ರಣವನಿತ್ತು
ಗುರುವರನು ಸಹಿತೆಲ್ಲ ಜನರಿಗೆ
ಪರಮ ಮೃಷ್ಟಾನ್ನದೊಳು ತಣಿಸಿರೆ
ಗುರುಗಳಾತನ ಅನ್ನದಾನವ ಹಾಡಿ ಹರಸಿದರು ೫೪

ಹಸಿದವರಿಗನ್ನವನು ನೀಡಿದ
ಅಸಮದಾನಿಯು ನೀನು ಭಕ್ತನೆ
ವಸುಧೆಯೊಳಿದಕೆಂಬರೈ ದಾಸೋಹವಿಂತೆಂದು
ಎಸಗು ದಾಸೋಹವನು ಪ್ರತಿದಿನ
ಮಿಸುನಿಯೊಲ್ತವ ಹೆಸರು ಬೆಳಗಲಿ
ಬಸವತಂದೆಯು ನಿತ್ಯದಾಸೋಹವನು ಅನುಕರಿಸು ೫೫

ಅನ್ನದಾನವ ಪೋಲ್ವದಾನಗ-
ಳಿನ್ನು ಜಗದೊಳು ಹಿಂದು ಮುಂದಿ
ಲ್ಲನ್ನದಿಂ ನೀ ಸರ್ವಜಾತಿಯ ದಲಿತದೀನರಿಗೆ
ನಿನ್ನಗೃಹದೊಳು ಸತ್ಕರಿಸಿ ಸಲೆ
ಉನ್ನತಿಯ ಪಡೆದಿರ್ದೆಯೈಗಡ
ನಿನ್ನುದಾರತೆಯನ್ನು ಬಣ್ಣಿಪೊಡೆನ್ನಯಳವಲ್ಲ ೫೬

ಕ್ಷುಧೆಯು ವ್ಯಾಧಿಗೆ ಅನ್ನವೌಷಧಿ
ಕ್ಷುದಿತ ಜನವನ್ನವನೆ ಬೇಡ್ವುದು
ಮುದದೊಳವರಿಗೆ ಮುತ್ತು ರತ್ನಗಳಿತ್ತರೇಂ ಫಲವು
ಸುಧೆಯು ಅನ್ನವು ಪ್ರಾಣಧಾರಣೆ-
ಗದುವೆ ಸಂತಾನಕ್ಕೆ ಮೂಲವು
ಅದರಿನಾರೋಗ್ಯಯು ದೇಹದ ಶಕ್ತಿ ಬೆಳೆಯುವವು ೫೭

ಅನ್ನ ಬೊಮ್ಮವುಯೆಂದು ಶಾಸ್ತ್ರವು
ಸನ್ನಿಯಿಂ ನೆರೆ ಪೇಳುತಿರ್ದುದು
ಅನ್ನದಿಂ ಜಗದಾಟ ನಡೆದಿಹುದಲ್ಲದಿನ್ನುಂಟೆ ?
ಅನ್ನವೇ ಪರಸಾದವೆನಿಸಿತು
ಮುನ್ನ ಬಸವಾದಿಗಳು ಭಕ್ತಿಯೊ-
ಳನ್ನಮಂ ಗುರುಲಿಂಗಜಂಗಮಕಿತ್ತು ಬೆಳಗಿದರು ೫೮

ಗುರುಗಳನ್ನದ ಮಹಿಮೆಯುಂ ಮಿಗೆ-
ಯೊರೆದು ಗುರುಲಿಂಗಪ್ಪ ಭಕ್ತಗೆ
ನೆರೆದ ಜನಸಂದೋಹಕಾನಂದದಲಿ ಪೇಳಿದರು
ಪುರದ ರಮ್ಯೋದ್ಯಾನದೊಳ್ನೀವ್
ಮಿರುಪ ಶ್ರೀ ಪ್ರಭುದೇವಗದ್ದುಗೆ-
ಯುರೆ ಪ್ರತಿಷ್ಠೆಯ ಮಾಡಿ ಶಿವ ದಾಸೋಹವೆಸಗುವುದು ೫೯

ಯೋಗಿಯಾಜ್ಞೆಯ ಮೇರೆಗಾ ಜನ
ಬೇಗ ಪ್ರಭುಗದ್ದುಗೆಯ ವಿರಚಿಸಿ
ಯೋಗಿಮನಕಾನಂದಮಂ ಬೀರಿದರು ಭಕ್ತಿಯಲಿ
ಯೋಗಿವರನಲ್ಲಿಂದ ಮುಂದಕೆ
ಸಾಗಿದನು ಸಂಚಾರಕ್ರಮದಿಂ
ರಾಗದಿಂ ಹೊಂಬಳದ ಭಕ್ತಿಯ ಹೃದಯದೊಳಿರಿಸಿ ೬೦

## ಬ್ಯಾಹಟ್ಟಿ

ಒಂದು ದಿನ ಬ್ಯಾಹಟ್ಟಿ ಗ್ರಾಮಕೆ
ಬಂದು ಬೂದೀಯೋಗಿ ಗ್ರಾಮದ
ಮುಂದಿರುವ ತೋಟದಲಿ ತಂಗಿದರಲ್ಲಿ ಶಿವಪೂಜಾ-
ನಂದದೊಳಿರುತಿರಲು ಗೌಡರ
ಮಂದಿರದ ಚೆನ್ನಮ್ಮನೆಂಬುವ
ಮುಂದಭಾಗಿನಿ ಬಂದು ಯೋಗಿಯ ಲೀಲೆಯುಂ ಕೇಳಿ ೬೧

ಹೆರರ ಕಣ್ಣಿಗೆ ಬೀಳದಂದದಿ
ಮರದ ಮರೆಯಲಿ ಕುಳಿತುಕೊಂಡಳು
ಚರರ ಸ್ನಾನವು ಮುಗಿಯೆ ಬಚ್ಚಲ ಹರಿಗೆ ತಾ ಬಂದು
ಕರದೊಳಾ ಬಚ್ಚಲದ ರೊಜ್ಜನು
ತ್ವರಿತದಿಂ ಮೈಗೆಲ್ಲ ಲೇಪಿಸಿ
ತಿರುಗಿ ಒಂದಕೆ ಪೋಪಳಾಕೆಯು ಮರದ ಮರೆಯಲ್ಲಿ ೬೨

ಹೀಗೆ ಏತಕೆ ಮಾಡುತಿರ್ಪಳೊ ?
ಆಗಿರುವುದೇನಾಕೆಗಕ್ಕಟ
ಭೋಗತರ್ಮದೊಳಾಕೆ ಹಿರಿಬೇನೆಯೊಳು ಬಳಲುವಳು
ರೋಗದಿಂ ಕೈಕಾಲ ಕೀವದು
ಹಾಗೆ ಸೋರುತ್ತಿಹುದು ಜಿನುಗುತೆ
ಮೂಗು ದುರ್ಗಂಧವನು ಸೇವಿಸೆ ಮೊಗವು ಕಿವುಚಿಹುದು ೬೩

ಊರೊಳಿರಗೊಡದಾಕೆಯಂ ಸಲೆ
ದೂರ ಹೊಲದೊಳಗಿರಿಸಿಹರು ಜನ-
ರಾರು ಮಾರೋಗಿಯ ಸಮೀಪಕೆ ಬಾರರೈ ಶಿವನೆ
ನೀರು ಬುತ್ತಿಯನಿಟ್ಟು ದೂರದಿ
ಸಾರುವರು ಮನೆಯವರು ಪ್ರತಿದಿನ
ಸಾರ ಶಿವಯೋಗೀಂದ್ರ ಬಂದುದ ಕೇಳಿ ಚೆನ್ನಮ್ಮ ೬೪

ಬಂದ ಯೋಗಿಯ ಬಳಿಗೆ ಗೌಪ್ಯದಿ
ನಿಂದು ವೃಕ್ಷದ ಮರೆಗೆ ಪ್ರತಿದಿನ
ಸಂದ ಯೋಗಿಯ ಬಚ್ಚಲುದಕದ ರೊಜ್ಜ ವ್ರಣಗಳ್ಗೆ
ಚೆಂದದಿಂ ಲೇಪಿಸುತಲಿರೆ ಕೆಲ-
ವೊಂದು ದಿನದಲಿ ಬಂದ ರೋಗವು
ಕಂದಿ ಹೋಯಿತು ಯೋಗಿಮಹಿಮೆಯನೆಷ್ಟು ಬಣ್ಣಿಪುದು ೬೫

ಒಂದು ಶುಭದಿನ ಚೆನ್ನಮನು ತಾ
ಮಿಂದು ಮಡಿಯನ್ನುಟ್ಟು ಸಂಭ್ರಮ-
ದಿಂದ ಬಂದಾ ಯತಿವರಗೆ ಸಾಷ್ಟಾಂಗವೆಸಗಿದಳು
ನಿಂದ ಜನರಿದ ನೋಡಿ ಯಚ್ಚರಿ-
ಯೊಂದಿ ಕೇಳಿದರೇಂ ವಿಚಿತ್ರವು ?
ಬಂದ ಮಾರೋಗವು ನಿವಾರಣೆಯಾದ ಪರಿಯೆಂತು? ೬೬

ಪೇಳಿದಳು ತಾ ನಿತ್ಯಗೈದುದ
ಕೇಳಿ ಸೈವೆರಗಾದರೆಲ್ಲರು
ಭಾಳನೇತ್ರನು ಬೂದಿಯೋಗಿಯುಯೆಂದು ಪೊಗಳಿದರು
ಬಾಳಿದಳು ಸೊಗದಿಂದೆ ಚೆನ್ನಮ-
ನಾಳಿನಾಳಾಗಿನ್ನು ಚರವರ-
ರಾಳಿಯುಂ ಸೇವಿಸುತೆ ತಾ ಭಯಭಕ್ತಿಯುತಳಾಗಿ ೭೦

ಊರಿನೊಳು ಪ್ರಭುಗದ್ದುಗೆಯ ನೆರೆ
ಭೂರಿ ವೈಭವದಿಂದೆ ಸ್ಥಾಪಿಸಿ
ತೋರಿದರು ತಮ್ಮೊಳಲಿಭಕ್ತಿಯ ಯತಿಗೆ ವಿನಯದಲಿ
ಮೀರಿ ಸುಖಸಂಪದಗಳೊಂದಿಗೆ
ಊರು ನಲಿನಲಿದಾಡುತಿರ್ದುದು
ಧೀರ ಯೋಗಿಯ ಪಾದಮಹಿಮೆಯ ಬಣ್ಣಿಸುವರೊಳರೇ ? ೭೧

ಮೆರಿಸಿ ವಿವಿಧ ಪವಾಡಗಳ ತಾ-
ವಿರಿಸಿ ಭಕ್ತರ ಶಾಂತಿಸುಖದೊಳು
ಚರಿಸಿ ಜಪತಪವನ್ನನುಷ್ಠಾನವನು ಹೋದಲ್ಲಿ
ನೆರೆ ಬಸವ ವಿಗ್ರಹವ ಸ್ಥಾಪಿಸಿ
ಮೆರುಪ ಪ್ರಭುಗದ್ದುಗೆಯ ಕಟ್ಟಿಸಿ
ಹರಸಿದರು ಬೂದೀಶ್ವರರು ಭಕ್ತರನು ಮುದವಲರೆ ೭೨

**ಅಂತು ಹದಿನಾಲ್ಕನೆಯ ಸಂಧಿಗೆ ೭೨ ಪದ್ಯಕ್ಕೆ ಮಂಗಲಮಹಾ**

**ಭದ್ರಂ ಶುಭಂ ಮಂಗಲಂ**

ಶ್ರೀಗುರುಬಸವಲಿಂಗಾಯ ನಮಃ

# ಹದಿನೈದನೆಯ ಸಂಧಿ

ಸೂಚನೆ- ಕರೆಮುಡಿಗೆ ಕಿರೆಸೂರ ಗ್ರಾಮಕೆ
ಚರಿಸಿ ಕಾಲುವೆ ಹಳ್ಳಿಯಯೂರಿಗೆ
ಮೆರೆದನಾ ಹುಬ್ಬಳ್ಳಿ ಬೂದನಗುಡ್ಡದೋಳ್ ಯತಿಯು

## ಕರಮುಡಿ

ಕರಮುಡಿಗೆ ಬೂದೀಶಯೋಗಿಯು
ಚರಿಸುತಾಗಮಿಸಿರಲು ಗ್ರಾಮದ
ಉರುವಿನಯಸಂಪನ್ನ ಗುರುಚರಲಿಂಗಸದ್ಭಕ್ತ
ನುರಿತ ಮರಿತಮ್ಮಪ್ಪನೆಂಬುವ
ಸಿರಿಯುತನು ಬಳಿಸಾರ್ದು ಯೋಗಿಯ
ಚರಣಕೆರಗಿದನೂರ ಪ್ರಮುಖಸಮೇತನರ್ತಿಯಲಿ ೧

ತಂದ ಹೂಪಣ್ಗಾಯಿ ಕಪ್ಪುರ
ಮುಂದಿರಿಸಿ ಕರಮುಗಿದು ಕೇಳ್ದನು
ತಂದೆ, ನೀಂ ಗಣಪರ್ವಕೆನ್ನಯ ಮನೆಗೆ ಬರಬೇಕು
ಇಂದುವರೆಗತಿ ದೀರ್ಘ ಬೆಳೆದಿಹ
ಸಂದ ತಮ್ಮಯ ಜಡೆಗಳಂ ನಾ-
ವಿಂದು ಇಳುಹಲಪೇಕ್ಷೆಯಾಗಿದೆ ನಡೆಸಿ ಕೊಡಬೇಕು ೨

ಎಂದೆನಲು ಶಿವಯೋಗಿ ಪೇಳ್ದನು
ಇಂದು ನೀಂ ಬಹು ಸುಕೃತನೈಗಡ
ಸಂದ ಜಟೆಯುನ್ನಿಳುಹುವುದು ಬಹು ಸುಲಭವಲ್ಲಯ್ಯಾ
ಚೆಂದದಿಂ ಪನ್ನೆರಡು ಸಾವಿರ
ಮಂದಿ ಹರಗುರುಚರರ ತೃಪ್ತಿಗೆ
ನಂದದಿಂ ಗಣಪರ್ವ ಮಾಡುವ ಶಕ್ತಿ ನಿನಗುಂಟೇ ? ೩

ಹುದುಗದೆನಿತುಂ ಯೋಗಿಪ್ರಶ್ನೆಗೆ
ಹದುಳದಿಂ ನಾಂ ಗೈಯಲಿಚ್ಛಿಪೆ
ಪದದ ಕೃಪೆಯೆನಗಿರಲಿ ಗುರುಚರಸೇವೆ ಪ್ರಾಪ್ತಿಸಲಿ
ಹೃದಯ ತುಂಬೀ ಮಾತನಾಡಲು
ಮುದದೊಳೊಪ್ಪಿಗೆಯಿತ್ತರಾತಗೆ
ಸದನದೋಳ್ ಗಣಪರ್ವ ಜಡೆಯ ಸಮಾಧಿಯೆಸಗಲ್ಕೆ ೪

ತಳಿರು ತೋರಣದಿಂದೆ ಸಿಂಗರ-
ಗೊಳಿಸಿದನು ಮನೆಯನ್ನು ಭಕ್ತನು
ಬಳಿಕ ಸಾರಣೆ ಕಾರಣೆಗಳಿಂ ಸಜ್ಜುಗೊಳಿಸಿದನು
ತಿಳಿ ಮನದಿ ಚರಪಾದತೀರ್ಥವ
ತಳೆದು ಸಿಂಪಡಿಸುತ್ತ ಶುದ್ಧಂ-
ಗೊಳಿಸಿ ಪರಿಮಳ ಧೂಪದಿಂದ ಸುವಾಸಗೊಳಿಸಿದನು ೫

ತರತರದ ಪಕ್ವಾನ್ನಗಳ ಮಿಗೆ
ಕರಮುಸೆಯೆ ಅಣಿಮಾಡಿಸಿಟ್ಟನು
ಗುರುಚರರು ಪನ್ನೆರಡು ಸಾವಿರದಲ್ಲದಿನ್ನೆಷ್ಟೊ
ಪರಮಭಕ್ತರು ದೀನದಲಿತರು
ನೆರೆದು ಪಕ್ವಾನ್ನಗಳ ಸೇವಿಸಿ
ಹರಸಿದರು ಮುದದಿಂದ ಪುರಿತಮ್ಮಪ್ಪನಂ ನೋಡಾ ೬

ನಡೆಯುತಲ್ಲಿ ವಿಜೃಂಭಣೆಯೊಳತಿ
ಜಡೆ ಸಮಾಧಿಯ ಕಾರ್ಯಭಾರವು
ಮೃಡಭಜನೆ ಭೃಂಗಿಯ ಕುಣಿತ ಮೇಣ್ ಕರಡಿ ಮಜಲುಗಳು
ಪಿಡಿದು ದೀಪಾರತಿಯ ಹೆಂಗಳು
ಸಡಗರದಿ ನಡೆದಿರಲು ಉತ್ಸವ-
ದೊಡನೆಯುಪವನದಲ್ಲಿಯದು ಮುಕ್ತಾಯಗೊಂಡಿಹುದು ೭

ಇಂದಿಗೂ ಆ ಜಡೆ ಸಮಾಧಿಯು
ಬಂದು ಹೋಗುವ ಭಕ್ತ ಜನಕಾ-
ನಂದವೀವ ಪವಿತ್ರಕ್ಷೇತ್ರವದಾಗಿ ಶೋಭಿಪುದು
ಸಂದಿಹುದು ಪ್ರತಿನಿತ್ಯ ಪೂಜೆಯು
ಕುಂದುಕೊರತೆಯು ಬಾರದೂದದಿ
ಮಂದಿಯಿಷ್ಟಾರ್ಥಗಳು ಸಿದ್ಧಿಪವದರ ದರ್ಶನದಿ ೮

## ಕಿರೆಸೂರ

ಸ್ವಾಮಿಗಳು ಹೆಬಸೂರ ಗ್ರಾಮದಿ
ನೇಮದಿಂದಿರುತಿರಲು ಅಲ್ಲಿಗೆ
ಪ್ರೇಮದಿಂ ಕಿರೆಸೂರ ಗ್ರಾಮದ ಭಕ್ತರೈತಂದು
ಸ್ವಾಮಿಗಳೆ, ಬರಬೇಕು ನಮ್ಮಯ
ಗ್ರಾಮಕೆಲ್ಲರನುದ್ಧರಿಸಬೇ-
ಕೀ ಮಹಾ ಶುಭದಿವಸವೆಂದತಿದೈನ್ಯದಿಂ ಬೇಡೆ ೯

ಹೊರಟು ಯೋಗಿಯು ಭಕ್ತರೊಡನೆಯೆ
ನೆರೆಯು ಕಿರೆಸೂರ್ ಗ್ರಾಮಕೈತರೆ
ಹೊರವಳಯದಲ್ಲೊಂದು ಜುಳು ಜುಳು ಹಳ್ಳ ಹರಿದಿಹುದು
ನೆರೆಯೊಳಲ್ಲಿಯೆ ಬಿಲ್ವವೃಕ್ಷವು
ಮೆರೆಯುತಿರೆ ಪೂಲತೆಗಳೊಂದಿಗೆ
ಹರುಷದಾಳ್ದ ಯೋಗಿಯೀ ನೆಲೆ ತಕ್ಕುದೆಂದೆನುತ ೧೦

ತಂಗಿದರು ಶಿವಪೂಜೆಗಲ್ಲಿಯೆ
ಮಂಗಲಾತ್ಮರ ವಾಸಕೆಲ್ಲರು
ಲಿಂಗ ಭಕ್ತರು ಕೂಡಿ ಗುಡಿಸಲವೊಂದ ಕಟ್ಟಿದರು
ಲಿಂಗಸಂಗದೊಳಾ ಯತೀಶ್ವರ
ಭೃಂಗಕೀಟ ನ್ಯಾಯದಂದದಿ
ಲಿಂಗವೇ ತಾನಾಗಿ ರಾರಾಜಿಸುತೆ ನಲಿದಿಹನು ೧೧

ಬರಬರುತಲಾ ಪುಣ್ಯತಾಣದಿ
ಚರಪರ ಪ್ರಭುದೇವಗದ್ದುಗೆ-
ಯಿರದೆ ಭಕ್ತರು ಸ್ವಾಮಿಯಾಜ್ಞೆಯೊಳಲ್ಲಿ ರಚಿಸಿದರು
ಗುರುವರರು ಬಂದಂಥ ಜನಗಳ
ಹರಸಿ ಬೋಧೆಯ ನೀಡಿ ಸಂತಸ-
ವೆರಸಿ ಪ್ರತಿದಿನ ಕಳಹುವರು ತಮ್ಮಾಲಯಕೆ ನೋಡಾ ೧೨

ಹೋಗಿರಲು ತಾನೊಂದು ದಿನ ಶ್ರೀ
ಯೋಗಿನಾಥನು ಜಪದೊಳಿರುತಿರೆ
ನಾಗರಾಜನು ಹರಿದು ಬಂದಾ ಯೋಗಿಕಂಠವನು
ರಾಗದಿಂ ಸುತ್ತಿರ್ದು ಹೆಡೆಯ-
ನ್ನಾಗ ತೂಗುತೆ ತೆನೆಯುತಿರಲದ
ಬೇಗದಿಂ ಜನವೃಂದ ಕಂಡತಿ ಚಕಿತರಾಗಿಹರು ೧೩

ಯೋಗಿಗಳ ತನು ಗಂಧಮಯಮಿರೆ
ಭೋಗಿಯಾ ವಾಸಕ್ಕೆಳಸಿ ತಾ-
ನಾಗಲಾತನ ಕಂಠಮಂ ಸುತ್ತಿಹುದು ಸಂತಸದಿ
ಯೋಗಿಗಳ್ ತಾವೆಲ್ಲಿಯಿರ್ಪರೊ
ಭೋಗಿಗಳ್ ತಾವಲ್ಲಿ ಬರ್ಪವು
ಯೋಗಿ ಭೋಗಿಗಳಾಟ ಸೊಗಸೆನಿಸುವದು ಶಂಕರಗೆ ೧೪

ಭೋಗಿಭೂಷಣನೀಶನೆನ್ನುವ
ಹಾಗೆ ಭಕ್ತಗಣಕ್ಕೆ ತೋರಿರೆ
ಯೋಗಿರಾಜನು ಹಾಗೆಯೇ ಜಪಮುಗಿಸಿ ಕಣ್ತೆರೆಯೆ
ಭೋಗಿ ತನ್ನಯ ಕೊರಲ ಸುತ್ತಿರೆ
ನಾಗರಾಜಗೆ ಪೇಳ್ದನಾ ಯತಿ
ಪೋಗು ಪೋಗೆಲೆ ಸಾಕು ನನ್ನೊಡನೇಕೆ ನಿನ್ನಾಟ ? ೧೫

ಎಂದೆನಲು ಗಡ ಸರ್ಪರಾಜನು
ಚೆಂದದಿಂ ಕೊರಳನ್ನು ಬಿಟ್ಟಾ-
ನಂದದಿಂ ಮುಂದಕ್ಕೆ ಪರಿದುರೆ ಮಾಯವಾಗಿಹುದು
ಬಂದವರು ಕೈಮುಗಿದು ಯೋಗಿಯ
ಅಂದಲೀಲೆಯ ಸ್ಮರಿಸಿ ಮನದಲಿ
ಇಂದುಧರನೇ ಬಂದು ನೆಲಸಿಹನೆಂದು ಹೊಗಳಿದರು ೧೬

ಒಂದು ದಿನ ಬೂದೀಶದರ್ಶನ –
ಕೆಂದು ಬಹುಜನ ಬಂದು ನಿಂದಿರೆ
ಸುದಯೋಗಿಯ ಲಿಂಗವಸ್ತ್ರವು ಜೀರ್ಣವಾದುದನು
ಮಂದಮತಿ ಲಿಂಗಪ್ಪನೆಂಬವ-
ನಂದು ಕಂಡಿಂತೆಂದು ನುಡಿದನು
ಚೆಂದ ವಾಗಿಹ ಲಿಂಗವಸ್ತ್ರವ ತಂದು ನಾನೀವೆ ೧೭

ಜನರ ಮುಂದೀ ನುಡಿಯ ನಾಡಿದ
ಮನುಜ ಸ್ವಾಮಿಗೆ ಲಿಂಗವಸ್ತ್ರವ
ಕನಸಿನೊಳು ಕೊಡಲಿಲ್ಲ ಕೊಡಬೇಕೆಂಬುವರಿವಿಲ್ಲ
ಜನರೊಳಗೆ ತಾನೊಬ್ಬನೇ ಮೇ-
ಲೆನಿಸಿಕೊಳ್ಳಲು ಹಾಗೆ ಪೇಳ್ದನು
ಧನಿಕ ದರ್ಪಗುಣಾಂಧನಾಗಿರ್ದಪನು ಲಿಂಗಪ್ಪ ೧೮

ಒಂದು ದಿನ ಲಿಂಗಪ್ಪ ಧನಿಕನು
ನಂದದಿಂ ತಾ ಕೊಂಡ ಹತ್ತಿಯ
ದಿಂಡುಗಳ ಸಲೆ ಹತ್ತುಗಾಡಿಗಳಲ್ಲಿ ತುಂಬಿರ್ದು
ಮುಂದಿನಾ ಹುಬ್ಬಳ್ಳಿ ಪೇಟೆಗೆ
ಚೆಂದದಿಂ ಸಾಗಿರಲು ವೀರಪ-
ನೆಂದು ಕರೆಯುವ ಬಡ ಭಕುತ ತಾನೊಂದು ಅಂಡಿಗೆಯ ೧೯

ಪೇರಿಕೊಂಡಂದಿನ ದಿನವೆ ತಾ
ದಾರಿಯೊಳ್ಬರುತಿರಲು ಕಂಡನು
ಮೀರಿ ಗರ್ವದಿ ಮೆರವ ಸಿರಿವಂತನನು ವಿನಯದಲಿ
ಸಾರಿ ಶರಣೆಂದೆನುತಲಾತಗೆ
ಸಾರ ಯೋಗಿಗೆ ಲಿಂಗವಸ್ತ್ರವ-
ನಾರು ತರಲಿಲ್ಲಿಂದಿಗೂ ನೆನಪಿಟ್ಟು ತರಬೇಕು ೨೦

ಎನಲು ರೇಗಿದನಾ ಧನಾಢ್ಯನು
ನಿನಗೆಯೇತಕೆಯದರ ಗೊಡವೆಯು ?
ನಿನಗದರ ಚಿಂತೆಯಿರೆ ನೀನೇ ಕೊಂಡುಕೊಡು ಹೋಗು
ನನಗೆ ಹೇಳುವ ಧೈರ್ಯವಾಯಿತೆ ?
ಮನಕೆ ನಾಚಿಕೆಯಿಲ್ಲದಾಯಿತೆ ?
ಧನಿಕನೆಂಬುವ ಪರಿವೆಯಿಲ್ಲವೆ? ನಡೆಯೊ ಛೀ ಮೂಢಾ ೨೧

ಎಂದೆನಲು ವೀರಪ್ಪ ತಾ ಮನೆ-
ನೊಂದು ಪೇಟೆಗೆ ಹೋಗಿ ಮರುದಿನ
ಒಂದು ಲಿಂಗದ ವಸ್ತ್ರಮಂ ಗಡ ಕೊಂಡು ತಂದಿಹನು
ಅಂದು ಆತನ ಹತ್ತಿಯಂಡಿಗೆ
ಹೊಂದಿಹುದು ದುಪ್ಪಟ್ಟು ತೂಕವ
ನಿಂದ ಅಂಗಡಿಸೇವಕರು ಬಹು ಚಕಿತರಾಗಿಹರು ೨೨

ತೂಗಿದರು ಮತ್ತೊಮ್ಮೆ ದಿಂಡನು
ಹಾಗೆಯೇ ಉಳಿದಿರಲು ತೂಕವು
ಬೇಗದಿಂಮಡಿಗೆಯು ಕೊಯ್ದು ಪರೀಕ್ಷೆ ಮಾಡಿದರು
ಆಗ ಕಾಣದಿರೆನಿತು ದೋಷವು
ಈಗಲೀತನು ಭಾಗ್ಯವಂತನು
ಪೋಗಲ್ಕೆ ದುಪ್ಪಟ್ಟುಮೌಲ್ಯವ ಕೊಂಡು ತಾನೆಂದು ೨೩

ಲಿಂಗಪನ ಅಂಡಿಗೆಗಳಾ ದಿನ
ಅಂಗಡಿಯ ಜನ ತೂಗಿ ನೋಡಲು
ಭಂಗಗೆಟ್ಟರ್ಧಕ್ಕೆ ಇಳಿಯಿತು ತೂಕವದಾ ನೋಡಾ
ಪಿಂಗದಾತನು ಮತ್ತೆ ತೂಕವ-
ಸಂಗಡಿಯ ಜನರಿಂದೆ ಮಾಡಿಸೆ
ಹಾಂಗೆ ತಾನರ್ಧಕ್ಕೆ ಉಳಿಯಿತು ಭಾಗ್ಯಹೀನನಲಾ ೨೪

ನೋಡಿದವರೆದ ಬೆರಗುವಟ್ಟರು
ಬೇಡಿಬಂದಿಹ ವೀರಪನು ದಿಟ
ಕಾಡಿಹುದು ವಿಧಿ ಲಿಂಗಪಗೆ ನಿಜವೆಂದು ನುಡಿದಿಹರು
ರೂಢಿಗೀಶನ ದಯದಿ ವೀರಪ
ನಾಡೆ ಹೊಲಮನೆಸಂಪದಗಳಿಂ
ನಾಡಿನಲಿ ಬಾಳಿದನು ಸುಖಸಂತೋಷದಿಂ ಮುಂದೆ ೨೫

ಯೋಗಿಯನ್ನವಗಣಿಸಿ ನೋಡಿದ
ಭೋಗಿ ಲಿಂಗಪನೆಲ್ಲ ಸಂಪದ
ಬೇಗಬೇಗನೆ ಕರಗಹತ್ತಿತು ಕೊನೆಗೆ ಬಡತನವು
ಸಾಗಿ ಬಂದವನನ್ನು ಮುತ್ತಿತು
ಭೋಗದಾಟವನಾರು ಬಲ್ಲರು ?
ಯೋಗಿಯಂ ಧಿಕ್ಕರಿಸಿ ಸೊಗದಿಂ ಬಾಳಿದವರುಂಟೆ ? ೨೬

## ಕಾಲುವೆಹಳ್ಳಿ

ಕಾಲುವೆಯ ಹಳ್ಳಿಯಲಿ ಯೋಗಿಯು
ಕಾಲನಿಟ್ಟುರೆ ಜನರ ಭಕ್ತಿಗೆ
ಲೀಲೆಯಿಂ ತೋರಿಸುತೆ ಪೂಜಾಸಕ್ತನಾಗಿರಲು
ಫಾಲನೇತ್ರನ ಪೂಜೆಗೋಸ್ಕರ
ಲೋಲಯೋಗಿಯು ಭಕ್ತರೊಂದಿಗೆ ೧೭
ಓಲಯಿಸಿ ಹೂ ಪತ್ರಿಯೆತ್ತಲು ಹೊರಗೆ ನಡೆದಿರಲು

ದಾರಿಯಲಿ ಬಾಲಕರು ಕೆಲವರು
ಮೀರಿ ಓಡಾಡುತ್ತಲಿರ್ದರು
ಭಾರಿ ಪೆಟ್ಟೊಬ್ಬನಿಗೆ ತಗಲಿರೆ ಜಾರಿಬಿದ್ದಿರಲು
ಸಾರಿಯಾತನ ಬಳಿಗೆ ನೋಡಲು
ಸೋರುತಿದೆ ನೆತ್ತರವು ತಲೆಯಿಂ
ಮೀರಿದಾಕ್ರೋಶವನು ಗೈಯುತಲಿರ್ದನಾ ಬಾಲ ೧೮

ನೆರೆದ ಜನರಂ ಯೋಗಿ ಕೇಳ್ದನು
ಹರಿದು ಕೊಡಿರೈ ಬಟ್ಟೆಯಂಚನು
ಸುರಿವ ರಕ್ತದ ಮೇಲೆ ಪಟ್ಟಿಯ ಕಟ್ಟುವೆನು ಬೇಗ
ಗುರುವರೇಣ್ಯನು ನುಡಿದ ಮಾತಿಗೆ
ಹರಿದುಕೊಡದೆಷ್ಟೆಷ್ಟು ಬಟ್ಟೆಯ
ಬರಿದೆ ಮೌನದಿ ನಿಂದು ನೋಡುತಲಿರ್ದರಾ ಜನರು ೧೯

ಅಲ್ಲಿ ಮೌನಪ್ಪೆಂಬ ಪೆಸರಿನ
ಬಲ್ಲಿದನು ಪಂಚಾಳನೋರ್ವನು
ಬಲ್ಲನೈ ಶಿವಯೋಗಿಮಹಿಮೆಯನಾತ ಪರಿತಂದು
ಒಲ್ಲಿಯಂಚನು ಹರಿದುಕೊಟ್ಟನು
ಸಲ್ಲಲಿತ ಶಿವಯೋಗಿ ಹರ್ಷದೊ-
ಕಲ್ಲಿ ಬಿದ್ದಿಹ ಬಾಲನಿಗೆ ತಲೆಪಟ್ಟಿ ಕಟ್ಟಿದನು ೨೦

ಅನಿತರೋಳ್ಳೈತಂದನಲ್ಲಿಗೆ
ಸನಿಹ ಹಿರೆಯಕೆರೂರ ಗ್ರಾಮದ
ಧನಿಕನಾದ ಶಿವಪ್ಪನಾ ಮನೆಯೊಳು ಚಚ್ಚರದಿ
ವಿನಯದಿಂ ಪೊಡಮಟ್ಟು ಗುರುವಿಗೆ
ಧನಿಕನಿತ್ತಿಹ ಕಾಣಿಕೆಯ ಸಲೆ
ಮನಸಿನಿಂ ಕೈಮುಗಿದು ಪೇಳ್ದನು ಗುರುವಿಗಿಂತೆಂದು ೩೧

ಯೋಗಿಚಿತ್ತೈಸೆನ್ನ ಮಾತನು
ಈಗ ನಮ್ಮಯ ಸಾಹುಕಾರನು
ಬೇಗ ಧೋತರಜೋಡ ಮೌನಪ್ಪನಿಗೆ ಕಾಣಿಕೆಯು
ರಾಗದಿಂ ತಾನಿತ್ತು ಕಳುಹಿದ-
ನೀಗ ತಾವದನರ್ಪಿಸಿರಿಯುವ-
ಗೀಗಳೇ ನಾಂ ಪೋಪೆನಪ್ಪಣೆನೀಡಿರಿಂತೆಂದ ೩೨

ಎಂದಿಗೂ ಕೊಡದಾ ಧನಿಕ ತಾ-
ನಿಂದು ನನಗೇಕಿತ್ತನೈ ಶಿವ
ಎಂದು ಸಾಶ್ಚರ್ಯದೊಳು ನಿಂದಿರೆ ಯೋಗಿಯಿಂತೆಂದ
ಇಂದುಧರನೇ ನಿನ್ನಭಕ್ತಿಗೆ
ಚಂದದಿಂ ಧೋತರವನಿತ್ತನು
ಮುಂದೆ ನಿನ್ನಯ ಮನೆತನದ ಅಭಿವೃದ್ಧಿಯಾಗುವದು ೩೩

ಹೊರಟನಾ ಪಂಚಾಳನಲ್ಲಿಂ
ಚರವರೇಣ್ಯನ ಪದಕೆ ವಂದಿಸಿ
ನೆರೆಯ ಹಿರೆಯಕೆರೂರ ಗ್ರಾಮಕೆ ಧನಿಕನಿದ್ದೆಡೆಗೆ
ಮರೆದು ಧೋತರಜೋಡ ಕಾಣಿಕೆ-
ಯರರೆ! ನನಗೇಕಿಂದು ಕಳಿಸಿದೆ
ಪರಮಯೋಗಿಗಪೆನಲು ಧನಿಕನು ನುಡಿದನುತ್ತರದಿಂ ೩೪

ನಾನು ಕಳಿಸಿದೆನೆಂಬುದಿದು ಪುಸಿ
ಏನು ಸೋಜಿಗವಪ್ಪ ಮೌನಪ
ನಾನು ನಿನಗೇತಕ್ಕೆ ಕಳಿಸಲಿ ಧೋತರದ ಜೋಡ
ನಿನಗೆ ಯೋಗಿಯದೋರ್ವನಿತ್ತುದ
ನಾನು ಕಂಡೆನು ಕನಸಿನೊಳು ದಿಟ
ತಾನೆ ಯೋಗಿಯು ನಿನಗೆ ಕೊಟ್ಟಿರೆ ನನ್ನ ಮಾತೇಕೆ? ೧೫

ಇದನು ಮೌನಪನೆಲ್ಲ ಜನರಿಗೆ
ಮುದದಿ ಪೇಳಲು ಯೋಗಿಲೀಲೆಯ
ಹದವನರಿತಾತನನು ಕೊಂಡಾಡಿದರು ಮನವಾರೆ
ಸದುಹೃದಯ ಯೋಗೀಂದ್ರನಾಗಳೆ
ಹೆಮಳದಿಂದೆಲ್ಲರನು ಹರಸುತೆ
ಹೃದಯ ತುಂಬಿದೆ ಪ್ರೇಮದಿಂ ಹೊರಹೊಂಟನಾ ಪುರದಿಂ ೧೬

## ಹುಬ್ಬಳ್ಳಿ

ಇಂದುಧರಕೃಪೆಯಿಂದೆ ಧರೆಯೊಳು
ಚೆಂದದಿಂ ಹುಬ್ಬಳ್ಳಿ ನಗರವು
ಎಂದಿಗೂ ಸುಖಸಂಪದಭಿವೃದ್ಧಿಯೊಳು ಶೋಭಿಪುದು
ನಂದಮೂರುತಿ ಬೂದಿಯೋಗಿಯು
ಬಂದಿರಲು ಹುಬ್ಬಳ್ಳಿನಗರಕೆ
ಚೆಂದದಿಂ ರುದ್ರಾಕ್ಷಿಮಠದಧಿಪತಿಗಳಾಗಿರ್ದ ೧೭

ಶ್ರೀ ಬಸವಲಿಂಗೇಶಸ್ವಾಮಿಗ-
ಳಾ ಬಸವಸಂದೇಶಗಾರನ
ಶೋಭೆಯಿಂದಿದಿರ್ಗೊಂಡು ಮಠದೊಳು ಸತ್ಕರಿಸುತಿಹರು
ಆ ಭವನಕೈತಂದು ಭಕ್ತರು
ಉಭಯ ಶ್ರೀಪಾದಂಗಳಿಗೆ ಸಲೆ
ಅಭಿನಮಿಸಿಯವರೀರ್ವರಾಶೀರ್ವಾದ ಪೊಂದಿದರು ೧೮

ಚರವರೇಣ್ಯರು ಒಬ್ಬರೊಬ್ಬರ
ಹಿರಿಮೆಯಂ ಬಣ್ಣಿಸುತಲಿರ್ದರು
ನೆರೆದ ಭಕ್ತಜನಕ್ಕೆ ಅರಿವುಂಟಾಗಲೆಂದೆಳಸಿ
ಕರ ಮುಗಿದು ಶಿರಬಾಗಿ ಭಕ್ತರು
ಹರಹರವೊಳವರಾಡಿದಾ ನುಡಿ
ಹರುಷದಿಂ ಸಲೆ ಕೇಳಿ ಸಂತಸಗೊಂಡು ನಿಂದಿಹರು ೩೯

ಅಸಮಮಹಿಮನು ಬೂದಿಯೋಗಿಯು
ಬಸವಸಂದೇಶಕನು ಪ್ರಭುವಿನ
ಹೆಸರ ಬೆಳಗಲ್ಕಾತನಾ ಗದ್ದುಗೆಯನೆಲ್ಲೆಡೆಗೆ
ಪಸರಿಸುತೆ ಸ್ವಯಲೀಲೆಗಳ ಸಲೆ
ವಸುಧೆಯೊಳ್ಮೆರೆಯಿಸುತಲಿರ್ಪನು
ಮಿಸುಪ ಬೂದಿಯ ಶಕ್ತಿಯಿಂ ಜನರುದ್ಧರಿಪ ನೋಡಾ ೪೦

ಎನಲು ಟೀಕೆಯ ಮಠದ ಶ್ರೀಗಳು
ವಿನಯದಿಂ ಬೂದೀಶ ಪೇಳ್ದನು
ಅನಘನಪ್ರತಿಮಂ ನಿರಂಜನಮೂರ್ತಿ ಸುವಿರಕ್ತ
ಘನತರದ ಶಾಸ್ತ್ರಾರ್ಥಪಂಡಿತ-
ನನುಭವಿಯು ವೇದಾಂತನಿಷ್ಠನು
ಜನವರಿಯೆ ಶ್ರೋತ್ರಿಯನು ತಾ ಸಲೆ ಬ್ರಹ್ಮನಿಷ್ಠನಲಾ ೪೧

ಎಂದು ಟೀಕೆಯ ಮಠದ ಸ್ವಾಮಿಯು
ನಂದದಿಂ ಬೂದೀಶ ಪೊಗಳಲು
ಬಂದ ಭಕ್ತರು ಈರ್ವರಂ ಸಮಭಾವದಿಂ ಕಂಡು
ಇಂದು ನಾವತಿ ಸುಕೃತಿಗಳು ಗಡ
ಸಂದ ಸ್ವಾಮಿಗಳೀರ್ವರೂ ನಮ-
ಗಿಂದುಧರನಂತೊಪ್ಪುತಿರ್ಪರು ಶಾಂತ ಮೂರ್ತಿಗಳು ೪೨

ಹೀಗೆ ಸ್ತುತಿಸುತ್ತಿರಲು ಭಕ್ತರು
ಹಾಗೆಯೇ ಬಲಗಡೆಗೆ ಕುಳಿತಿಹ
ಯೋಗಿ ಬೂದೀಶ್ವರನು ಎಡಗಡೆ ಕುಳಿತುದಂ ಕಂಡು
ಹೇಗೆಯಾಸನಪಲ್ಲಟವು ತಾ-
ನಾಗಿರುವುದೆಂದಚ್ಚರಿಯು ಮಿಗೆ
ಯೋಗಿಗಳ ಮಾಯಾವಿನೋದವನರಿವರಾರೆಂದು ೪೩

ಭಾವಿಸುತ್ತಿರೆ ಬೂದಿಯೋಗಿಯು
ಭಾವುಕರಿಗೆ ಅದೃಶ್ಯನಾದನು
ಏವುದೆಂದೆನುತಿರಲು ಟೀಕೆಯಸ್ವಾಮಿ ಮರೆಯಾದ
ಆವುಭಯ ಯೋಗಿಗಳು ಪುನರಪಿ
ಭಾವಿಕರ ಕಣ್ಗೆಸೆಯಲಾಕ್ಷಣ
ನಾವು ಯೋಗದ ಮಹಿಮೆಯನ್ನರಿಯುವೆವೆ ಪಾಮರರು ೪೪

ಎಂದು ಬೆರಗಾಗಿರ್ದ ಸಮಯದಿ
ಬಂದನಲ್ಲಿಗೆ ಮೂಕನೋರ್ವನು
ಮಂದ ಭಾಗ್ಯನು ವಂದಿಸಿದ ಬೂದೀಶನಡಿಗಳ್ಗೆ
ಬಂದೆಯಾ ಬಾರಪ್ಪ ಭಕ್ತನೆ
ಚೆಂದದಿಂ ಪೇಳ್ ನಿನ್ನ ಪೆಸರನು
ಎಂದು ನುಡಿಯಲು ಮೂಕ ಹುಳು ಹುಳು ನೋಡುತಲಿ ನಿಂದ ೪೫

ಯೋಗಿವರ್ಯಗೆ ಪೇಳ್ದನೋರ್ವನು
ಬಾಗಿ ವಿನಯದಿ ಗುರುವೆ ಈತನು
ಆಗಿಹನು ಮೊದಲಿಂದೆ ಮೂಕನು ಮಾತನಾಡನಲಾ
ಯೋಗಿಯಿದನಾಲಿಸುತೆ ಪೇಳ್ದನು
ನಾಗ ಭೂಷಣನರಿಯನೇನಿದ ?
ಹೇಗೆ ತಾ ಮಾತಾಡಿಸುವನವನಿಂದೆ ತಿಳಿಯದಲಾ ೪೬

ಎಂದು ಮಂತ್ರಿಸಿ ಬೂದಿಯಂ ತಾ
ನಂದದಿಂ ನಾಲಗೆಗೆ ತೊಡೆದನು
ಮಂದಹಾಸದಿ ಪೇಳ್ದನಾತಗೆ ಕೇಳು ಗಂಗಪನೇ
ಚೆಂದದಿಂ ನುಡಿ ಬಸವ ಶಿವ ಶಿವ-
ನೆಂದು ಪೇಳ್ದುದ ಕೇಳಲಾಕ್ಷಣ
ಸಂದಿಸಿರೆ ವಾಕ್‌ಶಕ್ತಿ ಬಸವಾ ಶಿವನೆಯಿಂತೆಂದ ೪೭

ನೋಡಿದರು ಈ ಲೀಲೆಯಂ ಗಡ
ಪಾಡಿದರು ಮಹಿಮೆಯನು ಯೋಗಿಯ
ನಾಡೆಯಚ್ಚರಿಗೂಡಿ ನುಡಿದರು ನಾವೆ ಸುಕೃತಿಗಳು
ಬೇಡಿ ಬಗಸಿದರೊಗೆಯದಾ ಪ್ರಭು-
ವಾಡುತಿಲ್ಲಿಗೆ ಕರುಣಿಸಿರ್ಪನು
ಮಾಡುವಾ ಮಂಗಲವನಿಂತೆಂದಾಗ ಪಾಡಿದರು ೪೮

ಮೋದದಾ ಹುಬಳ್ಳಿ ನಗರದೊ-
ಳಾದಿ ಗಂಟೀಕೇರಿ ಯೋಣಿಯೊ-
ಳಾದರದಿ ಬೂದೀಬಸವ ವಿಗ್ರಹವ ನೆಲೆಗೊಳಿಸಿ
ಬೂದಿಯೋಗಿಗಳಲ್ಲಿ ಕೆಲದಿನ
ಮೋದದಿಂ ರುದ್ರಾಕ್ಷಿ ಮಠದೊಳು
ಸೋದರಸ್ನೇಹದೊಳು ಕೋಣೆಯೊಳೊಂದರೋಳ್ ನಿಂದು ೪೯

ಜಪತಪೋನುಷ್ಠಾನವೆಸಗಲು
ವಪು ಸುವರ್ಣದ ಕಾಂತಿಯೊಂದಿರೆ
ಕಪಿಲ ಮುನಿಯಂತಾ ಮಹಾ ಬೂದೀಶನೊಪ್ಪಿರ್ದ
ವಿಪುಲವಾದಾ ಕೋಣೆಯಿಂದಿಗು
ತಪದ ಮಹಿಮೆಯು ನೆನಪ ನೀವುದು
ಅಪರಶಿವನಲ್ಲಿಂದ ಬೂದನಗುಡ್ಡಕೈತಂದ ೫೦

ಸಿಂದೋಳಿಪುರದ ನಗರದಿಂ ಪ-
ನ್ನೆರಡು ಮೈಲಿನ ಮೇಲೆ ಗುಡ್ಡವು
ಗುರುವರರು ತಾವಲ್ಲಿಗಾಗಮಿಸಿರಲು ಮನದಂದು
ಪರಿವ ತೊರೆಯೊಂದಲ್ಲಿ ಶೋಭಿಸೆ
ತರುಲತಾಕುಸುಮಗಳು ರಂಜಿಸೆ
ಮಿರಪ ಬಿಲ್ವಮಹೀರುಹವು ತಾನೊಂದು ಕಂಗೊಳಿಸೆ ೫೧

ಅಲ್ಲಿ ಬೂದೀಬಸವ ಮೂರ್ತಿಯ -
ನೊಲ್ಮೆಯಿಂ ಸ್ಥಾಪಿಸುತೆ ನಿಂದರು
ಲೀಲೆಯಿಂ ನಿಜಜಪತಪೋನುಷ್ಠಾನ ಪರರಾಗಿ
ಚೆಲ್ವಮಂಗಲವಾದ ತಾಣಕೆ
ಸಲ್ಲಲಿತ ಬೂದೀಶ ಪೆಸರೊಳು
ಬಲ್ಲವರು ಕರೆದಿಹರು ಬೂದನಗುಡ್ಡವಿಂತೆಂದು ೫೨

ಒಂದು ದಿನ ಹುಬ್ಬಳ್ಳಿ ಗ್ರಾಮದೊ-
ಳಿಂದ ಕೆಲಜನ ಭಕ್ತರಲ್ಲಿಗೆ
ಬಂದು ಯೋಗಿಯ ಪಾದಪದ್ಮಕೆ ನಮಿಸಿ ನಿಂದಿರಲು
ಇಂದು ಕೂಡಲಸಂಗಮೇಶನ
ಚೆಂದ ಯಾತ್ರೋತ್ಸವವು ನಡೆವುದು
ಸುಂದರರಥ ತೇರಿಂದೆ ಸಾಯಂಕಾಲ ಸಾಗವುದು ೫೩

ಎಂದು ನುಡಿಯಲು ಭಕ್ತನೋರ್ವನು
ಮಂದಹಾಸವಿಯೋಗಿ ಪೇಳ್ದನು
ಇಂದು ನಿಮಗಾ ಸಂಗಮೇಶನ ದರ್ಶನವು ಬೇಕೆ?
ಸಂದಯಾತ್ರೋತ್ಸವವ ನೋಡ -
ಲ್ಕೆಂದು ಮನ ಹಾತೊರೆಯುತಿರ್ಪುದೆ ?
ಇಂದಿನಾ ದಿನವಲ್ಲಿಗಾಂ ನಿಮ್ಮನ್ನು ಕರೆದೊಯ್ವೆ ೫೪

ಓೀಗೆ ನುಡಿಯಲು ಯೋಗಿ ರಜನು
ಬಾಗಿ ನಿಂದಿಹ ಜನಗಳೆಲ್ಲರು
ಆಗ ಮನದೊಳು ಯೋಚಿಸುತ್ತಿರ್ದಪರು ತಮ್ಮೊಳಗೆ
ಹೇಗೆ ಶಕ್ಯವು ದೂರ ಸಂಗಮ ?
ಪೇಗೆ ನಮ್ಮನ್ನೊಯ್ವರಲ್ಲಿಗೆ
ಯೋಗಿ ಮಾತದು ನಾವು ಮರು ಮಾತಾಡದಿಹುದೊಳಿತು ೫೫

ಎಂದು ಮೌನದೊಳೆಲ್ಲರಿರುತಿರೆ
ಚೆಂದದಿಂ ಶಿವಯೋಗಿ ನುಡಿದನು
ಬಂದು ನಿಲ್ಲಿರಿ ಸಾಲುಹಿಡಿದೀ ರಮ್ಯ ತಾಣದಲಿ
ನಂದದಿಂ ಕಣ್ಮುಚ್ಚಿ ಸನಿಹದಿ
ನಿಂದವರ ಕೈಹಿಡಿದು ಕೊಳ್ಳಿರಿ-
ಯೆಂದು ತಮ್ಮಯ ಯೋಗದಂಡದ ತುದಿಯ ಮೊದಲಿಗಗೆ ೫೬

ಕೊಟ್ಟು ಭಕ್ತರಿಗೆಲ್ಲ ಭೂತಿಯ-
ಪಟ್ಟಮಂ ಹಣೆಗಿರಿಸಿ ಗುರುಗಳು
ನೆಟ್ಟನೇ ತಾವೊಂದು ಯೋಗದ ದಂಡದಾ ತುದಿಯ
ಅಟ್ಟಹಾಸದಿ ಪಿಡಿದು ಪೇಳ್ದರು
ನಟ್ಟನಡುವಾರ್ ಕಣ್ಣು ತೆರೆಯದೆ
ಕೊಟ್ಟ ಕೈಯಂ ಬಿಡದೆ ನಾ ಪೇಳ್ದಂತೆ ನಡೆಯಿರೆಲಾ ೫೭

ಯೋಗಿವಚನವ ಪಾಲಿಸುತ್ತಿರ-
ಲಾಗ ಸಂಗಮಕ್ಷೇತ್ರ ಕಣ್ಣಿಗೆ
ಬೇಗದಿಂ ಕಾಣಿಸಿತು ಕೃಷ್ಣೆ ಮಲಾಪಹಾರಿಗಳು
ರಾಗದಿಂ ಸಲೆ ಕೂಡಿ ಪರಿದುದ-
ನಾಗ ನೋಡಿದರವರು ಹರ್ಷದಿ
ನಾಗಭೂಷಣ ಸಂಗಮೇಶನ ದರ್ಶನವ ಪೊಂದಿ ೫೮

ಪರಮ ಸಂತೋಷವನು ತಾಳ್ದರು
ಇರುತಿರಲು ಶ್ರೀ ಸಂಗಮೇಶನ
ವರ ರಥೋತ್ಸವವನ್ನು ನೋಡಲು ಯಾತ್ರಿಕರು ನೆರೆದು
ಹರಹರಾ ಮಾದೇವನೆನುತಿರೆ
ಸರಸರನೆ ತೇರ್ ಚಲಿಸಿರಲು ಗುರು–
ವರನು ಕಣ್ಣನು ತೆರೆಯಿರೆಂದೆಲ್ಲರ್ಗೆ ಪೇಳಿದನು ೫೯

ತೆರೆಯೆ ಕಣ್ಣನು ಸರ್ವಭಕ್ತರು
ಗುರುವರೇಣ್ಯನ ಮುಂದೆ ಗುಡ್ಡದೆ
ನೆರೆಯೊಳಿರ್ದುದ ಕಂಡು ಪರಮಾಶ್ಚರ್ಯವೊಂದಿದರು
ಪರಮಯೋಗಿಯ ದೂರದರ್ಶನ
ದೂರಗಮನ ಸುದೂರ ಶ್ರವಣವ–
ನಾದರಿಸಿ ಕೊಂಡಾಡಿದರು ಮಾನವಾರೆ ಲೀಲೆಯನು ೬೦

ಒಂದು ದಿನ ಹುಬ್ಬಳ್ಳಿ ಗ್ರಾಮದ-
ಲೊಂದು ಮನೆತನ ದೀರ್ವಸ್ತ್ರೀಯರು
ಬಂದು ಯೋಗಿಯ ಪದಕೆ ವಂದಿಸಿ ಬೇಡಿಕೊಂಡಿಹರು
ತಂದೆ ನಮಗಾಗಿಲ್ಲ ಸಂತತಿ –
ಯಿಂದು ನಿಮ್ಮಯ ಮಹಿಮೆಯಾಲಿಸಿ
ಬಂದಿಹೆವು ನಿಮ್ಮೆಡೆಗೆ ಮಕ್ಕಳ ಬೇಡಲುತ್ಸುಕದಿ ೬೧

ಹೀಗೆ ನೀಲಮ ಸಂಗಮಾಂಬುವ–
ರಾಗ ಯೋಗಿಗೆ ಬೇಡಿಕೊಳ್ಳಲು
ಯೋಗಿ ಜೋಳಿಗೆಯಿಂದೆರಡು ಭಸ್ಮಗಳ ಹೊರದೆಗೆದು
ತೆಗೆದು ಕೊಳ್ಳಿರಿ ತಾಯಿಗಳಿರಾ,
ಸೊಗದಿ ಭಸ್ಮದ ಗಟ್ಟಿಗಳ ನೀವ್
ಬೆಗಡುಗೊಳ್ಳದೆ ನಿತ್ಯ ಸೇವಿಸಿರಮ್ಮ ಭಕ್ತಿಯಿಂ ೬೨

ನಿಮಗೆ ಮಕ್ಕಳು ಹುಟ್ಟುವವು ನಿಜ
ಸುಮನಂದಿದನಾರ್ಗು ಪೇಳದೆ
ನಮಿಸಿ ಬಸವಾಯೆಂದು ಗೌಪ್ಯದಿ ಕೊಳ್ಳಿರೌ ನಿತ್ಯ
ಗಮನಿಸಿದಳೀ ಮಾತ ನೀಲಮ
ಮಮತೆಯಿಂ ಸುತನನ್ನು ಪಡೆದಳು
ಗಮನಿಸದೆ ಸಂಗಮ್ಮ ಕೆಟ್ಟಳು ನೋಡು ವಿಧಿಯಾಟ ೬೩

ನೆರೆಮನೆಯ ಮರುಳ್ವೆಣ್ಣುಗಳಿಗೀ
ಗರುವರನು ಭಸ್ಮವನು ಕೊಟ್ಟುದ
ಸ್ಮರಿಸಿ ಬಸವನ ಸೇವಿಪುದುಯಿಂತೆಂಬ ಗುಟ್ಟನ್ನು
ಹೊರಗೆಡವಿದಳು ಸಂಗಮನು ಹಾಯ್!
ಮರುಳುವೆಣ್ಗಳು ಪೇಳ್ದರಾಕೆಗೆ
ಮರುಳನಾ ಬೈರಾಗಿ ಭಸ್ಮವ ಕೊಟ್ಟು ಸ್ತ್ರೀಯರನು ೬೪

ಮರುಳುಗೊಳಿಸುವನವ್ವ ತಿಳಿನೀ-
ನಿರದೆ ಭಸ್ಮವನಿಟ್ಟು ಕೊಳ್ಳದೆ
ನೆರೆ ಬಿಸುಟಿ ಬಿಡು ತಿಪ್ಪೆಯೊಳು ನೀ ಜಾಣೆ ಸಂಗಮ್ಮ
ದುರುಳ ಹೆಂಗಸರಾಡಿದಾ ಪರಿ-
ಯರಿದು ಸಂಗಮ ತಿಪ್ಪಿಗೆಸೆದಳು
ಗುರುಕರುಣ ತಪ್ಪಿದುದು ಮಕ್ಕಳ ಕಾಣದಾಗಿಹಳು ೬೫

ಮುಂದೆ ನೀಲಮ್ಮನಿಗೆ ಮಗು ತಾ-
ನೊಂದು ಜನಿಸಿದ ಸುದ್ದಿ ತಿಳಿಯಲು
ನೊಂದು ಗೆಳತಿಯುರೊಡನೆ ಪಶ್ಚಾತ್ತಾಪದಿಂ ಬಂದು
ನಂದದಿಂ ಕುಳಿತಂಥ ಯೋಗಿಗೆ
ವಂದಿಸಿರಲವಳನ್ನು ಗುರ್ತಿಸಿ
ಕಂದ ನಿನ್ನಯ ಕುಶಲವಾಗಿಹನೇನು ಪೇಳಮ್ಮಾ ೬೬

ಎಂದೆನಲು ತಾನೊಂದ ನುಡಿಯದೆ
ಮಂದಭಾಗ್ಯಳು ಪೇಳ್ದಳೆಲ್ಲವ
ಕುಂದು ತರಬಹುದೇನು ಮಗಳೇ ನನ್ನ ವಚನಕ್ಕೆ ?
ಹಿಂದಿರುಗು ನಾ ಬರ್ಪೆ ಶಿಪ್ಪೆಗೆ
ತಂದುಕೊಳ್ಳುವೆ ನನ್ನ ಭಸ್ಮವ-
ನೆಂದು ಬರೆಯುವಳೊಡನೆ ಭಸ್ಮವು ಸ್ವರ್ಣವಾಗಿಹುದು ೬೭

ಕಂಡಳಿದನಾ ದೈವಹೀನಳು
ಗಂಡು ಮಗ ತನಗಿಲ್ಲದಾದನು
ಕಂಡ ಸ್ವರ್ಣದಗಟ್ಟಿ ಹೋಯಿತು ನಿಂದಳಳಲಿಂದೆ
ಕಂಡವರ ಮಾತನ್ನು ಕೇಳಿದ
ಭಂಡ ಜನ್ಮಕೆ ಧಿಕ್ಕೆನುತೆ ತಾ-
ನುಂಡಳಾ ಫಲಭೋಗವನ್ನದ ತಪ್ಪಿಸುವರಾರು ! ೬೮

ಹೋದ ಹೋದಲ್ಲೆಲ್ಲ ಯತಿಗಳು
ಮೋದದಿಂ ಬಹುರಮ್ಯತಾಣದಿ
ಸಾಧಿಸುತೆ ಶಿವಯೋಗ ಸುಸಮಾಧಿಯಲಿ ನಲಿದಿಹರು
ಬೋಧೆಗೈದರು ಭಕ್ತವೃಂದಕೆ
ಹಾದಿತೋರಿದರಾರ್ತಜನರಿಗೆ
ಮೇದಿನಿಗೆ ಹಬ್ಬಿಸಿದರಾ ಬಸವೇಶ ಮೂರ್ತಿಗಳ ೬೯

ಧರೆಯೊಳಗೆ ಹುಬ್ಬಳ್ಳಿ ನಗರದಿ
ಮೆರೆವ ಗಂಟೀಕೆರೆಯೊಳೆಮ್ಮೊ .
ಪರಮ ಪಾವನ ಬೂದಿಯೋಗಿಯು ನಂದಿವಿಗ್ರಹವ
ನೆರೆ ಪ್ರತಿಷ್ಠೆಯಗೈದು ತಾನನ-
ವರತವಲ್ಲಿಯೆ ಲಿಂಗದೋಳ್ ಮೈ-
ಮರೆದು ಸಿಬ್ಬೆರಗಾಗಿ ನಿಂದಿರಲೊಂದು ಶುಭದಿನದಿ ೭೦

ಮೂರುಸಾವಿರ ಮಠಜಗದ್ಗುರು
ಚಾರು ಶ್ರೀ ಗುರುಸಿದ್ಧ ಯೋಗಿಯು
ಭೂರಿ ಶಿವಯೋಗಾತ್ಮಲಿಂಗದಿ ತಾನೆ ತಾನಾಗಿ
ವಿಹಾರಿದಾನಂದದೊಳು ನಲಿದಿರೆ
ಪಾರಮಾರ್ಥಿಕ ದೃಷ್ಟಿಯಿಂದಿದ-
ನಾರಯಿದು ಬೂದೀಶನಾಗಳೆ ಧ್ಯಾನವನ್ನಿಳುಹಿ ೭೧

ಹೊರಟು ಶ್ರೀಗುರುಸಿದ್ಧಯೋಗಿಯ
ನೆರೆಯು ಸಾರ್ದೂರೆ ಸ್ನಿಗ್ಧದೃಷ್ಟಿಯೊ-
ಳೊರೆದೊರೆದು ನೋಡುತಿರೆ ಯೋಗಿಯು ಭರದಿ ಕಣ್ದೆರೆಯೆ
ಪರಮ ಬೂದೀಯೋಗಿ ನಿಂದುದ-
ನರಿದು ಮುಂಬಂದವರ ತಬ್ಬಲು
ಸರಸದಿಂದೀರ್ವರು ನಿಜಾನಂದದೊಳು ಮುಳುಗಿದರು ೭೨

ಅನಿತರೊಳ್ ಗುರುಸಿದ್ಧಯೋಗಿಯ
ಘನ ಸುಸಂದರ್ಶನಕೆ ಭಕ್ತರು
ವಿನಯದಿಂದೈತಂದು ಚರರೀರ್ವರಿಗೆ ನಮಿಸಿದರು
ಅನುನಯದೊಳಾ ಬೂದಿಯೋಗಿಯು
ಘನಮಹಿಮ ಗುರುಸಿದ್ಧಯೋಗಿಯ
ತನುವ ಸ್ಪರ್ಶಿಸೆ ತಕ್ಷಣದಿ ಗುರು ಮಾಯವಾಗಿಹನು ೭೩

ಕರಗಿ ಹೋಗಿದೆ ಮಾಂಸ ಪಿಂಡವು
ನೆರೆ ಸುಮಾತ್ರದ ಪಿಂಡವಾಗಿರೆ
ನೆರೆದ ಭಕ್ತಸ್ತೋಮವಚ್ಚರಿವಟ್ಟು ಲೀಲೆಯನು
ಸ್ಮರಿಸಿ ಕೊಂಡಾಡಿಹುದು ಬೂದಿಯ
ಪರಮ ಗುರಸಿದ್ಧೇಶನಾಕ್ಷಣ
ಮರಳಿ ಭಕುತರ ಕಂಗಳಿಗೆ ಮೊದಲಂತೆ ಕಾಣಿಸಿದ ೭೪

ಏನು ಲೀಲೆಯೊ ಬೂದಿಯೋಗಿಯ-
ದೇನು ಮಾಟವೊ ಬಲ್ಲರಾರಿದ
ತಾನೆ ಶಿವನೋ ಶಿವನು ತಾನೋ ತಿಳಿಯದೆಂದು ಜನ
ಜ್ಞಾನಿಗಳ ಸಮ್ಮುಖದಿ ಪೊಗಳಲು
ಸ್ವಾನುಭವಿ ಗುರುಸಿದ್ಧಯೋಗಿಯು
ಮಾನವರಿಗೀ ಲೀಲೆ ಸಾಧ್ಯಮೆಯೆಂದನುತ್ಸುಕದಿ ೭೫

ಪರಮ ಬೂದೀಶ್ವರನು ಮುದದಿಂ
ನೆರೆದ ಭಕ್ತರಿಗಿಂತು ಪೇಳ್ದರು
ಪರತರದ ಯೋಗಿಶ್ವರರು ಗುರುಸಿದ್ಧ ಯತಿವರರು
ಭರದಿ ಬೆಳೆಯುವದವರ ಕೃಪೆಯಿಂ
ಗುರುತರದ ಹುಬ್ಬಳ್ಳಿ ನಗರವು
ವಿರುಪ ಯಾಂತ್ರಿಕ ವ್ಯಾವಹಾರಿಕ ತಾತ್ವಿಕಾದಿಗಳಿಂ ೭೬

**ಅಂತು ಹದಿನೈದನೆಯ ಸಂಧಿಗೆ ೯೯ಲ ಪದ್ಯಕ್ಕೆ ಮಂಗಲಮಕ್ಕುಂ**
**ಭದ್ರಂ ಶುಭಂ ಮಂಗಳಂ**

ಶ್ರೀಗುರುಬಸವಲಿಂಗಾಯ ನಮಃ

# ಹದಿನಾರನೆಯ ಸಂಧಿ

## ಹರ್ಶಿ

ಸೂಚನೆ– ಹರ್ಶಿಯಿಂದೆಳವತ್ತಿ ಗ್ರಾಮ-
ಕ್ಕರ್ತಿಯಿಂ ಸಂಚರಿಸಿ ಯೋಗಿಯು
ಮರ್ತ್ಯರನ್ನುದ್ಧರಿಸಿ ಮೆರೆದನು ಲೋಕಸಂಚಾರಿ

## ಮಳೆಗಾಲ

ಆಗಸದಿ ಕಾರ್ಮೋಡ ಕವಿದಿರೆ
ಬೇಗ ಧೋ ಧೋ ಮಳೆಯು ಸುರಿಯಲು
ವೇಗದಿಂ ಹೊಳೆಹಳ್ಳ ಕೆರೆ ಕಾಲುವೆಗಳುಂ ಸೊಸೆ
ರಾಗದಿಳೆವೆಣ್ ಪಚ್ಚಪಸರುಡೆ
ಸೋಗಿನಿಂದುಟ್ಟಂತೆ ತೋರಿರೆ
ಸಾಗಿಹರು ಬಿತ್ತನೆಯ ಕೆಲಸಕೆ ಕೃಷಿಕರತಿ ಹಿಗ್ಗಿ ೧

ಪಳುಬಣ್ಣದ ಕಾಮಕಾರ್ಮುಕ
ತಾಳಿ ಬೃಹದಾಕಾರಮಿಳೆಯಿಂ-
ದೇಳುತಿದೆ ಗಗನಕ್ಕೆ ಬಾಗುತಿದಿಳಗೆ ಡೊಂಕಾಗಿ
ಪೇಳಲೇನಾನದರ ಸೊಬಗಂ
ತಾಳ ಹಾಕುತೆ ಕುಣಿ ಕುಣಿದು ಸಲೆ
ಮೇಳದಿಂ ಬಾಲಕರು ಪಾಡ್ವರು ಮೋದ ನಲವೇರೆ ೨

ಮಳೆಯು ನಿಲ್ಲಲು ನಿಂತ ನೀರೊಳು
ಎಳೆಯ ಮಕ್ಕಳು ಕುಣಿದು ಮೈಯೊಳು
ತಳೆದ ಬಟ್ಟೆಯು ಮಲಿನಗೊಳಿಸಿರೆ ತಾಯಿಗಳ್ಬಂದು
ಎಳೆದುಕೊಂಡೆಯ್ದವರ ಮೈಯಂ
ತೊಳೆದು ಜಳಜಳನುಟ್ಟ ಬಟ್ಟೆಯ
ಕಳಚಿರಲು ಮತ್ತೋಡಿದರು ಕೊಳಚೆಂಗೆ ಕಣ್ತಪ್ಪೆ ೩

ಹರ್ತಿಯೆಂದೆಂಬೂರ ಭಕ್ತರು
ಮೂರ್ತಿಮಂತ ಪ್ರಭುವಿನಾ ಪದ-
ಕರ್ತಿಯಿಂ ಪೊಡಮಟ್ಟು ಬಿನ್ನವಿಸಿದರು ಕೈಮುಗಿದು
ಕರ್ತನೇ, ನೀನೆಮ್ಮ ಗ್ರಾಮಕೆ
ಕೂರ್ತು ದಯಮಾಡಿಸುವುದೆಂದೆನೆ
ಭರ್ತನಲ್ಲಿಗೆ ಭಕ್ತರುದ್ಧರಿಸಲ್ಕೆ ಪೊರಮಟ್ಟ ೪

ಊರೊಳಾ ಸಮಯದಲಿ ಬಂದಿರೆ
ಮಾರಿಕಾ ರೋಗವು ದಿನಂಪ್ರತಿ
ಮೀರಿ ತುತ್ತಾಗುತ್ತಿಹುದು ಜನ ಮೃತ್ಯುವಿನ ಬಾಯ್ಗೆ
ಊರ ಮುಂದಿರುವಂಥ ಬಾವಿಯ
ನೀರಿನಾ ದೋಷಕ್ಕೆ ಪಿಡುಗದು
ಸೇರಿಕೊಂಡಿಹುದೆಂದು ಭಕ್ತರು ಪಾದಕರುಹಿದರು ೫

ಅದನು ಕೇಳ್ದಾ ಯೋಗಿರಾಜನು
ಸುದಯದಿಂದೈತಂದು ಬಾವಿಗೆ
ಮುದದಿ ಹಸ್ತಕೆ ಭಸ್ಮವಂ ಸಲೆ ಲೇಪನಂಗೈದು
ಆದರ ನೀರಿನೊಳಿಳಿದು ಕೈದೊಳೆ
ಚದುರಿಹೋಯಿತು ಮಾರಿಬೇನೆಯು
ಕದಡಿದಾ ಜಲಕ್ರಿಮಿಗಳೆಲ್ಲವು ನಾಶವೊಂದಿರಲು ೬

ಬಸವ ಪ್ರಣವವ ಬರೆದು ಜಲದೊಳು
ಬಸವ ತೀರ್ಥವಿದೆಂಬ ಮಂಗಲ
ಹೆಸರನಿತ್ತನುದಿನವು ತಜ್ಜಲದಿಂದೆ ಬಸವಂಗೆ
ಮಿಸುಗುವಭಿಷೇಕವನು ಗೈವುತ-
ಲೆಸಗುವದು ಪೂಜೆಯನು ಎಂದುರೆ
ಬೆಸನವನ್ನಿತ್ತಾ ಮಹಾತ್ಮನು ಬಸವ ಮೂರುತಿಗೆ ೭

ಇಂದುವಾರವಿದೆಂದು ಹಿಗ್ಗುತ
ಬಂದು ಮುದದಭಿಷೇಕ ಗೈದುರೆ
ನಂದದಿಂದುತ್ಸವವ ಹೊರಡಿಸಿ ಬಸವನಂದಣದಿ
ಚೆಂದದಿಂ ಕುಳ್ಳಿರಿಸಿ ಸಂಭ್ರಮ-
ದಿಂದ ಮೆರೆಸಿಹರಾ ಮಹಾತ್ಮರು
ಅಂದಿನಿಂದೀವರೆಗೆ ಪೂಜೋತ್ಸವವು ಸಾಗಿಹುದು ೮

ಕಣವಿ

ಚಳಿಯು ಮಡಲಿಡೆ ನಡುಗು ಪೆರ್ಚಿರೆ
ಇಳೆಯು ಜನ ಬೆಚ್ಚನ್ನ ಕಂಬಳಿ-
ದಳೆಮ ತಂಡಿಯನುಡುಗಿಪರು ಪತಿದೇವ ಗಡಬಡಿಸಿ
ಚಳಿಯ ಉಪಟಳ ತಾಳಲಾರದೆ
ಬಳಿಯ ಸಾರುವನಿರುಳು ನಿಜಸತಿ-
ಯಳ ದೃಢಾಲಿಂಗನದಿ ಬೆಚ್ಚಗೆ ಮಲಗಿ ನಿದ್ರಿಪನು ೯

ಉರಿಯ ಹೊತ್ತಿಸಿ ಸುತ್ತಲೂ ಜನ
ನೆರೆದು ಕೈಕಾಲ್ಕಾಸಿಕೊಂಬರು
ಪರಕು ಹೊದೆದು ಹೊದೆವ ಬಸವರು ಹುಹುಹು ಗಟ್ಟುವರು
ಇರುಳು ಅಜ್ಜಿಯು ಕಥೆಗಳ ನೆರೆ
ಒರೆಯುವಳು ಮೊಮ್ಮಕ್ಕಳಿಗೆ ಮುದ
ವೆರೆಸಿ ಬಾಲರು ತೂಕಡಿಸಿ ಸಲೆ ನಿದ್ರೆ ಪೋಗುವರು ೧೦

ಬೆಳಗಿನೋಳೆಳೆ ಬಿಸಿಲು ಕಾಯಿಸಿ-
ಕೊಳುತ ಮುದುಕರು ಚಿಕ್ಕಮಕ್ಕಳು
ಕಳಿತು ಕೊಳ್ಳುವರಂಗಣದಿ ಮನೆ ಮುಂದೆ ನಡಗುತ್ತೆ
ಚಳಿಯ ಉರುಬೆಗೆ ಪಿಕವು ಕೂಗದು
ತಳಿರು ಹೂ ಕಾಯಿಗಳು ಮುದುಡ್ವವು
ಬೆಳೆಗಳತಿರಸದುಂಬಿ ಹಚ್ಚಗೆ ಹಸಿರು ಮೂರಿಯುವವು ೧೧

ಘನಮಹಿಮ ಬೂದೀಶ ಯೋಗಿಯು
ಜನತೆಯನ್ನುದ್ಧರಿಸಲೋಸುಗ
ಮನದೊಳಗೆ ಪ್ರಭುನಾಮಸ್ಮರಣೆಯ ಗೈವುತತಿ ಮುದದಿ
ಘನತೆವೆತ್ತಾಕಣವಿ ಗ್ರಾಮಕೆ-
ಅನುನಯದಿ ದಯಮಾಡಿಸಿರ್ದಾರೆ
ಬನಸಿರಿಯ ಮಧ್ಯದೊಳು ಪ್ರಭುಗದ್ದುಗೆಯ ರಚಿಸಿದನು ೧೨

ಯೋಗಿವರ್ಯನ ಮಹಿಮೆಯಂ ಕೇಲೆ
ರಾಗದಿಂದಾಪೂರ ಹಿರಿಮನೆ
ಭೋಗಶಾಲಿಯು ಸಿದ್ಧರಾಮಪ್ಪೆಂಬವನು ಕೇಳಿ
ಯೋಗಿಯೆಡೆಗೈತಂದು ವಿನಯದಿ
ಬಾಗಿ ಕರಮುಗಿದಿಂತು ಪೇಳ್ದನು
ಯೋಗಿರಾಜನೆ ನಾನು ಬಳಲುವೆ ಕುಷ್ಟರೋಗದಲಿ ೧೩

ಕರುಣದಿಂದಿದ ಹೋಗಲಾಡಿಸಿ
ಹರಕೆಯನ್ನಿತ್ತೆನ್ನ ರಕ್ಷಿಸು
ಕೊರಗುತಿಹೆ ನಾ ಬಹು ದಿವಸವೀ ರುಜೆಯು ಬಂದಡಸೆ
ಮರುಕಗೊಂಡಾ ಮುಗ್ಧಭಕ್ತನ
ಕರದಿ ಮೈದಡವುತ್ತ ಯೋಗಿಯು
ವರಭಸಿತಮಂ ಲೇಪಿಸಿದನಂಗಕ್ಕೆ ಮಂತ್ರಿಸುತ ೧೪

ಕುಡಿಸಿದನು ಸಲೆ ಪಾದತೀರ್ಥವ
ಎಡೆಬಿಡದೆ ಶಿವಮಂತ್ರ ಜಪಿಸಲು
ತೊಡಗಿಸಿದನಾತನನು ಲಿಂಗದಿ ದೃಷ್ಟಿಯಿಡಿಸಿದನು
ನಡೆನುಡಿಗಳೊಂದಾಗುವಂದದಿ
ಕಡುಮುದದೊಳುಪದೇಶಗೈದನು
ಮೃಡನೊಳತಿ ದೃಢ ಭಕ್ತಿಯಿರಿಸಲು ಪ್ರೇರಿಸಿದನವಗೆ ೧೫

ಬಂದ ರೋಗವು ಸ್ವಲ್ಪ ದಿನದೊಳು
ನಿಂದು ಹೋಯಿತು ಸಾಹುಕಾರನು
ಹಿಂದೆ ಮಾಡಿದ ಪಾಪ ಕರ್ಮವು ಹಿಂಗಿ ಸುಕೃತಪದು
ಸಂದುದಾತಗೆ ಯೋಗಿ ಕೃಪೆಯಿಂ
ಮುಂದೆ ಜಂಗಮ ಸೇವೆಯೊಳು ತಾ
ನಿಂದು ಪ್ರಭು ಗದ್ದುಗೆಯ ಪೂಜಾಸಕ್ತಿ ವಹಿಸಿದನು ೧೬

## ಮುಳಗುಂದ

ಧರೆಯೊಳಗೆ ಮುಳಗುಂದ ಗ್ರಾಮವು
ಮೆರೆಯುತಿದೆ ಶಿರಪೆತ್ತಿ ನಿರುತವು
ಪರಮ ಶ್ರೀಗುರುಬಾಲಲೀಲಾ ಮಹಾಂತ ಸ್ವಾಮಿಗಳ
ಮಿರುಪ ಸಾನ್ನಿಧ್ಯದೊಳು ಹರಗುರು-
ಚರರೊಳತಿ ಭಕ್ತಿ ಪ್ರಭಾವದೊ -
ಳುರುತರದಲೀಲಾ ವಿಲಾಸಗಳಿಂದ ಯತಿವರರ ೧೭

ಬಂದನಲ್ಲಿಗೆ ಬೂದಿಯೋಗಿಯು
ನಿಂದನೊಂದುದ್ಯಾನದಲಿ ಸಲೆ
ಚೆಂದ ಪೂಲತೆಪತ್ರಗಳಿಂ ಬಿಲ್ವಾದಿ ವೃಕ್ಷಗಳಿಂ
ನಂದವಂ ಬೀರುತಿಹ ತಾಣದೊ-
ಳೊಂದು ಪ್ರಭುಗದ್ದುಗೆಯಸ್ಥಾಪಿಸಿ
ಇಂದುಧರ ಯೋಗಾಂಗಸಾಧನೆಯಲ್ಲಿ ಮೈಮರೆದ ೧೮

ಅಲ್ಲಿ ಹುಣಸಿಯದೊಂದು ಪೆರ್ಮರ
ಪಲ್ಲವಿಸಿ ಬೆಳೆದಿತ್ತು ಆಮರ-
ದಲ್ಲಿ ನೆಲಸಿಹವೆನಿತೊ ದುಷ್ಟ ಪಿಶಾಚಿಗಳು ಸೊಗದಿ
ಬಲ್ಲಿದರು ಬೂದೀಶ ಯೋಗಿಗ -
ಳಲ್ಲಿಗೈತಂದವರ ಪೂಜಗೆ
ಲಲ್ಲೆಯಿಂ ಹೂಪತ್ರಿಗಳ ತಂದೀಯುತಿಹವೈಸೆ ೧೯

ಅವರ ಜಪ ತಪ ಮಹಿಮೆಯೆಷ್ಟೋ
ಶಿವನ ರೂಪಿಗಳವರು ಭೂತಗ
ಳವಿನಯವ ಮಾರ್ಪಡಿಸಿ ಸಾತ್ವಿಕ ಜೀವಿಗಳ ಗೈದು
ಅವಿರತಂ ತತ್ಸೇವೆಗೊಳ್ಳುತೆ
ತವೆ ನಿಜಾರ್ಥದ ಪುಣ್ಯಮಂ ತಾ-
ವವುಗಳಿಗೆ ನೀಡಿದರು ಸೇವೆಯ ಫಲವು ಕೇವಳಮೆ ? ೨೦

ಭೂತಗಳ ಭೂತತ್ತ್ವ ತೊಲಗಿತು
ಪೂತಭಾವವು ಬೆಳೆದು ಬಂದಿತು
ಜ್ಯೋತಿ ರೂಪದೊಳಾಗ ಯೊಗಿಯ ಪಾದಕಭಿನಮಿಸಿ
ಪ್ರೀತಿಯಿಂದವರಾಜ್ಞೆಯಂ ಪಡೆ-
ದಾತುರದೊಳಾಗಸದ ಕಡೆಗವು
ಚೇತನಂಗೊಂಡೇರಿದವು ಶಿವಯೋಗಿ ನೋಡುತಿರೆ ೨೧

ಬೂದಿ ಯೋಗಿಯು ತನ್ನ ಗ್ರಾಮ -
ಕೈದುದಂ ಮಾಂತೇಶ ಯೋಗಿಗ -
ಳಾದರದಿ ಸಲೆ ಲಿಂಗಮುಖದಿಂದರಿದು ದರುಶನಕೆ
ಮೋದದಿಂ ಪೋಗುತಿರೆ ಮಾರ್ಗದಿ
ಬೂದಿಯೋಗಿಯು ಮೊದಲೆ ಮಾಂತನ
ಪಾದರಂ ಕಾಣಲ್ಕೆ ಹೊರಟಾತನನಿದಿರ್ಗೊಂಡು ೨೨

ಒಬ್ಬರೊಬ್ಬರು ಕಂಡು ಹರ್ಷದೊ
ಳುಬ್ಬಿ ಸಾಷ್ಟಾಂಗವನು ಗೈವೊಡೆ
ಇಬ್ಬರೂ ಸಹ ಏಕಕಾಲದಿ ಮಾಯವಾಗಿಹರು
ಒಬ್ಬರೊಬ್ಬರ ಪ್ರೇಮದಿಂ ಸಲೆ
ತಬ್ಬಿಕೊಳ್ಳುತೆ ಮರುಚಣದಿ ತಾ-
ವಿಬ್ಬರೂ ದಯಮಾಡಿಸಿದರಲ್ಲಿರ್ದ ಗವಿಮಠಕೆ ೨೩

ಶಿವನಪೂಜೆ ಶಿವಪ್ರಸಾದವು
ಶಿವನ ಅನುಭವ ಗೋಷ್ಠಿ ನಡೆದಿರೆ
ಗವಿಯ ಮಠದೊಳಗೀರ್ವರೂ ಕೆಲಕಾಲ ಸೊಗಯಿರ್ದು
ಶಿವನ ಕಾರ್ಯಕೆ ಬೂದಿ ಯೋಗಿಗ-
ಳವರನುಜ್ಞೆಯ ಪಡೆದು ಹೊರಟರು
ಕವಿದಿರಲು ಹೃದಯಂಗಳೀರ್ವರ ವಿರಹತಾಪದೊಳು ೨೪

## ಕೆಳದಿ

ಮಲೆಯ ನಾಡೊಳು ಚರಿಸುತಾರ್ಯರು
ಕೆಳದಿಗೈತಂದಿರಲು ರಾಜರು
ನಲವೆಯಿಂ ಪರಿವಾರದೊಂದಿಗೆ ಬಂದು ವಂದಿಸುತೆ
ಒಲಿಸಿ ಪೂಜ್ಯರವರಮನೆಗೆ ಕೊಂ-
ಡೊಲುಮೆಯಿಂ ಪದಪೂಜೆಗೈದುರೆ
ನೆಲೆಗೊಳಿಸಿದರು ಬಸವ ಮೂರ್ತಿಯ ಯೋಗಿಯಾಜ್ಞೆಯೊಳು ೨೫

ಬೂದಿ ಬಸವನ ಪೆಸರಿನಿಂದಾ
ವೇದಮೂರ್ತಿಯು ಕಂಗೊಳಿಸುತಿರೆ
ಬೋಧಿಸಿದನಾ ಕೆಳದಿರಾಜಂಗಾ ಯತೀಶ್ವರನು
ಮೋದವಾಯಿತು ನಿನ್ನ ಭಕ್ತಿಗೆ
ಮೇದಿನೀಪತಿ ಕೇಳು ಶಾಂತದಿ
ಬೂದಿ ಬಸವನ ದಯದಿ ಪುಟ್ಟುವನೋರ್ವ ಮಗ ನಿನಗೆ ೨೬

ಸುಗುಣಿ ಸುಂದರ ಭಕ್ತಿವಂತನು
ಜಗವರಿಯೆ ಬಹು ಕೀರ್ತಿಶಾಲಿಯು
ತಗುಗು ಬೂದೀ ಬಸವನಾಯಕನೆಂಬ ಪೆಸರವಗೆ
ಸೊಗದಿ ರಾಜ್ಯವ ಪಾಲಿಪನು ಮಿಗೆ
ನಗೆಗಡಲೊಳೀಸಾಡ್ವರೆಲ್ಲರು
ಸೊಗಸಿನಿಂ ಜೀವನದ ನೌಕೆಯು ಸಾಗಿಸುತ್ತಿಹರು ೨೭

ವರ ನಿರಂಜನ ಮೂರ್ತಿ ಪೇಳಿದ
ತೆರೆದಿ ರಾಜಗೆ ಪುತ್ರ ಜನಿಸಲು
ಕರೆದರಾತನ ಬೂದಿ ಬಸವಪ್ಪೆಂಬ ಪೆಸರಿಂದೆ
ಚರರು ಪೇಳಿದ ತೆರದೊಳಾತನು
ಪರಮ ಸದ್ಗುಣಿ ಧರ್ಮನಿಷ್ಠನು
ಶರಣವೋಹಿ ಪರಾಕ್ರಮಿಯು ತಾನಾಗಿ ನೆಲನಾಳ್ದ ೨೮

ಕೆಳದಿ ಗ್ರಾಮ ಕುಚೋದ್ಯಗಾರರು
ಅಳಿಮನದಿ ಬೂದೀಶ ಯೋಗಿಯ
ತಿಳಿದು ಸತ್ವಪರೀಕ್ಷೆಗಾತನ ಗುರಿಯು ಮೊಡಲ್ಕೆ
ಬಳಿಯೊಳಿಬ್ಬರು ತರುಣರಿಗೆ ಸಲೆ
ತಿಳಿಸಿದರು ಸತಿಪತಿಯು ಪಾತ್ರವ
ಘಳಿಲನಾದಂಪತಿಗಳೀರ್ವರೂ ಬಂದು ಯತಿಯೆಡೆಗೆ ೨೯

ನಮಿಸಿ ಪತಿಯಾದವನು ಕೇಳ್ದನು
ಸುಮತಿಗಳೆ ನನ್ನೀ ಸತಿಯು ಸಲೆ
ತಮಗೆ ಹೊಳೆವಂತಿಹಳು ನೆರೆ ನವಮಾಸ ಗರ್ಭಿಣಿಯು
ವಿಮಲ ಚರಿತರೆ ಕೇಳಿರೀಕೆಯು
ಅಮಮ ಕಳೆದಿಹಳೆರಡು ವರ್ಷಂ
ನಮಗೆ ಚಿಂತೆ ಗಡಾಕೆ ಹಡೆವಳೊ ಹಡೆಯದಿರ್ದಪಳೊ ೩೦

ಏನಪ ಶಿಶುತಾ ಗಂಡೊ ಹೆಣ್ಣೊ
ಒಡೆಯದಂತಹ ಒಗಟವಾಗಿದೆ
ಒಡೆಯ ನೀನಾದರಿಸಿ ಪೇಳ್ವುದು ಮುಂದೆಯಪ್ಪುದನು
ಮೃಡನ ರೂಪಿಗಳಯ್ಯ ತಾವುಗ-
ಳೆಡೆಗೆ ಸಾರಿಹೆವಯ್ಯ ತಿಳಿಯಿರಿ
ಎಡೆಬಿಡದೆ ಎಲ್ಲೆಡೆಗೆ ಬಹು ಎಡತಾಕಿದೆವು ಬರಿದೆ ೩೧

ಅರಿಯನೇನೀ ಕಪಟನಾಟಕ -
ವರಿದೊಡೂ ಕೇಡನ್ನು ಬಗೆಯದೆ
ನೆರೆದ ಜನಗಳಿಗುಸುರಿದನು ಸುತ್ತೈಸಿ ಗರ್ಭಿಣಿಯು
ಬರಿದೆ ಚಿಂತಿಸ ಬೇಡಿರೀಕೆಯು
ಹೆರವುದಿಲ್ಲೈ ಪೆಣ್ಣು ಗಂಡನು
ಬರುವುದಾಕೆಯ ಗರ್ಭದಿಂ ಸಲೆ ಕಸಪರದ ಗಟ್ಟಿ ೩೨

ತನಗೆ ನೀಚರು ಮೋಸ ಗೈದೊಡೆ
ಕನಲಿದನೆ ತಾ ಶಾಪಕೊಟ್ಟನೆ ?
ಘನಶರಣ ಪೌರಾಣ ಋಷಿಗಳ ತೆರದಿ ಬೂದೀಶ ?
ತನಗೆ ನಿಗ್ರಹ ಮೇಣನುಗ್ರಹ-
ದನುಪಮಾತ್ಮಕ ಶಕ್ತಿಯಿರುತಿರೆ
ತನಗೆ ಕಾಪಟ್ಯವನು ತೋರ್ದರಿಗೊಳಿತನೆಸಗಿದನು ೩೩

ಹೊಟ್ಟೆಯಾ ಮೇಲ್ಬಿಗಿದ ಮಾದಲ
ಬಟ್ಟಗಾಯಿಯು ಭಾರವಾಯಿತು
ತಟ್ಟನೇ ತಾ ಕಳಚಿ ಬಿದ್ದಿತು ನೆಲದ ಮೇಲ್ ಗಡ
ಮುಟ್ಟಿ ನೋಡಲು ಸ್ಪಷ್ಟವಾಯಿತು
ಗಟ್ಟಿಬಂಗಾರವದು ಸೋಜಿಗ
ಶಿಷ್ಟರಾಡಿದ ನುಡಿಯು ಪುಸಿಯಾದಪುದೆ ಜಗದಲ್ಲಿ ೩೪

ಮೋಸಗಾರರು ಚೇಷ್ಟೆಗೈದೊಡು
ಲೇಸನೇ ಮಾಡಿದರು ಯತಿಗಳು
ಹೇಸಿಗಳು ನಾವೆಂದು ದುಷ್ಟರು ನೊಂದು ಮನದಲ್ಲಿ
ಭಾಸುರಾತ್ಮರೆ ಕ್ಷಮಿಸಿರೆಮ್ಮನು
ದಾಸರೈ ನಾವ್ ತಮ್ಮ ಪಾದದ
ಮೋಸಮಾಡಿದೆವಯ್ಯ ಶಿವ ! ಶಿವ ! ತ್ರಾಹಿ ಶಿವಯೋಗಿ ೩೫

ಎನಲು ಯತಿವರನಾಗ ಪೇಳ್ದನು
ಮುನಿಸು ನಮಗಿಲ್ಲೆನಿತು ನಿಮ್ಮೊಳು
ಜಿನುಮಯನು ನಿಮ್ಮನ್ನು ಸಲಹಲಿ ಸನ್ಮತಿಯನಿತ್ತು
ಎನುತೆ ವಂದನೆಗೊಳತಲವರಿಂ
ಮುನಿವರೇಣ್ಯರುಹೊರಟು ಭರದಿಂ
ಸನಿಹ ಗ್ರಾಮಕೆ ತೆರಳಿದರು ಸದ್ಭಕ್ತಹಿತಕಾಗಿ ೩೬

## ಎಳವತ್ತಿ

ಯೋಗಿಗಳು ಎಳವತ್ತಿ ಗ್ರಾಮಕೆ
ರಾಗದಿಂದೈತಂದು ಹೊರಗಡೆ
ಯೋಗ ಸಾಧನೆಗುಚಿತವಾದ ಪ್ರಶಸ್ತತಾಣದೊಳು
ಸಾಗಿಸುತ ಲಿಂಗಾಂಗಯೋಗವ
ಭೋಗಿಸುತಲೀಶಪ್ರಸಾದವ
ನಾಗಭೂಷಣ ಧ್ಯಾನದೋಳ್ತಪ ಮಿರಲುಕೆಲ ದಿನವು ೩೭

ಒಂದು ದಿನ ಬಹು ದೊಡ್ಡ ಪೀಠದ
ಅಂದವಾದಧಿಕಾರಿಯೊಬ್ಬರು
ಬಂದಿಹರು ತಾವಲ್ಲಿ ಮಿಗೆ ಸಂಭ್ರಮದ ರೀತಿಯಲಿ
ಸುಂದರದ ಕಾಷಾಯವಸನವು
ಚೆಂದವಾದ ತ್ರಿಪುಂಡ್ರಭಸ್ಮವು
ಮಂದಹಾಸವು ಮೊಗದೊಳೊಪ್ಪಿರೆ ಮಠದಿ ನಿಂದಿಹರು ೩೮

ಜನರು ತಾವಾ ಪೂಜ್ಯಪಾದರ
ಮಿನುಗುಪಂದಣದಲ್ಲಿ ಮರೆಯಿಸಿ
ಧನವ ಕಾಣಿಕೆಯಾಗಿ ಸಲಿಸುವ ಯತ್ನದಲ್ಲಿಹರು
ಅನಿತರೊಳ್ ಬೂದೀಶ ಯೋಗಿಯು
ವಿನಯದಿಂದೆಳವತ್ತಿಗ್ರಾಮದಿ
ಎನಿತೆನಿತು ಆಡಂಬರಕ್ಕೆಡೆಗೊಡದೆ ನಿಂದಿರಲು ೩೯

ಪಿಸುಣನೋರ್ವನು ಬಂದು ಪೇಳ್ದನು
ಅಸಮ ಮಹಿಮರೆ ಊರೊಳೋರ್ವನು
ರಸಿಕನಹ ಸನ್ಯಾಸಿ ಬಂದೆಸಗುವನು ಲೀಲೆಗಳ
ಹೆಸರುವಡೆದ ಪವಾಡ ಪುರುಷನು
ವಸುಧೆಗವತರಿಸಿರ್ಪನೆಂಬುವ
ಜಸವು ನಾಲ್ದೆಸೆಯಲ್ಲಿ ಪಸರಿಸಿ ಬಿಟ್ಟಿಹುದು ನೋಡಿ ೪೦

ಜನಕೆ ಮಕ್ಕಳನೀಯುವನು ಮೇಣ್
ಧನವನಿತ್ತುರೆ ರಕ್ಷಿಪನು ಗಡ
ಜನಿತ ರೋಗಾದಿಗಳ ಶೀಘ್ರದಿ ನೀಗುತಿರ್ದಪನು
ಜನರು ಪ್ರತಿದಿನ ಬಂದು ಅವನೆಡೆ
ಮನದ ಇಷ್ಟಾರ್ಥವನು ಪಡೆವರು
ಘನಮಹಿಮನಿವನೆಂಬುದಾತನ ಕುಡು ಜನವೆಲ್ಲ ೪೧

ಇದನು ಕೇಳ್ದಾ ಪೀಠದಧಿಪತಿ
ಮುದವಡೆಯದತಿ ಕರುಬುಗೊಂಡನು
ಹೃದಯದೊಳ್ ಹೊಗೆಯಾಡಿತಾತನ ದ್ವೇಷದಳ್ಳುರಿಯು
ಬದಿಯ ಭಕ್ತರಿಗಿಂತು ನುಡಿದನು
ಬಿದಿ ನಿಮಗೆ ಕಾಡುವುದೆ ಭಕ್ತರೆ ?
ಉದಿತ ಬೈರಾಗಿಯು ಕಪಟಸನ್ಯಾಸಿ ಘಾತುಕನು ೪೨

ನಂಬಿ ಕೆಡುವರೆ ಘಾತುಕನ ನೀವ್
ನಂಬಿದವರಂ ನರಕಕೂಪದಿ
ತುಂಬಿಬಿಡುವನು ನಿಶ್ಚಯವು ನೀಚಾತ್ಮ ಮರುಳರಿರಾ
ನಂಬುಗೆಗೆಯೆಳ್ಳನಿತು ಮನದೊಳ-
ಗಿಂಬುಗೊಡದಾತನೊಳು ಭರದಿಂ
ಕಂಬಕಾತನ ಬಿಗಿದುಕಟ್ಟಿರಿ ಪೋಗಿ ಎಳೆತಂದು ೪೩

ಹೀಗೆ ನುಡಿದಾಕ್ಷಣವೆ ದುಷ್ಟರು
ಪೋಗಿ ಯೋಗಿಯು ಬಳಿಗೆ ಪೇಳ್ದರು
ರಾಗಮಂ ನಟಿಸುತ್ತೆ ಯೋಗಿಯೆ ಊರಿನೊಳಗೋರ್ವ
ಯೋಗಿರಾಜನು ಬಂದಿಹನು ನೀಂ ೪೪
ಬಾಗಿಯಾತನ ದರ್ಶನವ ಪಡೆ
ಬೇಗ ನಡೆ ನಿನ್ನನ್ನು ಕರೆದೊಯ್ಯುವೆವು ನಾವಲ್ಲಿ

ಎಂದೆನಲು ಬಂದಿರ್ದ ದುಷ್ಟರಿ-
ಗಂದು ಯೋಗೀಶ್ವರನು ಪ್ರೇಮದಿ
ಮಂದಹಾಸವ ಬೀರಿ ಪೇಳ್ದನು ಶಿವಶಿವಾ ನಮಗೆ
ಬಂದ ಪೀಠಾಧಿಪನ ದರ್ಶನ-
ದಿಂದ ತಾನೇನಾಗಬೇಕಿದೆ ?
ಇಂದುಧರಕೃಪೆಯೊಂದೆ ಸಾಕೆಮಗೇತಕಾಗ್ರಹವು ? ೪೫

ನಾವು ನಿಸ್ಸಂಗಿಗಳು ನೋಡಿರಿ
ಯಾವ ಗುರುಗಳ ಗೊಡವೆಯೇತಕೆ ?
ಭಾವಿಕರು ನೀವವರ ಸೇವೆಯಗೈದು ಸುಖಿಯಾಗಿ
ಆವಗಂ ಬಾಳುವುದು ಲೇಸೈ
ಸಾವನಕ ಶಿವನನ್ನೆ ನಂಬಿದ
ನಾವುಗಳು ವೈರಾಗ್ಯಶೀಲರು ಬೇಡ ದರ್ಶನವು ೪೬

ಪೋಗಿರ್ಪೈ ನೀಪೀಗಯೆಂದೆನೆ
ಯೋಗಿಯನ್ನೆಳೆಯುತ್ತೆ ದಬ್ಬುತೆ
ಬೇಗದಿಂ ಗುರುಸಾರ್ವಭೌಮನ ಮುಂದೆ ತಂದಿಹರು
ಆಗ ಪೀಠಾಧಿಪತಿ ದರ್ಪದಿ
ಬಾಗಿ ನಮಿಸೈ ಕವಡುದವಸಿಯೆ
ಸೋಗಿನಿಂ ಜನಮೋಹಗೊಳಿಸುವ ಠಕ್ಕ ನೀನಿರುವೆ ೪೭

ಎಂದೆನಲು ಶಿವಯೋಗಿ ಪೇಳ್ದನು
ವಂದಿಸಲು ಬಾದಿಲ್ಲವಿಲ್ಲಿಗೆ
ಬಂದ ಜನವ್ರೊತ್ತಾಯದಿಂದೆಳತಂದಿಹುದು ನನ್ನ
ಮಂದಭಾಗ್ಯರು ನೀವು ನನ್ನಂ
ವಂದಿಸಲು ಪೇಳುವಿರಿ ಯುಕ್ತವೆ ?
ಮಂದಮತಿ ನಾನಲ್ಲಯೋಗ್ಯಗೆ ಶಿರವ ಬಾಗಿಸಲು ೪೮

ನಾನು ನಮಿಸಲು ಕೇಡು ನಿಮಗದು
ಮಾನಿಗಳೆ ನೀವ್ ತಿಳಿದು ನೋಡಿರಿ
ನಾನು ನಿಮ್ಮಯ ಹಿತಕೆ ನಮಿಸುವದುಚಿತವಲ್ಲವಲಾ
ನೀನು ಯಾರೆಂಬುದನು ಬಲ್ಲೆನು
ನಾನು ಯಾರೆಂಬುವದ ನೀನರಿ
ಏನಹಂಕಾರವಿದೊ ಅನ್ಯರ ನಮಿಸಪೇಳುವುದು ೪೯

ಪೇಳಿದನು ಪೀಠಾಧಿಪತಿ ಗಡ
ಕೇಳೆಲೈ ಸನ್ಯಾಸಿಯೇ ನೀ
ತಾಳುವರೆ ಗುರುಪೀಠಕವಮಾನವನು ಗೈವುದನು
ಹೇಳು ನಿನಗಾರ್ ಲಿಂಗವಿತ್ತರು ?
ಹಾಳುನುಡಿಯನ್ನಾಡ್ವುದೇತಕೆ ?
ಪೇಳುವೆನು ಮತ್ತೊಮ್ಮೆ ಗುರುವಿನ ಪೀಠಕಭಿನಮಿಸು ೫೦

ಇದನು ಕೇಳಿದ ಬೂದಿಯೋಗಿಯು
ಮುದದೊಳಾಪೀಠಾಧಿಕಾರಿಗೆ
ಬದಿಗೆ ಸರಿ ಪೀಠವನುಬಿಟ್ಟೇಳಾನು ನಮಿಸುವೆನು
ಅದಕೆಪೀಠಾಧಿಪನು ತಟ್ಟನೆ
ಬದಿಗೆ ನಿಲ್ಲಲು ಬೂದಿಯೋಗಿಯು
ಸದಮಲಾನಂದದೊಳು ಪೀಠಕೆ ವಂದಿಸಲು ಜವದಿ ೫೧

ಉರಿಯು ಹತ್ತಿತು ಪೀಠಕಾಗಳೆ
ಗುರುವರನು ತತ್ತರಿಸಿದನು ಮೇಣ್
ನೆರೆದ ಜನವೃಂದವದು ನಿಬ್ಬೆರಗಾಗಿ ನಿಂದಿಹುದು
ಅರಿದರಾತನು ಪರಮಯೋಗೀ-
ಶ್ವರನುಯೆಂಬುದನೆಲ್ಲರಾಗಳೆ
ತೊರೆದು ದ್ವೇಷವ ಯೋಗಿಯಡಿಗೆರಗಿದರು ಭಕ್ತಿಯಲಿ ೫೨

ಹಿಂದೆ ಬಿಜ್ಜಳೆ ದೊರೆಯು ಬಸವೆಗೆ
ವಂದಿಸುವುದೆನ್ನಾಸನಕೆ ನೀ-
ನೆಂದು ಅಜ್ಞೆಯನೀಯಲಾತನು ಪೇಳ್ದನಾ ದೊರೆಗೆ
ವಂದಿಸುವೆ ಸರಿ ದೂರ ಭೂಪನೆ
ಬೆಂದು ಪೋಪುದು ನಿನ್ನಯಾಸನ-
ವೆಂದು ಸಿಂಹಾಸನಕೆ ನಮಿಸಲದುರಿಯದಿರ್ದಪ್ಪುದೆ ? ೫೩

ಪರಮಯೋಗೀಶ್ವರನು ಬೇಗನೆ
ಕರದೊಳಡಗಿಸಿ ಪೀಠದುರಿಯುಂ
ನೆರೆದವರನತಿ ಬೆರಗುಗೊಳಿಸಿದನಾ ಮುಹೂರ್ತದೊಳು
ಮೆರೆಸಲಂದಣದಲ್ಲಿ ಯೋಗಿಯ
ವರಭಕುತರುತ್ಸಾಹಗೊಂಡಿರೆ
ಮೆರೆಯುತಿರಿ ಗುರುವನ್ನೆನುತ ಯೋಗೀಂದ್ರ ತಾ ಪೋದ ೫೪

ಗುರುವಿನಾ ಗರ್ವಾಂಧಕಾರವು
ಪರಮಯೋಗಿಯ ತೇಜದಿಂ ಸಲೆ
ಕರಗಿ ಹೋಯಿತು ಮನದಿ ಪಶ್ಚಾತ್ತಾಪವುಂಟಾಯ್ತು
ಕರುಣಿಸಿದೆ ಯೋಗೀಂದ್ರ ನೀನೆನ-
ಗರುವ ನೀಡಿದೆಯೆಂದು ಮನದೊಳು
ಮರಗುತಿರ್ದನು ಯೋಗಿ ಪೋಪುದ ಕಂಡು ಮೊಗಬಾಡೆ ೫೫

ಬಹುವಿಧದ ಲೀಲೆಗಳ ತೋರಿಸಿ
ಸಹಜ ಜನ ಹೃದಯವನು ಮಾರ್ಪಡಿ-
ಸಿಹ ಪರಮ ಬೂದೀಶ ಯೋಗಿಯ ಮಹಿಮೆಯಂ ನೆನೆದು
ವಹಿಸಿ ದುರ್ಗುಣರಾಶಿಯಂ ಮೇಣ್
ಸಹಿಸಿ ಬಂದೆಡೆಗೊಂಡ ಕಷ್ಟಗ-
ಳಹಿತವನ್ನನ್ಯರಿಗೆ ಗೈಯದೆ ಭಕ್ತಿಚರಿಸೋಣ ೫೬

**ಅಂತು ಹದಿನಾರನೆಯ ಸಂಧಿಗೆ ೧೦೫ಳ ಪದ್ಯಕ್ಕೆ ಮಂಗಲಮುಕ್ಕುಂ**
**ಭದ್ರಂ ಶುಭಂ ಮಂಗಲಂ**

ಶ್ರೀಗುರುಬಸವಲಿಂಗಾಯ ನಮಃ

# ಹದಿನೇಳನೆಯ ಸಂಧಿ

ಸೂಚನೆ :– ಮಿಗಿಲು ಬೇರೊಂದಿಲ್ಲ ಭಕ್ತಿಗೆ
ನಿಗಮಗಳು ಸಾರುತಿವೆ ಭಕ್ತಿಯು
ಸುಗಮ ಸುಂದರ ಪಂಚಮದ ಪುರುಷಾರ್ಥವಿಂತೆಂದು

## ಲಿಂಗಭಕ್ತಿಯ ಮಹಿಮೆ

ಮರುಳಸಿದ್ಧನುಯೆಂಬ ಪೆಸರಿನ
ಮರುಳವೇದಾಂತಿಯು ಸುಯೋಗಿಯು
ಗುರುಮಹತ್ವವನರಿದು ತಾನವರೊಡನೆ ವಾದಿಸಲು
ತ್ವರಿತದಿಂದಾಗಮಿಸಿ ಕೇಳ್ದನು
ಗುರುವೆ ಜ್ಞಾನವು ಮೋಕ್ಷಕಾರಣ
ವಿರಲು ಕೊರಳೊಳು ಲಿಂಗ ಧರಿಸುತೆ ಪೂಜಿಸುವುದೇಕೆ ? ೧

ಪರಮನರಿಯುವುದೇ ಮಹತ್ವವು
ಬರಿದೆ ಪೂಜಾಟಗಳನೆಸಗಲು
ಪರಮ ದಿವ್ಯಜ್ಞಾನವಪ್ಪುದೆ ಮೂಢತನವಲ್ಲೇಂ ?
ಪರಶಿವನು ಬುದ್ಧಿಯನು ನೀಡಿರೆ
ಅರಿವುದುಚಿತವು ತರ್ಕದಿಂದಲಿ
ಮರುಳರಂದದಿ ಕಲ್ಲಪೂಜಿಸೆ ಜ್ಞಾನವೆಂತಕ್ಕು? ೨

ಕಾಣುವಾತದ ಶಿವನ ಒಲವಿನ
ಜಾಣರೇತಕೆ ರೂಪುಗೊಳಿಸುತೆ
ಕಾಣುವಂದದಿ ಮೂರ್ತಿಪೂಜೆಯ ಮಾಡಹಚ್ಚಿದರೋ !
ಕಾಣುವಾ ಕಲ್ಮೂರ್ತಿಯನ್ನೀ
ತಾಣದೊಳಗಿನ ಭಾವುಕರು ಸಲೆ
ಮಾಣದಲೆ ಶಿವನೆಂದು ಪೂಜೆಯನೇಕೆ ಗೈದಪರೋ ೩

ಬೇಕು ಆತ್ಮಾನಾತ್ಮಪರಿವೊಡೆ
ಬೇಕು ಸುವಿಚಾರವು ವಿವೇಕವು
ಸಾಕು ಸಾಕೀ ಲಿಂಗಪೂಜೆಯು ಮಾಳ್ಪುದೇನಕ್ಕೆ ?
ಏಕೆ ಶರಣರು ಮೂಢಭಾವನೆ-
ಗೇಕ ಮನದಿಂದಿಂಬುಗೊಟ್ಟರೊ ?
ಸಾಕು ನಮಗಾಜ್ಞಾನವೊಂದೇ ಪರಮನರಿಯಲ್ಕೆ ೪

ಜ್ಞಾನದಿಂ ಕೈವಲ್ಯವೆಂದೇ
ಜ್ಞಾನಿ ವೇದಾಂತಿಗಳು ಪೇಳಿರೆ
ಜ್ಞಾನವಿಲ್ಲದ ಮೂಢಭಾವನೆಯಿಂದ ಕೂಡಿರ್ದ
ನೂನಭಕ್ತಿಗೆ ಮೆಚ್ಚಿ ಶರಣರು
ಜ್ಞಾನಕಷ್ಟೇಗಮನವೀಯದೆ
ಮೌನದಿಂ ಸಲೆ ಭಕ್ತಿಮೌಢ್ಯವ ತಾಳ್ದರೇಕಕಟಾ ! ೫

ಆದಕಾರಣದಿಂದೆ ಗುರುಗಳ್
ವೇದದುತ್ತಜ್ಞಾನ ಜ್ಯೋತಿಯ
ಮೋದದಿಂ ಲಿಂಗಾಂಗಿಗಳ್ ಮನದಲ್ಲಿ ಬೆಳಗಲ್ಕೆ
ಮೇದಿನಿಗೆ ಸುಜ್ಞಾನಮಾರ್ಗವ
ಬೋಧಿಸುತಲವರಂ ವಿವೇಕಿಗ-
ಳಾದರದಿ ಗೈಯುವುದು ಸಮುಚಿತವಲ್ಲವೇನಯ್ಯ ೬

ಇದನು ಕೇಳ್ದು ಯೋಗಿರಾಜನು
ಮುದದಿ ಪೇಳಿದ ಮರುಳಸಿದ್ಧಗೆ
ಇದುವೆ ವ್ಯಕ್ತ ಪ್ರಪಂಚವೈ ನೀಂ ವ್ಯಕ್ತರೂಪನಲಾ
ಸದಮಲಾತ್ಮನು ಲಿಂಗದೇವನು
ವಿದಿತನೈ ಸುವ್ಯಕ್ತ ರೂಪದಿ
ಅದಕೆ ವ್ಯಕ್ತವ ವ್ಯಕ್ತಭಕ್ತಿಯೊಳಿಂದೆ ಕಾಂಬುವದು ೭

ನಿನಗೆ ತಿಳಿದಿಲ್ಲಯ್ಯ ಭಕ್ತಿಯೆ
ಅನುವು ಭಕ್ತಿಯ ಬಿಟ್ಟು ಕೇವಲ
ಜ್ಞಾನದಿಂ ನೀಂ ಪಡೆಯುವುದು ಬರಿ ಶುಷ್ಕವೇದಾಂತ
ತನುವಿನಾ ಕ್ರಿಯೆಗುಂಟು ಭಕ್ತಿಯು
ಮನದ ಧ್ಯಾನಕೆ ಬೇಕು ಭಕ್ತಿಯು
ಘನಮಹಾಲಿಂಗದೊಳು ಬೆರೆಯಲು ಭಕ್ತಿ ಬೇಕೆಲವೊ ೮

ಹರನು ತಾ ಸುವ್ಯಕ್ತನೈ ನಿಜ-
ವರಿಯೆ ತಾನವ್ಯಕ್ತನೈದಿಟ
ಶರಣರಾತನ ವ್ಯಕ್ತ ಮೇಣವ್ಯಕ್ತರೂಪಗಳ
ಎರಡನೂ ನಂಬಿಹರು ದಿಟವಿದು
ಕರದ ಇಷ್ಟವು ವ್ಯಕ್ತರೂಪವು
ನೆರೆ ಮನದಿ ತಾ ವ್ಯಕ್ತಮೇಣವ್ಯಕ್ತವಾಗಿಹುದು ೯

ಭಾವದೊಳವ್ಯಕ್ತ ಕೇವಲ-
ವಾವಿಭೂತಿಯುಯೆಂದು ಶರಣರು
ಭೂವಲಯದೊಳಿಷ್ಟ ಪ್ರಾಣಂ ಭಾವಲಿಂಗವನು
ಆವಗಂ ಸೃಷ್ಟಿಸಿಯುಪಾಸನೆ
ಭಾವುಕರು ಗೈಯಲ್ಕೆ ರಚಿಸಿಹ-
ರಾಪವರ ಸನ್ಮಾರ್ಗದಿಂ ಸದ್ಭಕ್ತಿಯೆಸಗುವದು ೧೦

ವ್ಯಕ್ತರೂಪವೆಇಷ್ಟಲಿಂಗವು
ವ್ಯಕ್ತ ಮೇಣವ್ಯಕ್ತ ಪ್ರಾಣವು
ವ್ಯಕ್ತವಾಗದ ನಿಃಕಲವೆ ಸಲೆ ಭಾವಲಿಂಗವದು
ವ್ಯಕ್ತದಿಷ್ಟವ ಕರದಿ ಪೂಜಿಸಿ
ಸೂಕ್ತ ಪ್ರಾಣವ ಮನದಿ ಧ್ಯಾನಿಸಿ
ಭಕ್ತಿಯಿಂ ಸಮರಸವ ಪೊಂದ್ವುದು ಭಾವಲಿಂಗದೊಳು ೧೧

ಇದುವೆ ತಾ ಶಿವಯೋಗವೆಂಬುವ-
ರಿದಕೆ ಮುಖ್ಯವದಿಷ್ಟಲಿಂಗವು
ಮುದದೊಳಿಷ್ಟವ ಮನದಿ ನೆನೆದೊಡೆ ಪ್ರಾಣಲಿಂಗವಲಾ
ಅದನೆ ಭಾವದಿ ಬೆರಸಿ ಸಮರಸ-
ವೊದವಿದೊಡೆ ಸಲೆ ಭಾವಲಿಂಗವು
ಅದಕೆ ಬೇಕೆಮಗಿಷ್ಟಲಿಂಗವು ಭಕ್ತಿಬೆಳೆಸಲ್ಕೆ ೧೨

ಭಕ್ತಿಯಿಲ್ಲದ ಜ್ಞಾನಮುಂಟೆ ?
ಭಕ್ತಿಯಿಲ್ಲದ ಜ್ಞಾನ ಶುಷ್ಕವು
ಭಕ್ತಿಯಿಲ್ಲದೆ ಜ್ಞಾನ ಸಾಕ್ಷಾತ್ಕಾರವಾಗುವುದೆ ?
ಭಕ್ತಿಯಿಂದನುಭವವು ಬೆಳೆವುದು
ಭಕ್ತಿಜ್ಞಾನಕೆ ಮೂಲಹೇತುವು
ಭಕ್ತಿಯಿಂ ಕಡೆಗಣಿಸಿನೋಡುವರೇನು ಮರುಳಯ್ಯ ೧೩

ಕಂಡು ಕೇಳಿದೊಡಪ್ಪುದೇನೈ
ಉಂಡು ಪಾಯಸವನ್ನು ತಣಿವುದು
ಕಂಡು ಗುರುವಂ ಕೇಳಿ ಬೋಧೆಯ ಜ್ಞಾನಮಾಗುವದೇ ?
ಕಂಡು ಕರದೊಳಗಿಷ್ಟಲಿಂಗವ
ಅಂಡಲೆವ ಮನವನ್ನು ನಿಲ್ಲಿಸಿ
ಉಂಡುಜ್ಞಾನಾಮೃತವ ಭಾವದಿ ತಣಿವುದೇ ಭಕ್ತಿ ೧೪

ಪಂಚಮದ ಪುರುಷಾರ್ಥವೆಂಬರು
ಪಂಚಿಕೆಯೊಳಾಭಕ್ತಿಭಾವಕೆ
ಮಿಂಚುತಿದೆ ಸದ್ಭಕ್ತಿ ಜ್ಞಾನದ ಕೊನೆಯ ಮೇಲೆಸೆದು
ಕೊಂಚಕೊಂಚವ ಗಳಿಸಿ ಭಕ್ತಿಯ
ಸಂಚಯುವ ಮಾಡಿದೊಡೆ ಮನಸಿನ
ಚಂಚಲತೆ ತಾ ನೀಗಿ ನಿಶ್ಚಲಜ್ಞಾನ ತಾನಕ್ಕು ೧೫

ಭಕ್ತಿಯಿಲ್ಲದೆ ಕಾಣಲಾಗದು
ಭಕ್ತಿಯಿಲ್ಲದೆ ತಿಳಿಯಲಾಗದು
ಭಕ್ತಿಯಿಲ್ಲದೆ ಬೆರೆಯಲಾಗದು ಪರಮವಸ್ತುವಿನೋಳ್
ಭಕ್ತಿಯೇ ನಿಜಮುಕ್ತಿಸಾಧನ
ಭಕ್ತಿಯೇ ಜ್ಞಾನಕ್ಕೆ ಪೋಷಣ
ಭಕ್ತಿಯಿಲ್ಲದ ತರ್ಕಜ್ಞಾನಕೆ ಕಾಣದಾ ವಸ್ತು ೧೬

ಶರಣಬಸವನು ಭಕ್ತಿಯಿಂದಲೆ
ಧರೆಯೊಳಗೆ ಕೀರ್ತಿಯನು ಪಡೆದನು
ಶರಣಬಾವುಟವೇರಿಸಿದನಾ ಭಕ್ತಿಪಂಥದಲಿ
ಹಿರಿದುಕಿರಿದೆನ್ನದಲೆ ಸರ್ವರು
ಅರಿದು ಭಕ್ತಿಯ ಕಲೆಯ ಹರ್ಷದಿ
ಮೆರೆದರಾ ಕಲ್ಯಾಣನಗರದಿ ಭಕ್ತಿಸಮರಸದಿ ೧೭

ಸುಲಭವಲ್ಲವು ಜ್ಞಾನಮಾರ್ಗವು
ಸುಲಭವಲ್ಲವು ಕರ್ಮಪಂಥವು
ಸುಲಭವಲ್ಲವು ಯೋಗಸಾಧನೆ ಬೇಡವವು ನಿಮಗೆ
ಸುಲಭ ಸುಲಲಿತ ಸುಂದರವು ಮೇಣ್
ಕಲೆಯ ಸೊಬಗಿನೊಲೊಪ್ಪುವಾ ಶಿವ
ನೊಲುಮೆಗೊಂದೇ ಭಕ್ತಿಮಾರ್ಗವು ಬೇಕು ಮರುಳಾದರ್ ೧೮

ನಾನೆ ಶಿವನೆಂದೆಂಬರೇತಕೆ ?
ಜ್ಞಾನಿಗಳು ಹಾ ಎಂಥ ಗರ್ವವೊ !
ನೀನು ಶಂಕರನಲ್ಲ ಶರಣರ ಕಿಂಕರನು ನಿಜವು
ನೀನು ಕಿಂಕರನಾಗದಲೆ ಸಲೆ
ನೀನು ಶಂಕರನೆಂದುಕೊಳ್ವರೆ ?
ನಾನು ಶರಣರ ಕಿಂಕರನುಯೆಂದೆಂಬುದೇಭಕ್ತಿ ೧೯

ನಾನುಯೆಂಬೀ ಅಲ್ಪ ಜೀವನು
ತಾನೆ ಶಿವನೆಂದೆನ್ನಬಹುದೇ?
ನಾನುಯೆಂಬಜ್ಞಾನ ದುರಹಂಕಾರಗಳು ಪೋಗೆ
ತಾನೆ ಉಳಿವುದು ಶುದ್ಧ ಚೇತನ
ಜ್ಞಾನಿಗಳ್ ತಾವ್ ಕರೆದರಾತಗೆ
ಸ್ವಾನುಭವದಿಂ ಸಚ್ಚಿದಾನಂದಾತ್ಮನಿವನೆಂದು ೨೦

ಅನುದಿನಂ ಶಿವಪೂಜೆ ಸುಜ್ಞಾರೆ
ಅನುಭವಾಮೃತಪಾನ ಶರಣರ
ನೆನಹು ಶ್ರೀ ಗುರುಲಿಂಗಜಂಗಮವರರ ಪದಸೇವೆ
ದಿನದಿನವು ಶುಭಚಿಂತನೆಯು ಮೇಣ್
ಮನದೊಳಗೆ ಪರಶಿವನ ಧ್ಯಾನವು
ಕೊನೆಯುವರೆಗಾಚರಿಸುವುದೆ ನಿಜಭಕ್ತಿಯೊಂದೆಂಬೆ ೨೧

ಲಿಂಗ ಪೂಜೆಯು ಯೋಗಸಾಧನೆ-
ಯಂಗವಾಗಿದೆ ಯೋಗಿಗಳ್ಗಲೆ
ಲಿಂಗದೊಳೇಕಾಗ್ರದೃಷ್ಟಿಯನಿರಿಸಿ ಭಕ್ತಿಯೊಳು
ಲಿಂಗರೂಪಿಗಳಾಗುವರು ದಿಟ
ಭೃಂಗಕೀಟನ್ಯಾಯದಂದದಿ
ಲಿಂಗ ವಿಶ್ವವನೊಂದುಗೊಳಿಸುವ ದಿವ್ಯಸಾಧನವು ೨೨

ಬಿಸೆಲೊ ಕರ್ಮದ ಹಾದಿಯಂ ನೀಂ
ಬಿಡು ಬಿಡೈ ಹಠಯೋಗಸಾಧನ
ಹಿಡಿಯಬೇಡೈ ನೇತ್ರಿಗಳಿಯುವ ಜ್ಞಾನಮಾರ್ಗವನು
ಮೃಡನ ಪೂಜಾಧ್ಯಾನಸಮರಸ-
ದೊಡನೆ ಸಾಗುವ ಭಕ್ತಿಮಾರ್ಗವ
ಹಿಡಿದು ಸಾಗೈ ಕಡೆತನಕ ಸೊಗವಕ್ಕು ಮರಳಾರ್ಯ ೨೩

ನಂಬಿ ನಡೆವರಿಗುಂಟು ಶ್ರೇಯವು
ನಂಬಿ ನಡೆವರಿಗುಂಟು ಶಾಂತಿಯು
ನಂಬಿ ನಡೆವರಿಗುಂಟು ಸುಖಸೌಲಭ್ಯಗಳು ನಿಜವು
ನಂಬಿನಡೆವುದೆ ಭಕ್ತಿಮಾರ್ಗವು
ನಂಬಿಗೆಯು ಪ್ರಿಯವಹುದು ಶಿವನಿಗೆ
ನಂಬಿಗೆಗೆ ನೀ ಮೂಲಭಾವನೆಯೆಂದು ತಿಳಿಯುವರೇ ? ೨೪

ಗುರುವರನ ಕೃಪೆಯಿಂದೆ ನಿನ್ನಾ
ಶಿರದ ಚಿತ್ಕಳೆ ಬಂದು ನಿನ್ನಯ
ಕರದಿ ಪೂಜೆಯಕೊಳ್ಳುತಿದೆ ತಾ ಲಿಂಗರೂಪಾಗಿ
ಕುರುಹೆ ಲಿಂಗವು ಸ್ವಸ್ವರೂಪದ
ಬರಿದೆ ಕ್ಷೇತ್ರಂಗಳಿಗೆ ಪೋಪರು
ಅರುವಿನಿಂದಿದ ನಂಬರೇತಕೆ ಮರುಳ ಮಾನವರು ? ೨೫

ಅರಳಿ ಮರ ಬೇವಿನ ಮರಂಗಳ
ತಿರು ತಿರುಗಿ ಸುತ್ತಿಪ್ಪರೇತಕೆ
ಹರನ ರೂಪದ ಚರರಿಗಿಂ ಪಿರಿದಾದುವೇ ತರುಗಳ್ ?
ಗುರುಚರರ ಪಾದಕ್ಕೆ ಭಕ್ತಿಯೊ-
ಳೆರಗಿದೊಡೆ ಸುಜ್ಞಾನ ಜ್ಯೋತಿಯು
ಸ್ಫುರಿಸುವದು ಹೃನ್ಮಂದಿರದಿ ಶಿವಯೋಗಬಲದಿಂದ ೨೬

ಹೊಳೆಯೆಡೆಗೆ ಜನ ಪೋಗಿ ಹಿಗ್ಗುತೆ
ಮುಳುಮುಳುಗಿಯೇಳುವುದದೇತಕೆ ?
ಹೊಳೆಗಳೇಂ ತಾ ವೀಯಬಲ್ಲುವೆ ಬೇಡಿದಿಷ್ಟಗಳ
ತೊಳಗಿ ಬೆಳಗುವ ಲಿಂಗಮುಂ ತಾ-
ವೆಳೆಯತನ ತಾರುಣ್ಯ ಮುಪ್ಪುಗ-
ಳೊಳು ಕರವಿ ಪೂಜಿಸಲು ಬೇಡಿದ ಭಾಗ್ಯ ತಮಗಕ್ಕು ೨೭

ಮಾರಿಮಸಣಿಯು ದುರ್ಗಿ ಚಂಡಿಯು
ಊರದೇವತೆ ಭದ್ರಕಾಳಿಯು
ಕ್ರೂರದೈವಂಗಳಿವು ಕುರಿಕೋಳಿಗಳ ಬೇಡುವವು
ವೀರಶೈವರು ಲಿಂಗವಿರುತಿರೆ
ಸಾರುವರೆ ದೇವತೆಗಳತ್ತಂ ?
ಸೇರ ಬೇಕಿಷ್ಟದೊಳು ಮನವೊಂದಾದ ಭಕ್ತಿಯಲಿ ೨೮

ಹೊಲೆಯು ಲಿಂಗಕ್ಕಿಲ್ಲ ತಿಳಿ ನೀ
ಕುಲವು ಲಿಂಗಕ್ಕಿಲ್ಲ ಸ್ವಾರ್ಥದ
ನೆಲೆಯು ಲಿಂಗಕ್ಕಿಲ್ಲ ತರತಮಭಾವಕೆಡೆಯಿಲ್ಲ
ಕೆಲರ ಬಾಧಿಸಿ ಕೆಲರನೇರಿಸಿ
ಛಲವ ಸಾಧಿಪಯುಕ್ತಿಯಿಲ್ಲವು
ಹೊಲೆಯನಿಂ ವಿಪ್ರನವರೆಗೆ ಲಿಂಗಾಂಗಿಗಳು ಸಮರು ೨೯

ಮಡಿಯು ಮೈಲಿಗೆಯಿಲ್ಲ ಲಿಂಗಕೆ
ಕೆಡಕು ಘಟನೆಗಳಿಲ್ಲ ಲಿಂಗಕೆ
ಒಡಕು ಧೋರಣೆ ಕಪಟ ಕುಟಿಲಗಳಿಲ್ಲ ಲಿಂಗಕ್ಕೆ
ದುಡಿಮೆ ನೆರವುಗಳುಂಟು ಲಿಂಗದಿ?
ಬಡವಬಲ್ಲಿದರುಂಟೆ ಲಿಂಗದಿ
ಒಡೆಯ ಸೇವಕರುಂಟೆ ಲಿಂಗದಿ ಸಮತೆಯೊಂದಿರಲು ೩೦

ಗುರುವಿಗೀಯಲು ಬೇಕು ತನುವಂ
ಹರನಿಗೀಯಲು ಬೇಕು ಮನವಂ
ಚರನಿಗೀಯಲು ಬೇಕು ಧನವನ್ನ ವಡುವೆ ನಿಜಭಕ್ತಿ
ಅರಿವರಿದ ದಾಸೋಹತ್ರಿವಿಧವ
ಶರಣ ಮಾರ್ಗಿಗಳದನು ಜಗದೊಳು
ಹರಡಿದರು ಮಾನವತೆಯಾ ಸುಖಶಾಂತಿಹಿತಕಾಗಿ ೩೧

ತನುವ ಬೆಳಗುವದಯ್ಯ ಸತ್ಕ್ರಿಯೆ
ಮನವ ಬೆಳಗುವದಯ್ಯ ಜ್ಞಾನವು
ವಿನುತ ಭಾವವ ಬೆಳಗುವದು ಸ್ವಾನುಭವವೆಂಬುವದು
ತನುಮನೋಭಾವಂಗಳೆಲ್ಲವು
ವಿನತ ಭಕ್ತಿಯನರಸಿಕೊಂಡಿವೆ
ಜನಕೆ ಭಕ್ತಿಯ ಭಾವಕಿಂ ಮಿಗಿಲಿಲ್ಲ ಬೇರೊಂದು ೩೨

ಲಿಂಗವಾತ್ಮೋದ್ಧಾರ ಚಿಹ್ನವು
ಲಿಂಗ ಗೃಹಸುಖದಾಸರವು ಮೇಣ್
ಲಿಂಗ ತನ್ನ ಸಮಾಜ ರಾಷ್ಟ್ರದ ಏಳಿಗೆಯ ಕರುಹು
ಲಿಂಗಕಾವುದು ಸರಿಯು ಜಗದೊಳು ?
ಲಿಂಗ ವಿಶ್ವಪ್ರೇಮದ್ಯೋತಕ
ಲಿಂಗ ಜಗದಾತ್ಮರುಗಳತ್ತಿ ಸುಖಶಾಂತಿಕಾರಣವು ೩೩

ಲಿಂಗವೇ ಪರಬೊಮ್ಮವಾಗಿದೆ
ಲಿಂಗವಂ ಕಲ್ಲೆಂದು ಜರಿವರೆ?
ಲಿಂಗದರ್ಥವನರಿಯದಿಹ ಪಾಮರನು ನೀನಲ್ತೆ?
ಲಿಂಗ ಜಗವಂ ತುಂಬಿಬಿಟ್ಟಿದೆ
ಲಿಂಗದೊಳ್ಜಗವೆಲ್ಲವೆಡಗಿದೆ
ಲಿಂಗಭಕ್ತಿಗೆ ಮಿಗಿಲು ತಾ ಬೇರುಂಟೆ ಜಗದಲ್ಲಿ ೩೪

ಲಿಂಗ ಶರಣರು ಮಂಗಲಾಂಗರು
ತುಂಗ ಸುಖಶಾಂತಿಗಳ ಲೋಕಕೆ
ಸಿಂಗರಿಸಿದರು ಸ್ವಾರ್ಥದುರಹಂಕಾರಕೆಡೆಗೊಡದೆ
ಅಂಗದೋಳ್ ಲಿಂಗವನು ಧರಿಪರ
ಸಂಗನೆಂದೇ ಬಸವ ತಂದೆಯು
ಪಿಂಗದನುರಾಗದೊಳು ಕರೆದನು ಲಿಂಗ ಕೇವಳಮೆ ? ೩೫

ಹರನ ಭಕ್ತಿಯದೊಂದೆ ಜಗದಲಿ
ಪರಮ ಪ್ರಿಯವೆಂದೇಕ ಕಂಠದೊ -
ಳೊರೆಯುತಿವೆ ಸರ್ವಾಗಮಂಗಳು ಭಕ್ತಿ ಕೇವಳಮೆ ?
ಹರನ ಕೃಪೆಯಿಂ ಭಕ್ತಿ ಜನಿಪುದು
ಪರಮ ಭಕ್ತಿಗೆ ಹರನು ಮೆಚ್ಚುವ-
ನಿರದೆ ಬೀಜಾಂಕುರದವೋಲಿವೆಯೆರಡು ಮರುಳಾರ್ಯ ೩೬

ಬೆಕ್ಕು ತನ್ನಯ ಮರಿಯು ಮೆಂವೆನೆ
ಅಕ್ಕರದಿ ಮೂಲೆಯೂಡಿ ತಣಿಪುದು
ಚೊಕ್ಕ ಭಕ್ತನು ಸಂಕಟದಿ ತಾ ಬಿಕ್ಕಿಯಳುತಿರಲು
ಕಕ್ಕುಲತೆಯಿಂ ಬಂದು ಶಿವ ತಾ-
ನುಕ್ಕುತಿಹ ವಾತ್ಸಲ್ಯದಿಂದವ-
ಗಿಕ್ಕುವಂ ಅಭಯಪ್ರಸಾದವ ನಂಬು ನೀನದನು ೩೭

ಭಕ್ತಿಯಿಂ ಸಾರಿದನು ನಾರದ
ಭಕ್ತಿಯೋಳ್ಮಿಗಿಲಾದ ಮಾರುತಿ
ಭಕ್ತಿಯಿಂ ಪ್ರಲ್ಹಾದಧ್ರುವರುನ್ನತಿಯ ಪಡೆದಿಹರು
ಭಕ್ತಿಯಿಂ ಸಲೆ ಸಾಧುಸಂತರು
ಮುಕ್ತರಾದರು ಭಕ್ತಿಕಲೆಯಿಂ
ಯುಕ್ತಿಯಿಂ ಸಾಮಾನ್ಯ ಜನತೆಗೆ ಕಲಿಸಿ ಸುಖಿಸಿದರು ೩೮

ನಾದಮೋಹಿಯು ಶಂಭುವೆಂಬರು
ನಾದಮಾಡಿದ ರಾವಣನು ಸಲೆ
ಪೋದನರ್ಧಾಯುಷದಿ ರಾಮನ ಬಾಣದಿಂ ಕೊನೆಗೆ
ನಾದದಿಂ ಮಿಗಿಲಹುದು ಭಕ್ತಿಯು
ನಾದ ಸುಂದರವಾದೊಡೇನೈ
ಮೇದಿನಿಗೆ ಶಿವ ಭಕ್ತಿಪ್ರಿಯನೆಂದೆಂಬುದೇ ಸತ್ಯ ೩೯

ಶಿವನು ವೇದಪ್ರಿಯನುಯೆಂಬರು
ತವೆ ಪುಸಿಯು ನಾಭಿಜನು ವೇದಗ-
ಳವಿರತಂ ಸಂಸ್ಮರಿಸುತಿರೆ ಶಿವನೊಂದು ಶಿರವವನ
ತವಕದಿಂದರಿದಿರ್ದನೇತಕೆ ?
ಭುವನದೊಳ್ ಸದ್ಭಕ್ತಿಯೊಂದೇ
ಶಿವನಿಗೆಲ್ಲಕ್ಕಿಂತ ಪ್ರಿಯಕರವೆಂಬುದಿದು ದಿಟವು ೪೦

ನೆರೆಯು ಕೆನ್ನೆಗೆ ತೆರೆಯು ಗಲ್ಲಕೆ
ಬರಲು ದೇಹಕೆ ಸುಕ್ಕುಕವಿದಿರೆ
ಪರನ ಸ್ಮರಣೆಯನಾಗ ಗೈವುದದೆಂತು ಸಾಧ್ಯವಲಾ
ಪರರ ಹಂಗಿನೊಳಾಳ್ವಮುನ್ನವೆ
ಸ್ಮರಿಸು ಪೂಜಿಸು ಇಷ್ಟಲಿಂಗವ
ಕರುಣಿಪನು ಶಿವನಂತ್ಯಕಾಲದಿ ನಂಬು ಮರುಳಾಯ್ ೪೧

ಭಕ್ತ ಭಕ್ತರೊಳೈಕ್ಯ ಚಂದವು
ಯುಕ್ತಿಸಹಕಾರಗಳು ಚಂದವು
ಶಕ್ತಿಸಂಘಟನೆಗಳು ಚಂದವು ಪ್ರೇಮವಳೆಪಟ್ಟು
ಭಕ್ತರಿಗೆ ಭಕ್ತರು ಸಹಾಯವ
ಮುಕ್ತಹಸ್ತದಿ ನೀಡಬೇಕೈ
ಭಕ್ತರಿಗೆ ಆಪತ್ತು ಬರೆ ನೀಗುವುದು ಬಹು ಚೆಂದ ೪೨

ಇದುವೆ ಭಕ್ತಿಯ ತತ್ತ್ವ ತಿಳಿ ನೀಂ
ಮುದದಿ ಮೈಯೊಳು ಪುಲಕವೇಳಲು
ಉದುರಲಶ್ರುಗಳವನ ನುಡಿಗದ್ಗದಿತವಾಗಿರಲು
ಎದೆಯು ಪ್ರೇಮದಿ ಸೂಸುತಿರೆ ನಾ-
ನದನು ನಿಜದಿಂ ಭಕ್ತಿಯೆನ್ನೆನು
ಹೃದಯವೆಲ್ಲರದೊಂದುಗೂಡಲು ಭಕ್ತಿ ನಿಜವಕ್ಕು ೪೭

ಶರಣರಿದನೇ ಸಾಧಿಸಿದರೈ
ಶರಣಪಂಥವೆ ಸರ್ವಶ್ರೇಷ್ಠವೈ
ಶರಣಪಂಥವು ಕೂಡಿಹುದು ಸುವಿಚಾರದಿಂ ತಿಳಿಯೈ
ಬರಿದೆ ಬಂದಾವೇಶದಿಂದಲೆ
ಪರಿಪರಿದು ಕುಣಿದಾಡಿ ಪಾಡುವ
ಬರಡುಭಕ್ತಿಗೆ ಶರಣುಹೊಡೆದರು ನೋಡು ನಮ್ಮವರು ೪೮

ಪೇಳಿದರು ಸದ್ಭಕ್ತಿಮಹಿಮೆಯ
ಮೇಳದಿಂ ಬೂದೀಶಮಹಿಮರು
ಕೇಳಿ ನಾವಾಚರಿಸದಿರ್ದೊಡೆ ನಿಷ್ಪ್ರಯೋಜನವು
ಬಾಳು ಹಸನಾಗಲ್ಕೆ ಭಕ್ತಿಯು
ಬಾಳಬೇಕಿಹದೋಳ್ನಿರಂತರ
ಬೀಳುಗಳವರೆ ಮೂಢಭಾವನೆಯೆಂದು ಭಕ್ತಿಯನು ? ೪೯

**ಅಂತು ಹದಿನೇಳನೆಯ ಸಂಧಿಗೆ ೧೪೯ ಪದ್ಯಕ್ಕೆ ಮಂಗಲಮಕ್ಕುಂ**
**ಭದ್ರಂ ಶುಭಂ ಮಂಗಲಂ**

ಶ್ರೀಗುರುಬಸವಲಿಂಗಾಯ ನಮಃ

# ಹದಿನೆಂಟನೆಯ ಸಂಧಿ

ಸೂಚನೆ- ಚರರು ಬಂದರು ಕುರ್ತಕೋಟಿಗೆ
ಚರಿಸಿ ಸಿದ್ಧರಮಟ್ಟಿತಾಣಕೆ
ನೆರೆದು ಹೊಸಹಳ್ಳಿಯೊಳು ಬಯಲಾಗಿರ್ದರ್ರೈ ಕೊನೆಗೆ

**ಕುರ್ತಕೋಟಿ**

ಬೂದಿಯೋಗಿಯು ಕುರ್ತಕೋಟಿಗೆ
ಸಾದರದೊಳಾಗಮಿಸಿ ಗ್ರಾಮದ
ಮೋದವುಕ್ಕಿಪ ರಮ್ಯವಾದುದ್ಯಾನವಂ ಸಾರ್ದು
ಜಾದಿಮಲ್ಲಿಗೆ ಬಿಲ್ವಸಂಪಗೆ
ಕೇದಿಗೆಯು ದಾಸಾಳವೇ ಮೊದ-
ಲಾದ ಕಂಪಿನ ಪತ್ರಪುಷ್ಪಸಮೇತ ಕಂಗೊಳಿಪ ೧

ಚೆಂದವಾದಾ ತಾಣದೊಳ್ಸಲಿ
ಮಿಂದು ಮಜ್ಜನಗೈದು ಲಿಂಗಕೆ
ಸಂದದಿಂ ಪೂಜಾಮಹೋತ್ಸಾಹದೊಳು ಮೈಮರೆದು
ಮುಂದೆ ಕೆಲದಿನವಲ್ಲಿ ಸಂತಸ-
ದಿಂದಿರಲು ಜನವೃಂದ ಯೋಗಿಗೆ
ವಂದಿಸುತೆ ಭಕ್ತಿಯೊಳು ಪರ್ಣಕುಟೀರ ರಚಿಸಿದರು. ೨

ಗುಡಿಸಲಿಗೆ ಬೇಕಾದ ಬೇವಿನ
ಗಿಡದ ಒಣಕಂಬವನು ನಡಿಸುತೆ
ಎಡಬಲಕೆ ಮೇಲೆಲ್ಲ ಹುಲ್ಲಿನ ಹೊದಿಕೆ ಮಾಡಿದರು
ಗುಡಿಸಲೊಳ್ಕೆಲದಿನವು ಯತಿಗಳು
ಮೃಡನನುಷ್ಠಾನದೊಳು ಸಾಗಿರೆ
ಗಿಡವ ಕೊರಡದು ಚಿಗಿತು ಹೆಮ್ಮರವಾಯ್ತು ತತ್ಪ್ರಭೆಯಿಂ ೩

ಗ್ರಾಮದೊಳಗೆರಡೋಣಿಯಿರ್ಪವು
ಸ್ವಾಮಿಸನ್ನಿಧಿಗೊಂದು ಓಣಿಯ
ನೇಮಕರು ಬಂದೊಂದು ದಿನ ಪಾದಕ್ಕೆ ಬೇಡಿದರು
ಸ್ವಾಮಿವರ್ಯರೆ ನಾಳೆ ನಮ್ಮಯ
ಆ ಮಹಿಮ ಬಸವೇಶಪೂಜೆಗೆ
ನೇಮಿಸಿದ ಗಣಪರ್ವಕೈತರಬೇಕು ತಾವುಗಳು ೪

ಎನಲು ಸಮ್ಮತಿಯಿತ್ತರಾಗಳೆ
ಎನುತ ಬೂದೀಯೋಗಿಗಳ್ಸಲೆ
ವಿನಯದಿಂ ಮತ್ತೊಂದು ಓಣಿಯ ನಾಯಕರು ಬಂದು
ಮುನಿಗಳೆಮ್ಮಯ ಬಸವಪೂಜೆಗೆ
ಅನುಮತಿಸಿ ಬರಬೇಕು ನಾಳೆನೆ
ಜನಿತ ಹರ್ಷದಿ ಪೇಳ್ದರವರಿಗೆ ಆಗಲಿಂತೆಂದು ೫

ಮಾರುದಿನಂ ಬಂದೋಣಿಯವರಾ
ಗುರುವರನ ಕರೆದೊಯ್ದು ಪೂಜೆಗೆ
ಸುರುವು ಮಾಡಿರಲಾಗಲಲ್ಲಿಗೆ ಬಂದರಾತುರದಿ
ಎರಡನೆಯ ಓಣಿಯ ಜನಂಗಳು
ಗುರುವೆ, ಬರಬೇಕೆನಲು ತಕ್ಷಣ
ತೆರಳಿರೀಕ್ಷಣ ಬಂದಪೆವು ನಾವಲ್ಲಿ ಮುಂಚಿತವೆ ೬

ಎಂದೆನಲು ಹೊರಟಿರ್ದರಲ್ಲಿಂ
ಮುಂದೆಯಾ ಓಣಿಯ ಜನಂಗಳು
ಬಂದು ಪೂಜೆಗೆ ಕುಳಿತಿಹರು ಮೊದಲಲ್ಲಿ ಯೋಗಿಗಳು
ಸಂದ ನಿಬ್ಬೆರಗಿನೊಳು ಕೂಡಿದ
ಮಂದಿಯುದ್ಗಾರವನು ತೆಗೆದರು
ಅಂದುಸ್ವಾಮಿಗಳೆರಡು ತಾಣದೊಳೇಕ ಕಾಲದಲಿ ೭

ತೋರಿಹುದು ಬಹು ಸೋಜಿಗವಲಾ !
ಯಾರು ಬಲ್ಲರು ಬೂದಿಯೋಗಿಯ
ಚಾರುತರ ಬಹುರೂಪ ಮಹಿಮೆಯನೀ ಧರಾತಳದೊಳ್
ಭೂರಿ ಸಂತಸಗೂಡಿ ಭಕ್ತಿಯ
ಸೂರೆಗೈದರು ಹೊಗಳಿ ಮಹಿಮೆಯ
ಮಾರಹರನವತಾರಿಗಸದಳವಾವುದೀ ಜಗದಿ ೮

ಒಂದು ದಿನ ಜಂಗಮನದೋರ್ವನು
ಬಂದು ಯೋಗಿಗೆ ಬೇಡಿಕೊಂಡನು
ತಂದೆ, ನಾ ಬಹು ದೈವಹೀನನು ನನಗೆ ಧನವಿಲ್ಲ
ಇಂದು ನನ್ನಯ ಮಗನ ಮದುವೆಗೆ
ಸಂದಿದೊಡೆ ಐನೂರು ರೂಪಾಯ್
ಬಂದ ಕಾರ್ಯವು ಸಫಲಮಪ್ಪುದು ಕರುಣಿಸೆಂದೆನಲು ೯

ಏನುಮಾಡಲಿ ಜಂಗಮಾರ್ಯನೆ
ನಾನು ಬಡವನು ದುಡ್ಡು ದೊರೆಯದು
ಸಾನುರಾಗದಿ ಧನಿಕರಂ ಬೇಡಿದೊಡೆ ದೊರೆದೀತು
ಜ್ಞಾನಿಗಳ ನುಡಿಗೇಳಿ ಜಂಗಮ-
ನಾನತನು ತಾನಾಗಿ ಪುನರಪಿ
ನೀನೆ ಗತಿಯೆನಗಾರು ಕೊಡುವರು ? ಎನಲು ದೈನ್ಯದಲಿ ೧೦

ಆಗ ಜಂಗಮನನ್ನು ಯೋಗಿಯು
ಬೇಗದಿಂ ಕರೆದೊಯ್ದು ಅಡವಿಗೆ
ನಾಗರಾಜನ ಕರೆದು ಹೆಡೆಯೊಳಗಿರ್ದ ರತ್ನವನು
ಈಗ ಜಂಗಮಗೀಯ ಬೇಕೆನೆ
ನಾಗನಾಕ್ಷಣ ಜಂಗಮನ ಮುಂ-
ಭಾಗದೊಳ್ ಹರಿದಾಡಿ ಬರೆ ಭಯಗೊಂಡು ದಿಕ್ಕೆಟ್ಟು ೧೧

ಓಡುತಿರೆ ಕರೆದನವನ ಯೋಗಿಯು
ನೋಡು ನೀ ಬಹು ಭಾಗ್ಯಹೀನನು
ಕಾಡುತಿಧೆ ವಿಧಿ ನಿನಗೆ ಶ್ರೀ ನಾಗೇಂದ್ರನೇ ಬಂದು
ನೀಡುತಿಹ ರತ್ನವನು ತೊರೆದಿಹೆ
ಬೇಡಬಿಡು ರತ್ನವನು, ಹಾವನು
ನಾಡೆ ಕರದಿಂ ಸ್ಪರ್ಶಿಸೆನ್ನಲು ಒಲ್ಲೆನೆಂದಾತ ೧೨

ಕಡೆಗೆ ಯೋಗಿಯು ಜಂಗಮನ ಕರ-
ವಿಡಿದೆಳೆದು ಪನ್ನಗನ ಬಾಲವ
ಪಿಡಿಸೆ ಸ್ವರ್ಣಶಲಾಕೆ ಕಳಚಿಹುದಾಕ್ಷಣದಿ ಚರನು
ಒಡನೆ ತಾನದ ಕೊಂಡು ಹಿಗ್ಗುತೆ
ನಡೆದಿಹನು ಪುತ್ರನ ವಿವಾಹಕೆ
ಒಡೆಯರೆಂಬರು ಬೆನ್ನು ಬಿದ್ದವರನ್ನು ಕೈಬಿಡರು ೧೩

## ಸಿದ್ಧರಮುಟ್ಟಿ

ಪರಮ ಗುರುವರ ಬೂದಿಮಾಹೇ-
ಶ್ವರನು ಸಿದ್ಧರಮುಟ್ಟಿ ತಾಣಕೆ
ತ್ವರಿತದಿಂದಾಗಮಿಸಿ ರಮ್ಯೋದ್ಯಾನದೊಳ್ನಿಂದ
ಚರಿಸಿದರು ತಪವನ್ನು ಸಿದ್ಧರು
ಸರಸವಾದೀ ಸ್ಥಲದಿ ಹಿಂದಕೆ
ಕರೆವರದರಿಂದದಕೆ ಸಿದ್ಧರಮುಟ್ಟಿಯೆಂತೆಂದು ೧೪

ವಾಸಗೈದಿಹನಿಲ್ಲಿ ತಾ ಬಹು-
ದೀಶನತಿ ಹರ್ಷದಲಿ ಕೊನೆಯಲಿ
ಸೂಸುತಿರೆ ಮೈಕಾಂತಿ ಸ್ವರ್ಣದ ತೆರದಿ ಮುಪ್ಪಿನಲಿ
ದೇಶಕೋಶಗಳೆಲ್ಲ ತಿರುಗಿದೊ-
ಡೀ ಸುರಮ್ಯ ಸ್ಥಾನದಿಂ ಮಿಗಿ-
ಲಾಸರವು ಬೇರೊಂದು ತನಗಿಲ್ಲೆಂದು ಮನಗಂಡು ೧೫

ಇದುವಲಾ ಶ್ರೀಶೈಲಪರ್ವತ-
ವಿದುವಲಾ ಶಿವಗಂಗೆ ಹಂಪಿಯು
ಇದು ಉಳಿವೆ ಕೇದಾರ ರಾಮೇಶ್ವರವು ಗೋಕರ್ಣ
ಇದು ಮಹಾತಾಪಸರ ಸದನವು
ಇದರೊಳಿದ್ದವರೆಲ್ಲ ಪುಣ್ಯಾ-
ಸ್ಪದರು ಈ ಅಂಗಣವೆ ಕಾಸೀವಾಸ ಕೈಲಾಸ ೧೬

ಎಂದೆನುತ ನಿಂದಲ್ಲಿ ಪ್ರಭುದಯೆ-
ಯಿಂದ ಮುಪ್ಪಡಸಿರ್ದ ದೇಹವ
ನಂದದಿಂದೀಡಾಡಿ ಯೋಗಾನಂದ ಸಮರಸವ
ಹೊಂದಿ ಲಿಂಗದೊಳೈಕ್ಯವಾ-
ಗಲ್ಕೆಂದು ದೃಢ ನಿಶ್ಚಯವಗೈದನು
ಇಂದುಧರನವತಾರಿಯೆನಿಸಿದ ಬೂದಿಯೋಗೀಂದ್ರ ೧೭

ಒಂದು ದಿನ ಬೂದೀಶಯೋಗಿಯು
ನಂದದಿಂ ಕುಳಿತಿರಲು ಬನದೊಳು
ಬಂದನೈ ಸಂಗನಬಸವನೆಂಬೋರ್ವ ಸದ್ಭಕ್ತ
ವಂದಿಸಿದನಾ ಯೋಗಿಪಾದಕೆ-
ನಿಂದು ಕೈಮುಗಿದಿಂತು ಕೇಳ್ದನು
ಕಂದುಗೊರಲನೆ ಬಂದು ನಿಂದಿಹನೆಂದು ಭಾವಿಸುತೆ ೧೮

ಆವ ಪುರ ತಪ್ಪುದು ಮಹಾತ್ಮರೆ ?
ಆವುದೈ ಭವದೀಯ ನಾಮವು ?
ಆವ ಕಾರಣದಿಂದಲೀ ತಾಣಕ್ಕೆ ಬಂದಿಹಿರಿ ?
ಭಾವಿಪೊಡೆಯಿದು ಘೋರ ಕಾನನ
ಸೋವುತಿಪೆ ಬೇಂಟೆಯನು ಪುಲಿಗಳು
ಕಾವರಾರ್ ನಿಮ್ಮನ್ನು ಪೂಜ್ಯರೆ ಇಂಥ ತಾಣದೊಳು ೧೯

ಕೇಳಲಾತನು ಯೋಗಿ ನುಡಿದನು
ಕೇಳು ನಾನು ನಿರಾಳಪುರದವ
ಪೇಳುವುದು ಜನ ನನಗೆ ಬೂದೀಯೋಗಿಯೆಂತೆಂದು
ಪೇಳಲೇನೀ ರಮ್ಯತಾಣದಿ
ಬಾಳಿ ಶಿವನೊಳೈಕ್ಯ ಹೊಂದಲು
ಮೇಳವಿಸಿ ಬಂದಿಹೆನು ತಿಳಿ ನೀಂ ಭಕ್ತಿಗುಣಮಣಿಯೆ ೨೦

ಇದುವೆ ಸಿದ್ಧರಮಟ್ಟ ಪೂರ್ವದೊ-
ಳಿದರೊಳಿರ್ದರು ಯೋಗಸಿದ್ಧರು
ಮುದದಿ ಗೈದರು ಜಪ ತಪೋನುಷ್ಠಾನವನ್ನೊಪ್ಪ
ಸದಮಲರು ಶಿವತತ್ತ್ವವೇತ್ತರು-
ಪೊದೆದು ಚಿತ್ಸುಖಲೋಲರಾಗಿರು-
ತಿರ್ದರೀ ತಾಣದೊಳು ಹಿಂದಕೆ ಒಬ್ಬರಿಲ್ಲೀಗ ೨೧

ಮರಗುವದು ಮನವೆನ್ನ ಭಕ್ತನೆ
ತಿರುಗುತಿರೆ ತಾ ಕಾಲಚಕ್ರವು
ತಿರುಳು ಜೊಳ್ಳಾಗುವದು ಪೊಳ್ಳದು ಹುರುಳು ತಾನಕ್ಕು
ವರ ತಪೋವನವಿದುವೆ ಹಿಂದಕೆ
ಒರಿಯ ಕಾಡಾಗಿರ್ಪುದಿಂದಿಗೆ
ಪರಮಸಿದ್ಧಿಯ ದಿಂವಿ ನೆಡೆಯುವದುಂಟೆ ಜಗದಲ್ಲಿ ? ೨೨

ಎಂದು ಮರಗುವ ಯೋಗಿಯನ್ನಭಿ-
ವಂದಿಸುತೆ ಕೇಳಿದನು ಭಕ್ತನು
ವಂದಿಸಾ ನೆನಹನ್ನು ಮನದೊಳು ತಾರದಲೆ ನನ್ನ
ಮಂದಿರಕೆ ಬಂದೀಗ ಪೂಜೆಯ
ನಂದದಿಂ ಕೊಂಬುವುದು ಪೂಜ್ಯರೆ
ಎಂದು ನುಡಿಯಲ್ಕಾತನುದ್ಧರಿಸಲ್ಕೆ ಮುಂದಾಗಿ ೨೩

ಭಕ್ತನಾಜ್ಞೆಯೆ ದೇವನಾಜ್ಞೆಯು
ಭಕ್ತದೇಹವೆ ನನ್ನ ತನು ಮಮ
ಭಕ್ತಜೀವನವೆನಗೆ ಪಾವನವೆಂದು ಬೂದೀಷೆ
ಮುಕ್ತಿಪದದಾವುಗೆಯ ಮೆಟ್ಟುತೆ
ಯುಕ್ತಮಾಗಿರೆ ಯೋಗಪಟ್ಟಿಗೆ
ಸೂಕ್ತದಿಂ ತಾ ಕರಕಮಂತಲವಿಡಿದು ನಡೆತಂದ ೨೪

ಚರವರಗೆ ಸತಿಪತಿಗಳೀರ್ವರು
ಪರತರದ ಸತ್ಕಾರಗೈದರು
ಹರುಷದಿಂ ಹೊರೆಯೇರಿದನು ಶಿವಯೋಗಿಕುಲತಿಲಕ
ಕರುಣದಿಂದೀರ್ವರನು ನೋಡುತ
ಸರಸದಿಂದೀ ನುಡಿಯ ನುಡಿದನು
ವರಭಕುತ ಸಂಗನಬಸವ ಪರಮಾಂಬೆ ಧನ್ಯರಲಾ ೨೫

ಶರಣ ಸಂಗನ ಬಸವ ನಿನ್ನಾ-
ಪಾರದ ಭಕ್ತಿಯ ಕಂಡು ನಿಮ್ಮೆಡೆ
ಬರಲು ಸತಿಪತಿಯಿರ್ವರೊಂದೇ ಭಾವದಿಂ ನಿನ್ನ
ಪರಮಪೂಜೆಗೆ ಸರ್ವವಳವಡಿ-
ಸಿರಲು ಪೂಜೆಯ ತೀರ್ಚಿ ನಾಂ ಸಲೆ
ಹರನತೀರ್ಥ ಪ್ರಸಾದವಂ ಕೈಕೊಂಡು ಸುಖಿಸಿದೆನು ೨೬

ನಿನ್ನ ಭಾಗ್ಯವು ಬೇಗ ಬೇಳೆಯುವ-
ದಿನ್ನು ಸಕಲೈಶ್ವರ್ಯ ಮನೆಯೊಳ-
ಗುನ್ನತೋನ್ನತವಾಗಿಯೊಡೇರುವುದಿದಲ್ಲದಲೆ
ಮುನ್ನ ಮಾಡಿದ ಪುಣ್ಯದಿಂದು-
ತ್ಪನ್ನನಾಗುವನೊಬ್ಬ ಮಗ ನೀಂ
ಧನ್ಯನಾಗುವೆ ಧನಿಕಪುತ್ರನ ಪಡೆದು ಗುಣಶಾಲಿ ೨೭

ಮಾನಿ ತೋತ್ತಮನಾಗು ಜಗದೊಳು
ಹೀನವಿಷಯಕೆ ಮನವ ಕೊಡದಿರು
ನಾನು ನೀನೆಂದೆಂಬ ಹೆಮ್ಮೆಯನುಳಿದು ಲೌಕಿಕದಿ
ಜ್ಞಾನಿಯಾಗಿರು ಮನೆಗೆ ಜಂಗಮ
ತಾನು ಬರೆ ಪ್ರಭುದೇವನೆಂದೇ
ನೀನು ಸೇವೆಯ ಸಲ್ಲಿಸೈ ಸಲೆ ಸಂಗನಾಬಸವಾ ೨೮

ಹಿಂದೆ ಕೆಲದಿನವೀಸ್ಥಳದಿ ನಾಂ
ಹೊಂದಿಕೊಂಡಿರುತಿರ್ದ ಕಾಲದೊ-
ಳೊಂದು ಆಲದ ಸಸಿಯನಾಂ ನಟ್ಟಿರ್ದೆ ಮನದಂದು
ಇಂದಿಗೆಷ್ಟು ಪ್ರಮಾಣ ಬೆಳೆದಿಹು-
ದೆಂದು ನೋಡುವ ಪ್ರೀತಿಯೆನ್ನೊಳು
ಸಂದಿಹುದು ಮನ ತವಕಿಸುತ್ತಿದೆಯದನು ನೋಡಲ್ಕೆ ೨೯

ಪೋಗುವಾ ನಡೆಯೆಂದು ಯೋಗಿಯು
ಸಾಗಿದನು ತಾನೂರ ಹೊರಗಣ
ಭಾಗದತ್ತೆಡೆ ಬಂದು ನೋಡಲು ಮರವು ಟೊಂಗೆಸಿತು
ಯೋಗಿ ಹರುಷದಿ ಪುಲಕಗೊಂಡನು
ಸೋಗಿನಿಂ ಬೆಳೆದಿರ್ದ ವಿಸ್ತರ-
ವಾಗಿ ಶೋಭಿಪ ಆಲದಾ ಮರವನ್ನು ಕಂಡೊಡನೆ ೩೦

ಆಸನವ ಹಾಕಿದರು ಗಿಡದಡಿ
ವಾಸಮಾಡಲು ಸ್ಥಾನವಿದು ಬಹು
ಲೇಸೆನುತ ತುಂಗಿರ್ದರಲ್ಲಿಯೆ ನಮ್ಮ ಯತಿವರರು
ಏಸೊ ಭಕ್ತರು ಕೂಡಿ ಸಹಜದಿ
ವಾಸಕೊಂದು ಕುಟೀರಮಂ ಗಡ
ಭಾಸುರತ್ಮನಿಗಾಗಿ ವಿರಚಿಸಿ ಬಿಟ್ಟರಾ ಸ್ಥಳದಿ ೩೧

ಯತಿವರಗೆ ಸಂಗನಬಸವ ತಾ-
ನತಿಭಕುತಿಯೊಳ್ಬೇಡಿಕೊಂಡನು
ವಿತತಕೀರ್ತಿಯೆ ನಾನು ತಮಗೇಂ ದಾನ ಸಲ್ಲಿಸಲಿ ?
ಅತಿಮುದದೊಳಪ್ಪಣೆಯ ಕೊಡಿರೆನೆ
ಮಿತವಚನಿಗಳು ಪೇಳ್ದರಾತಗೆ
ಸುತನೆ ಕೇಳ್ನೀನೀ ಕಮಂಡಲ ನೀರು ಸುರಿವಷ್ಟು ೩೨

ಭೂಮಿಯನು ಕಾಣಿಕೆಯ ಕೊಡುಯೆಂ-
ದಾ ಮಹಾಯತಿ ನುಡಿಯಲಾಕ್ಷಣ
ಕಾಮಿತಾರ್ಥವ ಪೂರಯಿಸೆ ಪಿಡಿದಾ ಕಮಂಡಲವ
ಸೀಮೆಯಿಂ ಮೊದಲ್ಗೊಂಡು ನೀರಂ
ಭೂಮಿಯೋಳ್ ಹೊಯ್ಯುತಿರಲಾ ಸ್ಥಳ-
ವಾ ಮಹಾಸನ್ನಿಧಿಗೆ ಸಲ್ಲಿತು ನಾಲ್ಕುವರೆಯೆಕರೆ ೩೩

ಒಂದು ಸಾವಿರದೇಳು ನೂರ್‌ಮೇ-
ಣ್ಮುಂದೆ ಇಪ್ಪತ್ತನೆಯ ಶಕೆಯೊಳು
ಸಂದ ಶುಭ ಮೂರ್ತದೊಳು ಮಠ ಪ್ರಭು ಗದ್ದುಗೆಗಳಿರವು
ಚಂದವಾದೀ ಕ್ಷೇತ್ರದೊಳ್ನಿಲೆ
ನಿಂದವಲ್ಲಿಯೆ ವೈಭವದಿ ಬಹು
ಮಂದಿ ಯಾತ್ರಿಕರಲ್ಲಿ ಬಂದುರು ಭಕ್ತಿಸಲಿಸುವರು ೩೪

ಬೂದಿಮಠದೊಳ್ಬೂದಿ ಯೋಗಿಯು
ಮೋದದಿಂ ನೂರಾರು ವರ್ಷವ-
ಸಾಧಿಸಿರ್ದರು ಯೋಗಮಂ ಬಹು ಕಠಿಣ ರೀತಿಯಲಿ
ಚೋದ್ಯವಿದು ಒಮ್ಮೊಮ್ಮೆ ನಿಶ್ಚಲ-
ಮಾದ ಯೋಗಸಮಾಧಿಯೊಂದ್ವರು
ನಾದಬ್ರಹ್ಮದಿ ತನ್ಮಯರು ತಾವಾಗಿ ಷಣ್ಮಾಸ ೩೫

ಬೆಳಗಿನೊಳ್ ಶಿಶುವಾಗಿ ನಲಿವರು-
ಬೆಳಗುವರು ಮಧ್ಯಾಹ್ನ ಪ್ರೌಢರು
ಬಳಿಕ ಸಾಯಂಕಾಲ ವೃದ್ಧಾವಸ್ಥೆದಾಳುವರು
ಹೊಳೆವ ಕೆಂಜಡೆ ನೊಸಲ ಭಸ್ಮದಿ
ಬಿಳಿಯಗಡ್ಡದಿ ತೊಳಪ ತೇಜದಿ
ಇಳೆಯ ಭೂತೇಶ್ವರನೊಯೆಂಬಂತೆಸೆಯುತಿರ್ದಪರು ೩೬

ಒಂದು ದಿನ ನಿಶ್ಚಲಸಮಾಧಿಯ
ನೊಂದಿ ಕುಳಿತಿರೆ ಚಿನ್ನಪ್ಪನೆಂಬುವ
ಬಂದು ಯೋಗಿಯು ಕುಳಿತ ಕೋಣೆಗೆ ಬೀಗ ಹಾಕಿದನು
ಮಂದಮತಿ ಕಡು ಮೂರ್ಖನಾತನು
ಮುಂದೆ ತೋಟಕೆ ಬಂದು ನೋಡಲು
ನಂದದಿಂ ನೂರಾರು ಬೂದೀಶ್ವರರ ಕಂಡಿಹನು ೩೭

ಕುಸುಮ ಪತ್ರಿಗಳೆತ್ತುತಿರ್ಪರು
ಅಸಮ ಮಹಿಮರು ಬಹುಲ ರೂಪದಿ
ಬಸವಳಿದ ಚಿನ್ನಪ್ಪನಾಗದ ಕಂಡು ಬೆರಗಾಗಿ
ಪೊಸತು ಜಗಕಿದೆನುತ್ತೆ ಧಾವಿಸಿ
ಎಸೆವ ಯೋಗಾಲಯವ ತೆರೆಯಲು
ನುಸುಳಿ ತಾನಲ್ಲಿಂದ ಯೋಗಿಯು ವಾಯುವಾಗಿಹನು ೩೮

ಬೆಂದು ಪಶ್ಚಾತ್ತಾಪದಿಂ ತಾ
ನೊಂದು ಮನದಲಿ ಯೋಗಿಪಾದಕೆ
ವಂದಿಸುತೆ ಕ್ಷಮೆ ಕೇಳಿಕೊಂಡನು ನಮ್ರಭಾವದಲಿ
ಬಂದ ಮೂರ್ಖನ ಶಿಕ್ಷಿಸದೆ ಗಡ
ನಂದದಿಂದಾಶೀರ್ವದಿಸಿ ಯತಿ-
ಯಂದು ಕಳಿಸಿದನಯ್ಯ ಮಹಿಮರು ಮಹಿಮರೇ ದಿಟವು ೩೯

ನಾಗಲಿಂಗಾರೂಢ ಬಂದನು
ಯೋಗಿಯೆಡೆಗಪರೂಪವಾಗಿಯೆ
ಬೇಗದಿಂ ಕೇಳಿದನು ನೀ ಮುಂದೆಷ್ಟುದಿನ ಬಾಳ್ವೆ ?
ಯೋಗಿಗಳ್ ಬಹು ಜೀವಗಳ್ಳರು
ಸಾಗಿಪರು ಜೀವನವ ಬಹುದಿನ
ತ್ಯಾಗಮಾಡೀ ಜೀರ್ಣದೇಹವ ತಡವದೇಕೆನಲು ೪೦

ವರನಿರಂಜನ ಮೂರ್ತಿ ಭಕ್ತರ
ಕರೆದು ತಾನೊಂದು ದಿನ ಪೇಳ್ದನು
ತೆರಳುವೆವು ನಾವಿನ್ನು ಶಿವನೆಡೆ ತೊರೆದು ಲೋಕವನು
ಶರಣ ಮಾರ್ಗವ ಪಿಡಿದು ನಡೆಯಿರಿ
ಪರಮ ಕಾಯಕವನ್ನು ಚರಿಸಿರಿ
ಉರುತರದ ದಾಸೋಹ ಭಕ್ತಿಯ ನಡೆಸಿರೆಂದೆನುತೆ ೪೧

ಚರವರೇಣ್ಯರು ತಾವು ಇಚ್ಛಾ-
ಮರಣಗಳು ಲೀಲೆಯಲಿ ಲಿಂಗದಿ
ಬೆರೆವರೊಂದು ದಿನವರು ಶಿಖಿ ಕರ್ಪೂರ ನ್ಯಾಯದೊಲು
ನೆರೆದು ಭಕ್ತರು ಬೂದಿಯೋಗಿಗೆ
ಮೆರುವ ಗದ್ದುಗೆಯನ್ನು ವಿರಚಿಸೆ
ಪರಮಜಾಗ್ರತತಾಣವಾಗಿಹುದಿಂದಿಗದು ನೋಡಾ ೪೨

ಒಂದುಸಾವಿರದೊಂಟು ನೂರ್ಮೋ-
ಣ್ಮುಂದೆ ಮೂವತ್ತನೆ ಶತಾಬ್ದದಿ
ಅಂದವಾದುಗ್ಮೆಯು ಲಿಂಗದಿ ಯೋಗಮಾರ್ಗದೊಳು
ಸಂದಿ ಹೋದರು ಯೋಗಮುಪಿಮರು
ಒಂದೆ ಯೋಗಧ ಬಲವನಿಟ್ಟರು
ಸಂದ ತಮ್ಮ ಸಮಾಧಿಯೊಳ್ ಜನಹಿತಕೆ ಕರುಣಿಗಳು ೪೩

ರೋಗ ರುಜಿನಗಳಾಪದಂಗಳ
ನೀಗಿಕೊಳ್ವರು ಭೂತ ಪ್ರೇತದ
ಬೇಗ ಭೀತಿಯು ಕಳೆದುಕೊಳ್ವರು ಇಷ್ಟಸಿದ್ಧಿಗಳು
ಸಾರುವಂದದಿ ಬೇಡಿಕೊಂಬರು
ಯೋಗಿವರ ತಾ ಸ್ಥೂಲ ಕಾಯವ
ನೀಗಿದೊಡು ನಿರುತಂ ಸುಚಿನ್ಮಯನಾಗಿ ಶೋಭಿಪನು ೪೪

ಪ್ರತಿವರುಷ ಬೂದೀ ರಥೋತ್ಸವ-
ವತಿ ವಿಜೃಂಭಣೆಯಿಂದ ಶ್ರಾವಣ
ತಿಥಿಯೊಳನುಪಮ ಮಠದಿ ಪೌರಾಣಾದಿಗಳು ಸಹಿತ
ಸತತ ತಿಂಗಳವರೆಗೆ ನಡೆವವು
ವಿತತ ಭಕ್ತ ಸಮೂಹದೊಂದಿಗೆ
ಪ್ರತಿದಿನಾ ಗಣಪರ್ವ ಜರುಗುವದಖಿಳ ಜನಹಿತಕೆ ೪೫

ಬೂದಿ ಸ್ವಾಮಿಗಳಾದ ಬಳಿಕಾ
ಬೂದಿ ಮಠ ಪೀಠಾಧಿ ಕಾರವ-
ನೈದಿದರು ನಾಲ್ಕು ಜನ ಕ್ರಮದಿಂ ಪುಣ್ಯಶಾಲಿಗಳು
ಬೋಧೆ ದಾಸೋಹಾದಿಕ್ರಿಯೆಗಳ
ಮೋದದಿಂ ಸಾಗಿಸುತೆ ಬಂದರು
ಪಾದಪೂಜ್ಯರ ಮಹಿಮೆಯುಂ ನಾನೆಂತು ಬಣ್ಣಿಪೆನು ೪೬

ಮೊದಲು ಹೆಬಸೂರ್ ಓರೆಯ ಮಠವಾ
ಸದಮಲ ಶ್ರೀ ಬಸವಲಿಂಗರು
ವಿದಿತ ಪೂಜಾನಿಷ್ಠರೈ ವಾಕ್ಸಿದ್ಧಿ ಪುರುಷರೆಲಾ
ಪದುಳದಿಂ ದಾಸೋಹ ನಡೆಸುತ
ಮುದವ ಬೀರುತೆ ಭಕುತವೃಂದಕೆ
ಹೊದೆದು ಕಟುವೈರಾಗ್ಯವನ್ನಧಿಕಾರ ನಡೆಸಿದರು ೪೭

ಬೆಳೆದಡಿಯ ಹಿರಮಠದೊಳಿರ್ದಾ
ಬೆಳೆಸಿರಿಯು ಶ್ರೀ ಪಟ್ಟದಾರ್ಯರು
ತೊಳಪ ಬೂದೀಮಠಕೆ ಮೂರನೆಯಧಿ ಪತಿಗಳಹರು
ಪೊಳೆವ ಬೂದಿರಥೋತ್ಸವವ ಸಲೆ
ಆಳವಡಿಸಿದರು ಪೂಜ್ಯಪಾದರು
ತಿಳಿಯೆ ಲಿಂಗಾನುಭವಿಗಳ್ದಾಸೋಹಮೂರ್ತಿಗಳು ೪೮

ನವಿಲುಗುಂದದ ಕೋಣನಕೆರೆಯ
ಶಿವಮಠದ ಶ್ರೀ ಸಿದ್ಧಲಿಂಗರು
ತವೆ ಶುಭ ಶ್ರೀ ಬೂದಿಮಠಕೆ ಚತುರ್ಥನಾಯಕರು
ಶಿವಕೃಪೆಯ ಪಡೆದವರು ಶ್ರೀಮಠ–
ಕವರು ಪಾಲಿಕೆಮೇಣೆ ಮೊದಲಾ–
ದವುಗಳಂ ಮಾಡಿಸಿದರರವತ್ತೆರಡನೆಯ ವಯದಿ ೪೯

ಬಳಿಕ ಬೂದೀಶ್ವರನ ಪೀಠದೊ-
ಳಳವು ತಿಳಿವುಳ್ಳಾತ್ಮಜ್ಯೋತಿಯು
ಬೆಳಗುತಿರ್ಪುದು ಶ್ರೀ ಪ್ರಭುಸ್ವಾಮಿಗಳ ಹೆಸರಿಂದೆ
ಕೆಲವು ವರ್ಷಂ ಸ್ವಾಮಿವರ್ಯರು
ಬೆಳಗಿ ಹುಬ್ಬಳ್ಳಿಯ ಹೊಸಮಠವ
ಬಳಿಕ ದಾವಣಗೆರೆ ವಿರಕ್ತಮಠಕ್ಕೆ ಸಂದಿಹರು ೫೦

ಕೊನೆಗೆ ಶ್ರೀ ಹೊಸಪಳ್ಳಿ ಗ್ರಾಮದ
  ವಿನುತ ಬೂದೀಶ್ವರ ಮಠಕೆ ಸಲೆ
  ಅನುಘ ಶ್ರೀ ಪ್ರಭುಸ್ವಾಮಿಗಳು ಅಧಿಕಾರಿಯಾಗಿಹರು
  ಘನತರದ ಅನುಭಾವಮಂಟಪ-
  ವನು ವಸತಿಗೃಹ ಯೋಗನಿಲಯುವ-
  ನನುಗೊಳಿಸಿ ತಸ್ಮಠದ ಭವ್ಯದ್ವಾರ ರಚಿಸಿಪರು ೫೧

ಶಾಲಿವಾಹನ ಶಕೆಯು ಮಾಘದಿ
  . ಲೋಲ ಸಿತಪಂಚಮಿಯು ಶುಭದಿನ
  ಕಾಲ ಪದಿನೊಂಬ್ನೂರು ತೊಂಬತ್ತನೆಯ ವತ್ಸರದಿ
  ಮೂಲ ಶ್ರೀ ಬೂದೀಶ ಯೋಗಿಯ
  ಲೀಲೆಯೀ ಚರಿತವನು ಮುಗಿಸಿದ-
  ನೋಲಯಿಸಿ ಸದ್ಭಕ್ತ ಕಲ್ಯಾಣಪ್ಪ ಕವಿಭೃತ್ಯ ೫೨

ವರಮಹೋನ್ನತ ಬೂದಿಯೋಗಿಯ
  ಚರಿತವನು ಬರೆದೋದಿಯಾಲಿಸಿ
  ಸ್ಮರಿಸಿದೊಡೆ ಸಂಪತ್ತು ಸಕಲೇಷ್ಟಾರ್ಥಸಿದ್ಧಿ ಸುಗು
  ಹರುಷದಿಂ ಚಿರಕಾಲ ಬಾಳುವ
  ಹರಕೆಯಂ ಬೂದೀಶನೀವನು
  ಧರಣಿಯೊಳ್ಬೆಳಗಲಿ ಚಿರಂತನ ಬೂದಿ ಚರಿತವಿದು ೫೩

ಮಂಗಲಂ ಬೂದೀಶ ಯೋಗಿಗೆ
  ಮಂಗಲಂ ಸುಜ್ಞಾನ ಸಾಂದ್ರಗೆ
  ಮಂಗಲಂ ಲೀಲಾವಿನೋದಗೆ ಯೋಗಬಲಯುತಗೆ
  ಮಂಗಲಂ ಲಿಂಗಾಂಗ ಸಮರಸ-
  ಸಂಗಿಗಾನಂದದೊಳು ನಾಂ ಸಲೆ
  ಮಂಗಲವ ಪಾಡುವೆನು ಶಿವಯೋಗಾತ್ಮನಿಗೆ ನಿರುತ ೫೪

ಅಂತು ಹದಿನೆಂಟನೆಯ ಸಂಧಿಗೆ ೧೧೫೩ ಪದ್ಯಕ್ಕೆ ಮಂಗಲಮಸ್ತು

ಭದ್ರಂ ಶುಭಂ ಮಂಗಲಂ